ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್ ಸ್ಟಾಪ್ ಬಳಿ, ಬಸವೇಶ್ವರನಗರ ಮೇನ್ ರೋಡ್, ಬೆಂಗಳೂರು - 560 079.

## ವೈವಾಹಿಕ/ ವರ್ಗೀಕೃತ ಜಾಹೀರಾತು ಅರ್ಜಿ ನಮೂನೆ

ದಯವಿಟ್ಟು ಈ ಕೆಳಗಿನ ವೈವಾಹಿಕ/ ವರ್ಗೀಕೃತ ಜಾಹೀರಾತನ್ನು ನಿಮ್ಮ ಮಾಸ ಪತ್ರಿಕೆಯ ಮುಂಬರುವ......................... ತಿಂಗಳ ಸಂಚಿಕೆಯಲ್ಲಿ ಪ್ರಕಟಿಸಿ.

| | | | | |
|---|---|---|---|---|
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |
| | | | | |

- ಜಾಹೀರಾತಿನ ವಿಷಯ 50 ಶಬ್ದಗಳನ್ನು ಮೀರಬಾರದು.
- ಶಬ್ದಗಳು ಕಡಿಮೆ ಇದ್ದರೆ ದಪ್ಪ ಅಕ್ಷರಗಳಲ್ಲಿ ಎದ್ದು ಕಾಣುವಂತೆ ಪ್ರಕಟಿಸಲು ಸಾಧ್ಯ.
- ವೈವಾಹಿಕ/ವರ್ಗೀಕೃತ ಜಾಹೀರಾತಿನ ದರ ರೂ. 100.
- ವಿಷಯವು 50 ಶಬ್ದಗಳಿಗಿಂತ ಹೆಚ್ಚಿದ್ದರೆ 2 ಜಾಹೀರಾತುಗಳೆಂದು ಪರಿಗಣಿಸಲಾಗುವುದು. ಹೆಚ್ಚುವರಿ ವಿಷಯವನ್ನು ಪ್ರತ್ಯೇಕ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಬೇಕು.
- ವೈವಾಹಿಕ ಜಾಹೀರಾತಿನೊಂದಿಗೆ ವಿಳಾಸ ಪ್ರಕಟಿಸುವುದಿಲ್ಲ. ಬಾಕ್ಸ್ ನಂಬರ್ ಶುಲ್ಕ ರೂ. 50ನ್ನು ಕಡ್ಡಾಯವಾಗಿ ಕಳಿಸಬೇಕು.

**ಜಾಹೀರಾತು ಮೊತ್ತ ರೂ........... ನಗದಾಗಿ ಅಥವಾ ಅಂಕುರ ಪ್ರಕಾಶನದ ಹೆಸರಿನಲ್ಲಿ ಡಿ.ಡಿ. (ನಂ................ ದಿನಾಂಕ.....................**

**ಬ್ಯಾಂಕ್.........................) ಅಥವಾ ಎಂ. ಓ (ಸಂಖ್ಯೆ................ ದಿನಾಂಕ......................)ಮೂಲಕ ಸಂದಾಯ ಮಾಡಲಾಗಿದೆ.**

ಜಾಹೀರಾತುದಾರರ ಪೂರ್ಣ ವಿಳಾಸ :...................................................................................................

...................................................................................................

...................................................................................................

ಪಿನ್ ಕೋಡ್:............................. ದೂರವಾಣಿ ಸಂಖ್ಯೆ:.................................

ಜಾಹೀರಾತುದಾರರ ಸಹಿ/ ದಿನಾಂಕ

---

**ಕಚೇರಿ ಬಳಕೆಗೆ:**

ಬಾಕ್ಸ್ ನಂಬರ್ :

ಕೊನೆ ದಿನಾಂಕ :

ಪ್ರತಿಕ್ರಿಯೆಗಳನ್ನು ರವಾನಿಸಿದ್ದು : ಅಂಚೆ/ಕೊರಿಯರ್

ಬಿಸಿಲ
ಬದುಕು

ನವೆಂಬರ್ 1998 ಸಂಪುಟ 2 ಸಂಚಿಕೆ 5

ಸಂಪಾದಕ
ಚಂದ್ರಕಾಂತ ವಡ್ಡು

ಉಪ ಸಂಪಾದಕರು
ಅರವಿಂದ ನಾವಡ, ರವಿಶಂಕರ್
ಎ.ಎಂ.ಸುರೇಶ್

ನಿರ್ವಹಣೆ
ಸಿ.ಪಿ. ಸುರೇಶ್

ಪ್ರಸಾರ
ಹೆಚ್.ಎಂ.ಪಿ. ಆರಾಧ್ಯ

ಅಕ್ಷರ ಜೋಡಣೆ
ನರೇಂದ್ರ ಪಾಟೀಲ, ಕೋಕಿಲ

ಮುಖ ಪುಟ ವಿನ್ಯಾಸ
ಹರಿಹರನ್

ವಿಳಾಸ
ಬಿಸಿಲ ಬದುಕು ಮಾಸಪತ್ರಿಕೆ
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ: 7951
ಬಸವೇಶ್ವರ ನಗರ, ಬೆಂಗಳೂರು-560 079
ದೂರವಾಣಿ: 3307810

Printed, Published and Owned by Chandrakanta Vaddu, 473, I Cross,I Block, III Stage, Near Water Tank Bus Stop, Basaveshwaranagar, Bangalore - 560 079. Tel : 080 3307810 Pager : 9622 738638 Printed at M.N.S.Enterprises, Bhattar ahalli, Old Madras Road, Bangalore - 49 Editor : Chandrakanta Vaddu

## ಅದೇ ಹಾಡು ಅದೇ ಪಾಡು

ನವೆಂಬರ್ ಮತ್ತೆ ಬಂದಿದೆ. ತನ್ನೊಂದಿಗೆ ಕನ್ನಡದ ನೆನಪು ತಂದಿದೆ. ಈ ಸಂದರ್ಭದಲ್ಲಿ ರಾಜ್ಯದ ಜನರ ಹಿತಾಸಕ್ತಿಗೆ ಸಂಬಂಧಿಸಿದ ವಿಚಾರಗಳನ್ನು ವಾಸ್ತವದ ಒರೆಗೆ ಹಚ್ಚುವುದು ಉಚಿತ. ಜನರ ಬದುಕನ್ನು ಹಸನುಗೊಳಿಸುವ ವಚನದೊಂದಿಗೆ ಅಧಿಕಾರ ಗದ್ದುಗೆಗೇರಿದ ಸರ್ಕಾರ ನಿಜಕ್ಕೂ ಜನರ ಭಾವನೆಗಳಿಗೆ ಸ್ಪಂದಿಸುತ್ತಿದೆಯೇ? ತಾಯ್ನುಡಿಗೆ ಸಂಬಂಧಿಸಿದಂತೆ ಕನ್ನಡಿಗರ ದೈನಂದಿನ ವರ್ತನೆಗಳು ಹೇಗಿವೆ? ಪ್ರಪಂಚವೇ ಪ್ರತಿಪಾದಿಸುತ್ತಿರುವ ಮಾತೃಭಾಷಾ ಶಿಕ್ಷಣದ ಮಹತ್ವ ಈ ನೆಲದಲ್ಲೇಕೆ ನಿರೀಕ್ಷೆಯ ಪ್ರಮಾಣದಲ್ಲಿ ಮೊಳೆಯುತ್ತಿಲ್ಲ? ಕನ್ನಡವನ್ನು ಕಾಪಾಡಲೆಂದೇ ರಚನೆಗೊಂಡ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಏನು ಮಾಡುತ್ತಿದೆ? ಹೀಗೆ ಉದ್ಭವಿಸುವ ಸರಣಿ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಾ ಸಾಗಿದರೆ ನಿರಾಶೆಯ ನಿಲ್ದಾಣ ತಲುಪುತ್ತೇವೆ. ಈ ಬೆಳವಣಿಗೆ ಭವಿಷ್ಯದಲ್ಲಿ ಕಟ್ಟಿಕೊಡುವ ಕೇಡುಗಳನ್ನು ಈಗಲೇ ಧ್ಯಾನಿಸಿ ವೈಯಕ್ತಿಕ ನೆಲೆಯಲ್ಲಿ ಸಾಮೂಹಿಕ ಸ್ತರದಲ್ಲಿ ಕಾರ್ಯಪ್ರವೃತ್ತರಾಗದಿದ್ದರೆ ನಮ್ಮನ್ನು ಇನ್ಯಾರೂ ಕಾಪಾಡಲಾರರು.

ರಾಜ್ಯೋತ್ಸವ ಹತ್ತಿರವಾಗುತ್ತಿದ್ದಂತೆಯೇ ಕನ್ನಡದ ಹಲವು ಚೇತನಗಳು ನಮ್ಮಿಂದ ದೂರವಾಗಿರುವುದು ದುಃಖದ ಸಂಗತಿ. ಮಾತು ಮುಗಿಸುವ ಮೊದಲೇ ಮೌನವಹಿಸಿದ ಡಾ.ಡಿ.ಆರ್.ನಾಗರಾಜ್, ಅವರನ್ನು ಹಿಂಬಾಲಿಸಿದ ಚದುರಂಗ, ಸತ್ಯಕಾಮ, ಪು.ತಿ.ನ., ರಾಮರಾವ್ ನಾಯಕರು ನಮ್ಮನ್ನಗಲಿ 'ತುಂಬಲಾಗದ ನಷ್ಟ' ಉಂಟು ಮಾಡಿದ್ದಾರೆ ಎಂಬ ಉತ್ಪ್ರೇಕ್ಷೆಯ ಶ್ರದ್ಧಾಂಜಲಿ ಅರ್ಪಿಸುವ ಜಾಯಮಾನ ನಮ್ಮದು. ಇಂಥ ಅರೆಸತ್ಯದ ನುಡಿಗಟ್ಟು ಬಳಸುವ ಮೂಲಕ ನಾಡಿನ ವರ್ತಮಾನ ಹಾಗೂ ಭವಿಷ್ಯ ಎರಡನ್ನೂ ನಿಕೃಷ್ಟವಾಗಿ ಕಾಣುವ ಬದಲು ಈ ಹಿರಿಯರ ಸಾಧನೆಯನ್ನೇ ಸ್ಫೂರ್ತಿಯಾಗಿಸಿಕೊಂಡು ಅಗಲಿದ ಜೀವಿಗಳಿಗೆ ಅರ್ಥಪೂರ್ಣ ನಮನ ಸಲ್ಲಿಸಲು ಸಾಧ್ಯ.

ಇತ್ತೀಚೆಗೆ ಎಪ್ಪತ್ತು ದಾಟಿದ ಕಾದಂಬರಿಕಾರ ದು.ನಿಂ. ಬೆಳಗಲಿ ಅವರು ಸಹಜ ಪ್ರತಿಭೆ ಹಾಗೂ ಸಜ್ಜನಿಕೆಯ ವರ್ತನೆಯಿಂದ ಜನಮಾನಸ ಗೆದ್ದವರು. ಸಾಹಿತ್ಯರಾಜಕೀಯದ ಹತ್ತಿರವೂ ಸುಳಿಯದೆ ಸತ್ವಯುತ ಸಾಹಿತ್ಯ ಸೃಷ್ಟಿಸಿ ಸೈ ಎನ್ನಿಸಿಕೊಂಡ ಜೀವ ಇದು. ಅವರಿಗೆ ಸಲ್ಲುವ ಅರ್ಹ 'ಅಭಿನಂದನೆ'ಗೆ ಮೂಗುಮುರಿಯುವವರು ಸಿಗಲಾರರು.

-ಸಂಪಾದಕ

# ಸರಸ ವಾರ್ತೆ



ಈ ಚಿತ್ರ ನೋಡಿ ನಿಮ್ಮ ಬಾಯಿಂದ ಅಯ್ಯೋ ದೇವರೆ ಇದು ಎಂಥಾ ವೇಷವಯ್ಯಾ, ಅನ್ನೋ ಉದ್ಗಾರ ಹೊರಬಿದ್ದಿರಬಹುದಲ್ಲ. ಇದು ಯಾರದೋ ಹೊಟ್ಟೆ ಪ್ರದರ್ಶನವೋ ಅಥವಾ ಕನಿಷ್ಠ ದರ್ಶನವೋ ಅಂತಾ ನಿಮ್ಮ ಊಹೆ. ಆದರೆ ಅವರೆಡೂ ಅಲ್ಲ. ಇವರು 'ಬಿಕಿನಿಯಲ್ಲಿ ಗರ್ಭಿಣಿ' ಅನ್ನೋ ಸ್ಪರ್ಧೆಯಲ್ಲಿ ಭಾಗವಹಿಸ್ತಾ ಇರೋ ತುಂಬು ಗರ್ಭಿಣಿಯರು. ಈ ವೇಷದಲ್ಲಿ ನೇರವಾಗಿ ತೀರ್ಪುಗಾರರ ರೂಮಿನ ಕಡೆಗೆ ಈ ಮಂದ ಗಜಗಮನೆಯರ ಹೆಜ್ಜೆ. ಯಾಕಂದ್ರೆ ಗರ್ಭಿಣಿಯರು, ಮೊದಲೇ ಭಾರ ಜೊತೆಗೆ ಒಳಗಿರೋ ಆ ಕೂಸಿನ ಭಾರ! ಹಾಗಾಗಿ ನಡಿಗೆನೂ ಮಂದ. ಹೀಗಾಗಿ ಮಂದ- ಗಜ-ಗಮನೆಯರು. ವೆಲ್ಲಿಂಗ್‌ಟನ್‌ನಲ್ಲಿ ನಡೆದ ಸ್ಪರ್ಧೆಗೆ ಇವರು ಸಾಗುವಾಗ ಸಂಚಾರ ವ್ಯವಸ್ಥೆಯಲ್ಲಾ ಅಸ್ತವ್ಯಸ್ತ. ನಮ್ಮ ರಸಿಕರ ಅಭಿಪ್ರಾಯ ಇದರ ಬಗ್ಗೆ ಏನು ಗೊತ್ತಾ? ಅಯ್ಯೋ ಬಿಡಿಸ್ವಾಮಿ, ಈ ಲೋಕಾನೇ ಅಸ್ತವ್ಯಸ್ತ. ಅದ್ರಲ್ಲಿ ಈ ಸಂಚಾರ ವ್ಯವಸ್ಥೆ ಏನು ಮಹಾ, ಇದು ಬಿಕಿನಿ ವೇಷವಯ್ಯಾ ಈ ವಿಚಿತ್ರ ಲೋಕದಲ್ಲಿ ಎನ್ನೋದು. ನಾವೆಲ್ಲಾ ಹೌದಪ್ಪ, ಹೌದು ಅಂತಾ ಹೇಳೋದೇ ಸರಿ.

❍

ಕಾಮ ಪ್ರೇಮ ಜೀವನದ ಎರಡು ಮುಖ ಅಂತಾ ಹೇಳೋದು ನಿಜ. ಕೆಲವೊಮ್ಮೆ ಮಾತ್ರ ಪ್ರೇಮ ಕಿವುಡಾಗಿ ಕಾಮ ಕುರುಡಾಗೋದು. ಆದರೆ ಆಸ್ಟ್ರೇಲಿಯಾ ಈ ಎರಡೂ ವಿಚಾರದಲ್ಲಿ ಉತ್ತಮ. ಅಮೇರಿಕ ಹಾಗೂ ಫ್ರೆಂಚರನ್ನು Overtake ಮಾಡಿ ಪ್ರಥಮ ಸ್ಥಾನದಲ್ಲಿದೆ. ಈ ವಿಚಾರ ಕಾಂಡೋಮ್ ತಯಾರಿಸೋ ಸಂಸ್ಥೆಯ ಅಂತರಾಷ್ಟ್ರೀಯ ಸಮೀಕ್ಷೆಯ ಫಲಿತಾಂಶ. ಅದೂ ಕಾಮೋತ್ತೇಜಕ ವಯಾಗ್ರಾ ಕಾಲಿಡೋ ಮುನ್ನ ಈ ಸ್ಥಿತಿ. ಕಾಲಿಟ್ಟ ಮೇಲೆ ದೇವರೇ ಗತಿ. ಕಾಮವ್ಯಾಘ್ರಗಳು ರಸ್ತೆ, ಮನೆ, ಶಾಲೆ, ಅನ್ನೋ ಭೇದ ಮಾಡದೇ ಮನಸ್ಸಿಗೆ ಬಂದಲ್ಲೇ ಕಾರ್ಯಾಚರಣೆ ಆರಂಭ. ಆದಿ-ಅಂತ್ಯ ಎಲ್ಲಾ ನಿಂತಲ್ಲೇ ಕುಳಿತಲ್ಲೇ. ಹಾಗೆಯೇ ಈ ಸಮೀಕ್ಷೆಯಿಂದ ಹೊರಬಿದ್ದಿರೋ ಇನ್ನೊಂದು ಗಮನಾರ್ಹ ಅಂಶ: ಈ ಪ್ರೇಮ ಕಾಮಿಗಳು ಪರಸ್ಪರ ಸುಖ ಪಡೆಯೋ ಆತುರದಲ್ಲಿ ತಮ್ಮ ಸಖ-ಸಖಿಯರ ಸಂರಕ್ಷಣೆ ಬಗ್ಗೇನೂ ಗಮನ ನೀಡ್ತಾರೆ ಅನ್ನೋದು. ಹಾಗಾದ್ರೆ, ನಡೆಮುಂದೆ ನಡೆಮುಂದೆ ನುಗ್ಗಿ ನಡೆಮುಂದೆ ಅಂತಾ ಹೇಳಬಹುದಲ್ಲ.

❍

ಹೊಟ್ಟೆಗೆ ಏನಿಲ್ಲದಿದ್ದರೂ ನೀರಾದ್ರೂ ಇದ್ರೆ ಬದುಕಬಹುದು. ಈ ಮಾತು ಅನುಷ್ಠಾನವಾಗಿರೋದು ರಷ್ಯಾದಲ್ಲಿ. ಈ ಅನುಷ್ಠಾನ, ಆಚರಣೆಗೆ ಬಲಿಯಾಗಿರೋರು ಊರಿಗೆ ಪಾಠ ಹೇಳಿಕೊಡೊ ಎಂಟು ಸಾವಿರ ಗುರುಗಳು. ಅಲ್ಲಿನ ಸರಕಾರದ ಖಜಾನೆ ಖಾಲಿಖಾಲಿ. ಅದ್ಕೇ ಗುರುಗಳ ಕೈಗಿಲ್ಲ ಹಣದ ಥೈಲಿ. ಅದರ ಬದಲಿಗೆ ಎಲ್ಲರ ಕೈಗೆ ಸರಕಾರ ಕೊಡ್ತಾ ಇರೋದು ವೋಡ್ಕಾ ಮದ್ಯ ಪಾನೀಯದ ಬಾಟಲಿ. ಅಯ್ಯೋ ಪಾಪ ಗುರುಗಳ ಕಥೇನೆ ಹೀಗಾದ್ರೆ ಬೇರೆಯವರ ಕಥೆ? ಬೇಡ ಬಿಡಿ ಅದು ಮಹಾಕಥೆ. ಈ ಕಥೆ ಕೇಳಿ ನಮ್ಮ ದೇಶದ ಬಡವರಲ್ಲಿ ಕೆಲವರು ಪರವಾಗಿಲ್ಲ ಅವರಿಗೆ ಮದ್ಯವಾದ್ರೂ ಇದೆ. ಬರೀ ನೀರೆ ಕುಡಿಯುವಷ್ಟು ನಮ್ಮ ದಾರುಣ ಸ್ಥಿತಿ ಅವರಿಗೆ ಬಂದಿಲ್ಲ. ಯಾಕಂದ್ರೆ ಶುದ್ಧ ನೀರಿಗೆ ಸವಿಯಿಲ್ಲ, ಬಣ್ಣವಿಲ್ಲ, ರುಚಿಯಿಲ್ಲವಲ್ಲ.

❍

ಲಾಲ್‌ಬಾಗಿನಲ್ಲಿ ತಮ್ಮಾತಮ್ಮಾ ಲೋಗೆ ಅನ್ನೋ ಹಾಡು ಬದಲಾಯಿಸಿಕೊಂಡು ಸಖಿ ಸಖನಿಗೆ ಚುಮ್ಮಾ ಚುಮ್ಮಾ ಲೋಗೆ ಅಂತಾ ಕೇಳುವಾಗ ಸಖ ಕೆನ್ನೆನೀಡಿ ಸುಮ್ಮನೆ ಏನೂ ತಿಳಿಯದ ಸಂಭಾವಿತನ ತರಹ ನಟಿಸೋ ದೃಶ್ಯ. ರಸ್ತೇಲಿ ಹೋಗೋ ಲಲನೆಯರ ಹಿಂದೆ ನಮ್ಮ ಪೋಲಿ ಮಂದಿಯ ಹಿಂಡೇ ಹಿಂಡು. ಅವರ ಬಾಯಲ್ಲಿ ಚೋಲಿಕೇ ಪೀಚೆ ಕ್ಯಾಹೈ ಅನ್ನೋ ಹಾಡು. ಅದೆಲ್ಲಾ ಸರಿ ಆದ್ರೆ ಈ ಹಾಡಿಗೆ ಮೈಕುಣಿಸಿ ರಸಿಕರನ್ನು ತಣಿಸಿದ ನಟನಾಮಣಿಗಳ ಗೋಳು ಕಂಬಿ ಎಣಿಸೋ ಪಾಡು. ಕಾರಣ ಬಲು ಸರಳ. ನಾರಿ ಶಕ್ತಿ ಅಭಿಯಾನ್ ಅನ್ನೋ ಮಹಿಳಾ ಪರ ಸಂಸ್ಥೆ ಈ ಮಾಯಾಲೋಕದ ಸಭ್ಯರಿಗೆ ಅಸಭ್ಯ ನರ್ತನದ ಆರೋಪ ಹೊರಿಸಿ, ಕೋರ್ಟು ಮೆಟ್ಟಲೇರಿದ್ದರ ಪರಿಣಾಮ. ನ್ಯಾಯಾಲಯ ನಾರಿಯರಿಗೆ ನ್ಯಾಯ ನೀಡಲು ನಟಿಯರಿಗೆಲ್ಲಾ ನೋಟೀಸ್ ಜಾರಿ ಮಾಡಿತು. ಇನ್ನು ಮುಂದೆ ಅತಿ ಸಭ್ಯರೆಲ್ಲಾ ಈ ನಟಿಯರು ರಸ್ತೆಯಲ್ಲಿ ತಿರುಗುವಾಗ ಮುಸಿಮುಸಿ ನಗಲಿಕ್ಕೆ ಶುರುಮಾಡಬಹುದು. ಯಾಕೆಂದ್ರೆ ಈ ಚುಮ್ಮಾ ಚುಮ್ಮಾ, ಚೋಲಿಕೇ ಪೀಚೆ ಎಲ್ಲಾ ಬಹಿರಂಗಗೊಂಡಿದ್ದಕ್ಕೆ.

❍

'ಬೆಣ್ಣೆ ದೋಸೆ ಎಂದು ಬರೀ ಎಣ್ಣೆ ಸುರಿದು ಮಾಡಿದ್ದಾರಲ್ಲ' ಅಂತಾ ಗೊಣಗಿಕೊಳ್ಳುತ್ತಾ ಹೋಟೆಲ್‌ನಲ್ಲಿ ತಿಂಡಿ ತಿನ್ನೋ ಮಂದಿಗೆ ಒಂದು ಆಘಾತ. ಆರೋಗ್ಯಕ್ಕೆ ಸಿಗರೇಟಿನಷ್ಟೇ ಅಪಾಯಕಾರಿ ಈ ಬೆಣ್ಣೇನೂ ಅಂತಾ ನ್ಯೂಜಿಲೆಂಡ್ ಸಂಶೋಧಕರ ಅಭಿಪ್ರಾಯ. ಎಷ್ಟೋಜನ ತಿಂದ ಕೊಬ್ಬನ್ನು ಕರಗಿಸೋ ಚಿಂತೆ ದೂರಮಾಡೋಕೆ ಸಿಗರೇಟಿನ ಆಲಿಂಗನ. ಕೆಲವು ಬುದ್ಧಿಜೀವಿಗಳು ಬೆಣ್ಣೆ ಕರಗಿಸಿ ತುಪ್ಪದ ದೋಸೆ ತಿನ್ನಲಿಕ್ಕೆ ಪ್ರಾರಂಭಿಸಿದರೆ ಅದು ಅವರ ಜಾಣತನ. ನೋಡಿ ಇದುವರೆಗೆ ನೀಡಿದ್ದು ಬರಿ ವಿಷಯದ ಆಘಾತ. ಇದು ತಿಳಿದು ಮುಂದುವರೆಸಿದರೆ ಮುಂದೆ ಹೃದಯಾಘಾತ! ■

# ಒಳನೋಟ






## ರಾಜ್ಯೋತ್ಸವ ವಿಶೇಷ















## ಸ್ಥಿರ ಶೀರ್ಷಿಕೆಗಳು



## ವಿದ್ಯೆ ಉದ್ಯೋಗ

# ಟಪಾಲು

## ಹೆಮ್ಮೆ ಪಡುವೆ

**-ಪವನಕುಮಾರ ನಾಯಕ್,** ಮುಂಬೈ

ಬಿಸಿಲ ಬದುಕು ಪತ್ರಿಕೆಯ ಬಗ್ಗೆ ಕೇಳಿ ತಿಳಿದಿದ್ದೆ. ಆದರೆ ಎಂದೂ ಓದಲು ದೊರಕಿರಲಿಲ್ಲ. ಇತ್ತೀಚಿಗೆ ಕೆಲಸ ನಿಮಿತ್ತ ಶಿವಮೊಗ್ಗಕ್ಕೆ ಬಂದಾಗ ಪತ್ರಿಕೆಯನ್ನು ಖರೀದಿಸಿ ಓದಿದೆ. ನಿಜವಾಗಲೂ ಪತ್ರಿಕೆ ಚೆನ್ನಾಗಿ ಮೂಡಿ ಬರುತ್ತಿದೆ.

ಕನ್ನಡದಲ್ಲಿ ಇಂತಹ ಒಂದು ಪತ್ರಿಕೆ ಇರಲಿಲ್ಲ ಎಂಬುದು ಬಹಳ ದಿನಗಳ ಕೊರಗಾಗಿತ್ತು. ಆದರೆ ಈಗ ಆ ಕೊರಗು ದೂರವಾಗಿದೆ. ನಿಮ್ಮ ಪತ್ರಿಕೆಯ ಚಂದಾದಾರನಾಗಲು ನಿಜವಾಗಿಯೂ ಹೆಮ್ಮೆ ಪಡುತ್ತೇನೆ.

## ಕಿತ್ತೂರು ಶಾಲೆ ಬಗ್ಗೆ

**-ಹೆಸರು,** ಊರು ತಿಳಿಸಿಲ್ಲ.

'ಬದುಕು' ನಮ್ಮ ಬದುಕಿನಲ್ಲಿ ಒಂದಾಗುತ್ತ ನಡೆದಿದೆ ಎಂದರೆ ಅತಿಶಯೋಕ್ತಿ ಎನಿಸಲಾರದು. ಲೇಖನಗಳು ಒಂದಕ್ಕಿಂತ ಒಂದು ಚೆನ್ನಾಗಿ ಮೂಡಿ ಬರುತ್ತಿವೆ. ಪ್ರತಿಯೊಂದು ಪುಟವು ನಮ್ಮನ್ನು ಬುದ್ಧಿವಂತರನ್ನಾಗಿ ಮಾಡಲು ಪ್ರಯತ್ನಿಸುತ್ತಿದೆಯೇನೋ ಎಂಬ ಭಾವನೆ ಉಂಟಾಗುತ್ತಿರುತ್ತದೆ.

ಬಿಜಾಪುರದ ಸೈನಿಕ ಶಾಲೆಯ ಸಂಪೂರ್ಣ ವಿವರಗಳನ್ನು ಓದಿ ಹೇಳಲಾರದಷ್ಟು ಆನಂದ ಉಂಟಾಯಿತು. ದಯವಿಟ್ಟು ಕಿತ್ತೂರು (ಬೆಳಗಾವಿ) ಶಾಲೆಯ ಬಗ್ಗೆ ವಿವರವಾಗಿ ಚಿತ್ರಗಳ ಸಮೇತ ಪ್ರಕಟಿಸಿದರೆ ಚೆನ್ನಾಗಿತ್ತು. ಏಕೆಂದರೆ ಇಲ್ಲಿನ 4-5 ಹುಡುಗಿಯರು ಅಲ್ಲಿ ಪ್ರವೇಶ ಪಡೆಯಲು ತರಬೇತಿಯನ್ನು ಪಡೆಯುತ್ತಿದ್ದಾರೆ. ಅವರಿಗೆ ಆ ಲೇಖನ, ಚಿತ್ರಗಳು ಪ್ರೇರಣೆ ನೀಡಬಲ್ಲವೇನೋ ಎಂಬ ಆಸೆ.

## ದೀಪಾವಳಿ ವಿಶೇಷ

**-ಪಳಕಳ ಸೀತಾರಾಮ ಭಟ್ಟ,** ಮಿತ್ತಬೈಲು

ದೀಪಾವಳಿ ವಿಶೇಷ ಸಂಚಿಕೆಯನ್ನು ಸಾದ್ಯಂತ ಓದಿ ನೋಡಿದೆ. ಉಪಯುಕ್ತವಾದ ವೈವಿಧ್ಯಪೂರ್ಣ ಲೇಖನಗಳಿಂದ ಕೂಡಿದ ಸಂಗ್ರಾಹ್ಯ ಸಂಚಿಕೆಯಿದು. ನಿಮ್ಮ ಶ್ರಮ ಸಾರ್ಥಕ, ಪ್ರಶಂಸನೀಯ.

## ಉಪಯುಕ್ತ

**-ಯು.ವಿ. ತಾರಿಣಿರಾವ್**

ಪತ್ರಿಕೆಯಲ್ಲಿನ ಕೆಲವು ಲೇಖನಗಳು ಬಹಳ ಔಚಿತ್ಯಪೂರ್ಣವಾಗಿವೆ. ಅರೆಸ್ಟ್ ವಾರೆಂಟ್, ಡಾಲರ್, ಕಂಪ್ಯೂಟರ್ ಕುರಿತ ಲೇಖನಗಳು ಉಪಯುಕ್ತ ಮಾಹಿತಿ ನೀಡುತ್ತವೆ. ವಯಸ್ಕರಿಗಾಗಿ ಓದಿದೆ. ಪುಟಗಳು ದೀರ್ಘವೆನಿಸಿದವು.

## ನೀತಿ ಕತೆ

**-ಜಿ. ಈಶ್ವರಮ್ಮ,** ಹೊಸಮೋಕಾ

ಎಂ.ಎಸ್. ಮೂರ್ತಿಯವರ 'ಹಸಿರು ಕಂಡ ಯುವಕ' ಚೆನ್ನಾಗಿತ್ತು. ಮಕ್ಕಳ ನೀತಿ ಕಥೆಗಳನ್ನು ಪ್ರಕಟಿಸಿ.

## ಸಂವೇದನೆ

**-ವೈ.ಎಸ್. ಮೀನಾಕ್ಷಮ್ಮ,** ದೊಣೆಹಳ್ಳಿ

ಈ ಬಾರಿಯ 'ಸಂವೇದನೆ'ಯ ಬರಹ ಯುವಕರನ್ನು ಎಚ್ಚರಿಸುವಂತಿತ್ತು. ಈಗಿನ ಸಮಾಜದಲ್ಲಿ ಪೊಳ್ಳು ನಿರ್ಧಾರಗಳನ್ನು ತೆಗೆದುಕೊಳ್ಳುವ ಯುವಕರಿಗೆ ಬರವಿಲ್ಲ. ಕನಸುಗಳನ್ನು ಕಾರ್ಯಗತ ಮಾಡುವ ಛಲವಂತ ಯುವಕರು ಅಪರೂಪ. ಇಂತಹ ಅಪರೂಪದವರಿಗೆ ಆತಂಕ, ಆರೋಪಗಳ ಕಾಟ ಬಿಟ್ಟಿದ್ದಲ್ಲ. ಪ್ರಪಂಚ ಹೀಗಿರುವಾಗ ಹಸಿರು ಕಾಣುವುದು ಹೇಗೆ?

## ಎಳೆಯರಿಗಾಗಿ

**-ಎಸ್. ರಮೇಶ್,** ಮದ್ದೂರು

ಎಳೆಯರಿಗಾಗಿ ಅಪೂರ್ಣ ಕಥೆಯ ಬದಲು ನೀತಿ ಕಥೆ, ಪುರಾಣ ಕಥೆ, ಐತಿಹಾಸಿಕ ಕಥೆ ಬರೆಸಿದರೆ ವಾಸಿ. ಚಿತ್ರಕ್ಕೆ ಬಣ್ಣ ಹಾಕುವ, ಸರಿಯಾದ ಪದ ತುಂಬುವ ಸ್ಪರ್ಧೆ ಏರ್ಪಡಿಸಿ. ಜೊತೆಗೆ ಮಾಸ ಭವಿಷ್ಯ ಪ್ರಕಟಿಸಿದರೆ ಪ್ರತಿಗಳು ಶೀಘ್ರ ಖರ್ಚಾಗುತ್ತವೆ.

## ವಿದ್ಯಾರ್ಥಿಗಳಿಗೇನು ಉಪಯೋಗ?

**-ಬೆಟ್ಟೇಗೌಡ,** ಚನ್ನಪಟ್ಟಣ.

ಪತ್ರಿಕೆ ಅತ್ಯಾಕರ್ಷಕ ಮುಖಪುಟದೊಂದಿಗೆ ಅತ್ಯುಪಯುಕ್ತ ವಿಷಯಗಳನ್ನು ಓದುಗರಿಗೆ ಒದಗಿಸುತ್ತಿರುವುದು ಸ್ವಾಗತಾರ್ಹ. ನಿಮ್ಮ ಪತ್ರಿಕೆಯನ್ನು ಹೆಚ್ಚಾಗಿ ವಿದ್ಯಾರ್ಥಿಗಳು ಕೊಂಡುಕೊಳ್ಳುವುದರಿಂದ ಅದರಲ್ಲಿನ ಕೆಲವು ಅಂಕಣಗಳ ಬಗ್ಗೆ ಮರು ಪರಿಶೀಲನೆ ಮಾಡುವುದು ಒಳ್ಳೆಯದು. 'ವಯಸ್ಕರಿಗಾಗಿ', 'ಆಪ್ತ ಸಮಾಲೋಚನೆ' ಹಾಗೂ ಕೆಲವು ಜಾಹೀರಾತುಗಳಿಂದ ವಿದ್ಯಾರ್ಥಿಗಳಿಗೇನು ಪ್ರಯೋಜನ?

## ಕಂಪ್ಯೂಟರ್ ಕಲಿ

**-ರಾಘವೇಂದ್ರ ಸಂಗನಗೌಡ,** ಸುರೇಬಾನ

ಈ ಅಂಕಣ ನಮ್ಮಂತಹ ಬೇಕಾದಷ್ಟು ನಿರುದ್ಯೋಗಿಗಳಿಗೆ ಉದ್ಯೋಗ ಪಡೆಯುವ ಛಲ ಹುಟ್ಟಿಸಿದೆ.

## ಭ್ರಷ್ಟರು ತಿಳಿಯಲಿ

**-ಬಾಬು ಬೆಟ್ಟದೂರು,** ಮಾನ್ವಿ

ಅಕ್ಟೋಬರ್ ಸಂಚಿಕೆ ಅನೇಕ ಮುಖ್ಯ ವಿಷಯಗಳನ್ನು ಚಿಂತನೆಗೆ ಹಚ್ಚಿದೆ. ಕೋ.ಚೆನ್ನಬಸಪ್ಪನವರ ಬರಹವನ್ನು ನಮ್ಮನ್ನಾಳುವ ಈ ನೀಚ ರಾಜಕಾರಣಿಗಳು ಓದಬೇಕು. ಬೇರೆ ರಾಷ್ಟ್ರಗಳಲ್ಲಿ ಶಿಕ್ಷಣಕ್ಕೆ ಎಷ್ಟು ಹಣ ಖರ್ಚು ಮಾಡುತ್ತಾರೆ ಎಂಬುದನ್ನು ನಮ್ಮವರು ಅರಿತುಕೊಳ್ಳಬೇಕು. ಎಲೆಕ್ಷನ್ ನಂತರ ಸೆಲೆಕ್ಷನ್ ಆದ ಮೇಲೆ ಈ ಭಂಡರು ಬರಿ ತಮ್ಮ ಸ್ವಾರ್ಥಕ್ಕಾಗಿ ಕಲೆಕ್ಷನ್‌ಗೆ ಇಳಿಯುತ್ತಾರೆ. ಅಕ್ರಮವಾಗಿ ಆಸ್ತಿಪಾಸ್ತಿ ಮಾಡಿ ಕಡೆಗೆ ವಿವಾದದಲ್ಲಿ ಸಿಕ್ಕೂ ಬೀಳುತ್ತಾರೆ. ನಮ್ಮ ದೇಶದ ಬಹುಪಾಲು ಹಣ ಈ ರಾಜಕಾರಣಿಗಳ, ಅವರ ಸಂಬಂಧಿಕರ ಮನೆಯಲ್ಲಿ ಬಿದ್ದಿದೆ.

## ಪೊಲೀಸ್ ಅರೆಸ್ಟ್

**-ಶ್ರೀಪಾದ ವಿ. ಜೋಶಿ,** ಅನವಾಲ

ಪೊಲೀಸ್ ಅರೆಸ್ಟ್ ಲೇಖನದಲ್ಲಿ ಹಲವಾರು ಕಾಯಿದೆ ಕಾನೂನುಗಳ ಬಗ್ಗೆ ಉಪಯುಕ್ತ ಮಾಹಿತಿ ಲಭಿಸಿತು. ಲೇಖಕರಿಗೂ ನಿಮಗೂ ಧನ್ಯವಾದಗಳು.

## ದಳ ಸರ್ಕಾರ ಝುಳ ಝುಳ!

**-ಸ್ಫೂರ್ತಿ ಬೆಟ್ಟದೂರು,** ಕಪ್ಪಗಲ್ಲು

'ಅಧ್ಯಯನ ಯಾತ್ರೆ' ಸಂಪಾದಕೀಯ ಓದಿದೆ. ನಮ್ಮ ಮಂತ್ರಿಗಳಿಗೆ ನಾಚಿಕೆಯಾಗುವಂತೆ ಬರೆದಿದ್ದೀರಿ. ಎರಡು ತಿಂಗಳಿಂದ ಧೋ ಎಂದು ಸುರಿದ ಮಳೆಯಿಂದ ಆಸ್ತಿಪಾಸ್ತಿ, ಪೈರು, ದನ, ಕರ ನಷ್ಟವಾಗಿ ಹಳ್ಳಿಗಳು ತತ್ತರಿಸುತ್ತಿವೆ. ಇಂಥ ಸ್ಥಿತಿಯಲ್ಲಿ ಇವರು ಬೇರೆ ದೇಶಗಳನ್ನು ನೋಡಿ ಕಲಿಯುವುದು ಅಷ್ಟರಲ್ಲೇ ಇದೆ. ಈ ಬೂಟಾಟಿಕೆಯ ಬುಡಬುಡಕೆಯ ರಾಜಕೀಯ ಮುಖಗಳನ್ನು ನೋಡಲು ಹೇಸಿಗೆಯಾಗುತ್ತದೆ. ಈಗಿನ ದಳ ಸರ್ಕಾರ ಮುಂಬರುವ ಚುನಾವಣೆಯಲ್ಲಿ ಝುಳ ಝುಳ ಆದರೆ ಆಶ್ಚರ್ಯವಿಲ್ಲ.

### ಅದೆಷ್ಟು ಸುಂದರ!

**-ವಿ. ರಾಘವೇಂದ್ರನ್,** ಹುಣಸಿನಗದ್ದೆ

'ಬದುಕು' ಮಾಸಿಕವನ್ನು ಮೊಟ್ಟ ಮೊದಲ ಬಾರಿ ಕೊಂಡು ಓದಿದಾಗ ಬಹಳ ಆನಂದ ವಾಯಿತು. ಮಳೆ-ಚಳಿಗಳ ಮಧ್ಯೆ ಈ ಬಿಸಿಲ ಬದುಕು ಅದೆಷ್ಟು ಸುಂದರ ಎಂಬ ಭಾವನೆ ಮನದಾಳದಲ್ಲಿ ನಲಿಯುತ್ತಿತ್ತು. ಈ 'ಬದುಕು' ಹಳ್ಳಿ ಹಳ್ಳಿಗೂ ಪಸರಿಸಲಿ.

### ಸಲಹೆ

**-ಡಿ.ಎಸ್. ಗೌಚರ,** ಮಂಗಳಗುಡ್ಡ

ಶಿಕ್ಷಣ, ಆಧುನಿಕ ಕೃಷಿ, ತೋಟಗಾರಿಕೆ, ಗುಡಿಕೈಗಾರಿಕೆ, ಹೈನುಗಾರಿಕೆ, ಕೋಳಿ ಸಾಕಾಣಿಕೆ, ಕುರಿ ಸಾಕಾಣಿಕೆ, ತಾಂತ್ರಿಕ ವೈದ್ಯಕೀಯ ಶಿಕ್ಷಣದ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸಿ.

### ಬೇಡಿಕೆ

**-ಶಶಿಕಲಾ ವಠಾರ್,** ಯಾದಗಿರಿ

ಸಂಚಿಕೆ ಅಚ್ಚುಕಟ್ಟಾಗಿದೆ. ಒಳಪುಟಗಳ ಲೇಖನಗಳು ಅಷ್ಟೇ ವಿಚಾರಪೂರಿತವಾಗಿವೆ. ಒಂದು ಕತೆ, ಒಂದು ಕವನ ಪ್ರಕಟಿಸಿದರೆ ಓದುಗರ ಬೇಡಿಕೆ ಈಡೇರಿಸಿದಂತಾಗುತ್ತದೆ.

### ನಾವೇನು ಮಾಡಬೇಕು?

**-ವಿಜೇತಾ ವಿ.ಪೈ,** ಹೊನ್ನಾವರ

ಕಿಲ ಕಿಲ ಅಂಕಣದಲ್ಲಿ ಅಪೂರ್ಣಕತೆಯನ್ನು ಪೂರ್ಣಗೊಳಿಸುವ ಅವಕಾಶವನ್ನು 10ನೇ ತರಗತಿ ವರೆಗಿನ ವಿದ್ಯಾರ್ಥಿಗಳಿಗೆ ಸೀಮಿತಗೊಳಿಸಿದ್ದೀರಿ. ಕಾಲೇಜು ವಿದ್ಯಾರ್ಥಿಗಳಾದ ನಮಗೆ ಈ ಅಂಕಣಕ್ಕೆ ಬರೆಯುವ ಆಸೆ ಇದೆ. ಏನು ಮಾಡಬೇಕು?

### ವಯಸ್ಕರಿಗಾಗಿ

**- ಹೆಸರು,** ಊರು ಬೇಡ

'ವಯಸ್ಕರ ಸಂದೇಹ-ಸಲಹೆ' ಅಂಕಣದಲ್ಲಿ ನನ್ನ ಸಮಸ್ಯೆಗೆ ದೊರೆತ ಪರಿಹಾರದಿಂದ ನನ್ನ ಬದುಕೇ ಬದಲಾಗಿದೆ. ಹೇಳಿಕೊಳ್ಳಲಾಗದ, ತಾಳಿಕೊಳ್ಳಲಾಗದೆ ಡೋಂಗಿ ವೈದ್ಯರ ಬಲೆಗೆ ಬೀಳುತ್ತಿದ್ದ ನನ್ನಂತಹ ನೂರಾರು ಜನರಿಗೆ ಈ ಅಂಕಣ ಮಹದುಪಕಾರ ಮಾಡುತ್ತಿದೆ.

ಡಾ.ವಸುಂಧರಾ ಭೂಪತಿ ಅವರಿಗೆ ಶಿರಸಾಷ್ಟಾಂಗ ನಮನಗಳು.

## ಅರ್ಥ - ಅಪಾರ್ಥ

ಮೈಸೂರಿನಲ್ಲಿ ಲಿಡ್ಕರ್‌ಗೆ ಸೇರಿದ 20 ಎಕರೆ ಭೂಮಿ ಇದೆ. ಇದರಲ್ಲಿ ಕುಶಲಕರ್ಮಿಗಳಿಗೆ 100 **ಮಲೆಗಳನ್ನು** ಕಟ್ಟಿಸಿಕೊಡಲಾಗುವುದೆಂದರು.
[*ಕನ್ನಡಪ್ರಭ,* 18.9.98] **-ರಿಯಾಜ್ ಅಹಮದ್ ಆರ್.,** ಕಾನಾಹೊಸಹಳ್ಳಿ

ದೆಹಲಿಯ **ಪದ್ಯಚ್ಯುತ** ಮುಖ್ಯಮಂತ್ರಿ ಸಾಹಿಬ್‌ಸಿಂಗ್ ವರ್ಮ ಮತ್ತು ಅವರ ಕುಟುಂಬ....
[*ಸಂಜೆವಾಣಿ,* 13.10.98] **- ಹಣಮಂತಪ್ಪ ಸೇಡಂಕರ್,** ಗುರುಮಠಕಲ್

ಶಿವಸೇನೆಯ ಹುಲಿ ಬಾಳ ಠಾಕ್ರ **ಹೇಲಿದ್ದಾರಂತೆ** ನನ್ನನ್ನು ಬಂಧಿಸಿದರೆ ಮಹಾರಾಷ್ಟ್ರ ಹೊತ್ತಿ ಉರಿಯುತ್ತದೆ ಎಂದು.
[*ಕನ್ನಡ ಜನ ಅಂತರಂಗ,* 05.10.98] **-ಶ್ರೀಲತಾ ಎಸ್ ಆರ್.,** ಕೊಪ್ಪ

ನವೆಂಬರ್ ತಿಂಗಳಲ್ಲಿ ನಾಲ್ಕು **ರಾಷ್ಟ್ರಗಳಲ್ಲಿ** ನಡೆಯುವ ವಿಧಾನಸಭೆ ಚುನಾವಣೆಗೆ ಪಕ್ಷದ ಪ್ರಣಾಳಿಕೆ ಸಿದ್ಧಪಡಿಸುವ ಸಮಿತಿಯ ಅಧ್ಯಕ್ಷರನ್ನಾಗಿ ಪವಾರ್ ಅವರನ್ನು ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ ನೇಮಕ ಮಾಡಿದ್ದಾರೆ.
[*ಸಂಯುಕ್ತ ಕರ್ನಾಟಕ,* 5.10.98] **-ಮೆಹಬೂಬ ಹಾಲ್ಯಾಳ,** ಹುನಗುಂದ

ಮುಂದಿನ ಜನವರಿಯಲ್ಲಿ ನಡೆಯುವ ಸಮಾರಂಭವೊಂದರಲ್ಲಿ **ರಾಷ್ಟ್ರಪತಿ ಡಾ. ಶಂಕರ್ ದಯಾಳ್ ಶರ್ಮಾ** ಪ್ರಶಸ್ತಿ ಪ್ರದಾನ ಮಾಡುವರು.
[*ಉದಯವಾಣಿ,* 29.9.98] **-ವೀಣಾ,** ಮಾಲಾಡಿ

... ಸಾಹಿತ್ಯ ಗೋಷ್ಠಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಕನ್ನಡದ **ಸೇವೆ ಗೈಯ್ಯದ** ಪ್ರೊ. ಬಿ.ಎಂ. ಹಿರೇಮಠ ಅವರು ಮುದ್ದೇಬಿಹಾಳ ತಾಲೂಕಿನ ಬಿ. ಎಂ. ಶ್ರೀ ಎಂದೇ ಪ್ರಸಿದ್ಧರು.....
[*ಸಂಜೆವಾಣಿ,* 23.9.98] **-ಬಿ.ಟಿ. ಪಾಟೀಲ,** ಮುದ್ದೇಬಿಹಾಳ

ಗುರು: ಹೌದು. ಅದಕ್ಕೇ ಅದನ್ನು ಸಂವಿಧಾನದಿಂದ ಕಿತ್ತೊಗೆಯಬೇಕು ಅಂತ ಅಧಿಕಾರದಲ್ಲಿಲ್ಲದ ಎಲ್ಲ ಪಕ್ಷಗಳು ಹೇಳ್ತವೆ.
ಶಿಷ್ಯ : ಬಿಜೆಪಿ ಕೂಡಾ ಅದೇ ಹೇಳ್ತಾ **ಅತ್ತು,** ಅಲ್ವ?
[*ಕನ್ನಡ ಪ್ರಭ,* ಗುರುಶಿಷ್ಯ ಅಂಕಣ] **-ಮಾಧುರಿ ಬಿ.ಸಿ.,** ಮೈಸೂರು

ಕೆಲವು ಮೂಲಭೂತವಾದಿ ಸಂಘಟನೆಗಳ ಕಾರ್ಯಕರ್ತರು ಹಾಗೂ ಕೆಲವು ಧಾರ್ಮಿಕ ಮುಖಂಡರು ಅವರ ತಲೆ ತೆಗೆದವರಿಗೆ ಬಹುಮಾನ ಕೊಡುವುದಾಗಿ **1994**ರಲ್ಲಿ ಘೋಷಿಸಿದ್ದವು.
[*ಪ್ರಜಾವಾಣಿ*] **-ಎ.ಸಿ. ಸೀತಾಬಾಯಿ,** ತುಮಕೂರು

ಸ್ಥಳೀಯ ಪತ್ರಿಕೆಗಳಲ್ಲಿ, ರಾಜ್ಯ-ರಾಷ್ಟ್ರ ಮಟ್ಟದ ಪತ್ರಿಕೆಗಳಲ್ಲಿ ಇಂಥ ದೋಷಗಳನ್ನು ಹುಡುಕಿ ನಮಗೆ ಕಳಿಸಿಕೊಡಿ. ನಿಮ್ಮ ಹೆಸರಿನೊಂದಿಗೆ ಪ್ರಕಟಿಸಲಾಗುವುದು. ನೀವು ದೋಷ ಗಮನಿಸಿದ ಪತ್ರಿಕೆಯ ಅರ್ಥಾಂತರವಾದ ಭಾಗವನ್ನು ಕತ್ತರಿಸಿ ಕಳಿಸುವುದು ಅತ್ಯಗತ್ಯ. ಪತ್ರಿಕೆಯ ಹೆಸರು, ದಿನಾಂಕವೂ ಇರಬೇಕು. -ಸಂ.

ರಾಜ್ಯೋತ್ಸವ ವಿಶೇಷ

# ಕನ್ನಡ ಕಾಣೆಯಾಗುತ್ತಿದೆಯೇ?

**ಹುಚ್ಚು ಕುದುರೆಯ ಓಟದಲ್ಲಿ ನಮ್ಮ ತಾಯ್ನುಡಿ ನುಚ್ಚುನೂರಾಗುತ್ತಿದೆ. ಹಳ್ಳಿ ಹಳ್ಳಿಗೆ ಕಾನ್ವೆಂಟ್ ಸಂಸ್ಕೃತಿ ಸದ್ದಿಲ್ಲದೇ ವ್ಯಾಪಿಸುತ್ತಿದೆ. ಕನ್ನಡ ಶಾಲೆಗಳು ತಣ್ಣಗೆ ಕಣ್ಮುಚ್ಚುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳು ಇಂಗ್ಲಿಷ್ ಬಲ್ಲವರಿಗೆ ತನ್ನ ನೆರಳಿನ ತಂಪನ್ನುಣಿಸುತ್ತಾ, ಐದಂಕಿಯ ಸಂಬಳ ನೀಡುತ್ತಿರುವುದನ್ನು ಕನ್ನಡದ ಕಂದಮ್ಮಗಳು ಬೆಕ್ಕಸಬೆರಗಾಗಿ ನೋಡುತ್ತಾ ನಿಟ್ಟುಸಿರುಡುತ್ತಿವೆ.**

■ ಶಾಂತಾ ನಾಗರಾಜ್

**ಗ**ರ್ಭಿಣಿ ಮಹಿಳೆಯೊಬ್ಬಳು ತನಗೇ ಅರ್ಥವಾಗದ ದಪ್ಪದಪ್ಪ ಇಂಗ್ಲಿಷ್ ಪುಸ್ತಕಗಳನ್ನು ಓದುತ್ತಿದ್ದಳಂತೆ. 'ಹೀಗೇಕೆ' ಎಂದರೆ 'ತನಗೆ ಹುಟ್ಟುವ ಮಗು ಬುದ್ಧಿವಂತನಾಗಬೇಡವೇ' ಎಂದಳಂತೆ. ಹೌದು ಇಂದು ಎಲ್ಲ ತಂದೆ ತಾಯಿಯರ ಮಹತ್ವಾಕಾಂಕ್ಷೆ: ತಮ್ಮ ಮಕ್ಕಳು ಬುದ್ಧಿವಂತರಾಗಬೇಕು, ಡಾಕ್ಟರಾಗಬೇಕು, ಇಂಜಿನಿಯರ್ ಆಗಬೇಕು, ಅಧಿಕಾರಿಗಳಾಗಬೇಕು; ತಮಗಿಂತ ಒಳ್ಳೆ ಬಾಳನ್ನು ಬಾಳಬೇಕು. ಇದು ತುಂಬ ಸಹಜವಾದ ಆಸೆಯೇ! ಆದರೆ ನಾವೇ ಆವಾಹಿಸಿಕೊಂಡ ಈ ಆಸೆಯ ಮಹಾಪೂರದಲ್ಲಿ ನಾವೇನು ಕಳೆದುಕೊಳ್ಳುತ್ತಿದ್ದೇವೆ ಎನ್ನುವ ಅರಿವು ಎಷ್ಟು ಮಂದಿಗಿದೆ?

ಜಾಣರಾಗುವ ಹುಚ್ಚು ಕುದುರೆಯ ಓಟದಲ್ಲಿ ನಮ್ಮ ತಾಯ್ನುಡಿ ನುಚ್ಚುನೂರಾಗುತ್ತಿದೆ. ಹಳ್ಳಿಹಳ್ಳಿಗೆ ಕಾನ್ವೆಂಟ್ ಸಂಸ್ಕೃತಿ ಸದ್ದಿಲ್ಲದೇ ವ್ಯಾಪಿಸುತ್ತಿದೆ. ಕನ್ನಡ ಶಾಲೆಗಳು ತಣ್ಣಗೆ ಕಣ್ಮುಚ್ಚುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳು ನಮ್ಮ ನೆಲದಲ್ಲಿ ಬೇರಿಳಿಸುತ್ತಾ, ಇಂಗ್ಲಿಷ್ ಬಲ್ಲವರಿಗೆ ತನ್ನ ನೆರಳಿನ ತಂಪ ನ್ನುಣಿಸುತ್ತಾ, ಐದಂಕಿಯ ಸಂಬಳವ ನ್ನೆಣಿಸು ತ್ತಿರುವುದನ್ನು ಕನ್ನಡದ ಕಂದಮ್ಮಗಳು ಬೆಕ್ಕಸಬೆರಗಾಗಿ ನೋಡುತ್ತಾ ನಿಟ್ಟುಸಿರುಡುತ್ತಿವೆ. ಜಾಣರು ಹೇಗೋ ಅವಕಾಶ ಗಿಟ್ಟಿಸಿಕೊಂಡು ಪರದೇಶಗಳಿಗೆ ಹಾರಿ 'ಡಾಲರ್' ಗಳಲ್ಲಿ ಬದುಕು ಕಟ್ಟುತ್ತಿದ್ದಾರೆ. ಕನ್ನಡವನ್ನೇ ಉಸಿರಾಗಿಸಿಕೊಂಡವರು, ಓದಿದವರು, ಬರೆದವರು, ಆಡಿದವರು, ಕತ್ತಲು ತುಂಬಿದ ಭವಿಷ್ಯದಲ್ಲಿ ಬೆಳಕಿಗಾಗಿ ತಡಕಾಡುತ್ತಿದ್ದಾರೆ.

ಇಂಥ ಹಿನ್ನೆಲೆಯಲ್ಲಿ ನಾವೀಗ ನವೆಂಬರ್ ಒಂದರಂದು ರಾಜ್ಯೋತ್ಸವವನ್ನಾಚರಿಸಬೇಕು. ಎಲ್ಲ ಉತ್ಸವಗಳಂತೆ ರಾಜ್ಯೋತ್ಸವ ಸಹ ತನ್ನ ಬಣ್ಣ, ಬೆರಗು, ಬೆಡಗು, ಸತ್ವ ಅರ್ಥಗಳನ್ನು ಕಳೆದುಕೊಂಡು ಕೇವಲ ರೂಢಿಯ ಆಚರಣೆಯಾಗುತ್ತಿದೆ. ರಾಜ್ಯೋತ್ಸವ ಕೇವಲ ಭಾಷಾ ಉತ್ಸವವಾಗುತ್ತಿದೆ. ಕನ್ನಡವನ್ನು ನೆನಪು ಮಾಡಿಕೊಳ್ಳಲು ಮಾತ್ರ ನವೆಂಬರ್ ತಿಂಗಳು ಸಾಂಕೇತಿಕವಾಗುತ್ತಿದೆ.

ಈಗ ನಮ್ಮ ನಿಮ್ಮಂತಹ ಕನ್ನಡ ಪರ ಕಾಳಜಿಯಿರುವವರ ಮುಂದಿರುವ ಪ್ರಶ್ನೆ ಮುಂದಿನ ಶತಮಾನಗಳಲ್ಲಿ ಕನ್ನಡದ ಸ್ಥಾನ ಎಲ್ಲಿರುತ್ತದೆ? ಎನ್ನುವುದು, ನಾವು ನಮ್ಮ ಮುಂದಿನ ಪೀಳಿಗೆಗೆ ಯಾವ ಸಂಸ್ಕೃತಿಯನ್ನು ಬಿಟ್ಟು ಹೋಗುತ್ತಿದ್ದೇವೆ? ಎಂಬುದು. ಈ ಪ್ರಶ್ನೆಗಳು ತುಂಬಾ ಭಾರವಾದ ಮನಸ್ಸಿನಿಂದ ಹುಟ್ಟುವಂಥದ್ದು. ಉತ್ತರಗಳು ಅನೂಹ್ಯವಾಗಿಯೇ ಉಳಿದುಬಿಡುವಂಥದ್ದು.

> **ಕನ್ನಡ ಮತ್ತು ನಮ್ಮ ಸಂಸ್ಕೃತಿ ಎನ್ನುವುದು ಒಂದು ಹಿರಿದಾದ ಮರವಿದ್ದಂತೆ. ಅದರ ಬೇರುಗಳು ಭದ್ರವಾಗಿವೆ. ಆದುದರಿಂದ ಉರುಳಿ ಹೋಗುವ ಭಯವೇ ಇಲ್ಲ**

ಕರ್ನಾಟಕ ಸರ್ಕಾರಕ್ಕೆ ಇಂಥ ಕಾಳಜಿ 1968ರಲ್ಲೇ ಉದಿಸಿತ್ತು ಎನ್ನುವುದು ಆಶ್ಚರ್ಯ ತರುವ ವಿಷಯವಾದರೂ, ಇದು ಸತ್ಯ. ಕ್ರಿ.ಶ. 5ನೇ ಶತಮಾನದಿಂದ 18ನೇ ಶತಮಾನದವರೆಗೆ ಕರ್ನಾಟಕದ ಆಡಳಿತ ಭಾಷೆ ಕನ್ನಡವೇ ಆಗಿದ್ದು ನಂತರ ಬ್ರಿಟಿಷರ ಆಳ್ವಿಕೆಯ ಉತ್ತರಭಾಗದಲ್ಲಿ ಅದು ಇಂಗ್ಲಿಷ್‌ಮಯವಾಗುತ್ತಾ ಬಂದು ಸ್ವಾತಂತ್ರ್ಯ ನಂತರವೂ ಹಾಗೇ ಉಳಿದುಬಿಟ್ಟಿದ್ದನ್ನು, ಕನ್ನಡ ಹಿತಾಸಕ್ತರು 1968ರಲ್ಲಿ ಗಮನಿಸಿದರು. ಆ ವರ್ಷ ತಾಲ್ಲೂಕು ಮಟ್ಟದ ಎಲ್ಲಾ ಕಚೇರಿಗಳಲ್ಲಿ ಕನ್ನಡ ಆಡಳಿತ ಭಾಷೆ ಎಂದೂ, 1972ರಲ್ಲಿ ಜಿಲ್ಲಾ ಮಟ್ಟದಲ್ಲಿ ಮತ್ತು 1979ರಿಂದ ಸಚಿವಾಲಯದಲ್ಲಿ, ಹೀಗೆ ವಿವಿಧ ಹಂತಗಳಲ್ಲಿ ಆಡಳಿತ ಕನ್ನಡದಲ್ಲಿರಬೇಕೆಂದು ರಾಜ್ಯ ಸರ್ಕಾರ ಆದೇಶ ಹೊರಡಿಸಿತು. 1970ರಲ್ಲಿ 'ಕನ್ನಡ ಆಡಳಿತ ಭಾಷಾ ಸಮಿತಿ' ರಚನೆಯಾಯಿತು. ಇದರ ಅಭಿವೃದ್ಧಿಗಾಗಿ 'ಭಾಷೆ ಮತ್ತು ಕನ್ನಡ ಅಭಿವೃದ್ಧಿ ನಿರ್ದೇಶನಾಲಯ' ಎಂಬ ಪ್ರತ್ಯೇಕ ಇಲಾಖೆ ರೂಪು ಗೊಂಡಿತು (ಅದು ಈಗ ಕನ್ನಡ-ಸಂಸ್ಕೃತಿ ಇಲಾಖೆಯಾಗಿದೆ). ಇಷ್ಟೆಲ್ಲ ಪ್ರಯತ್ನಗಳ ನಂತರವೂ ಕನ್ನಡದ ಸ್ಥಿತಿ ಎಲ್ಲ





**ಇವತ್ತು ಕನ್ನಡ ಸಮೃದ್ಧವಾಗಿ ಉಳಿದಿರುವುದು ಅನಕ್ಷರಸ್ಥರಲ್ಲಿ ಮಾತ್ರ. ವಿದ್ಯಾವಂತರ ಸಂಖ್ಯೆ ಹೆಚ್ಚಿದಂತೆಲ್ಲಾ ಕನ್ನಡದ ಸಾಧ್ಯತೆಗಳು ಕಡಿಮೆಯಾಗುತ್ತಾ ಹೋಗುತ್ತವೆ. ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಓದಿದ ಮನೆ ಯಜಮಾನ ತನ್ನ ಮನೆಗೆ ತರಿಸುವುದು ಇಂಗ್ಲಿಷ್ ದಿನ ಪತ್ರಿಕೆಯನ್ನೇ!**

ರಂಗಗಳಲ್ಲಿ ವಿಮುಖವಾಗಿಯೇ ಇತ್ತು. ಇದನ್ನು ಮನಗಂಡ ಸರ್ಕಾರ 1983ರಲ್ಲಿ 'ಕನ್ನಡ ಆಡಳಿತ ಭಾಷಾ ಕಾವಲು ಸಮಿತಿ' ಯನ್ನು ರಚಿಸಿತು.

ಯಾವ ಭಾಷೆ ಸಹಸ್ರಾರು ವರ್ಷಗಳ ಇತಿಹಾಸವನ್ನು ತನ್ನಲ್ಲಿಟ್ಟುಕೊಂಡು ಶ್ರೀಮಂತವಾಗಿತ್ತೋ, 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣಿತರ ಕನ್ನಡಿಗರ್' ಎಂದು ಕವಿಗಳು ಕೊಂಡಾಡಿದ್ದಾರೋ, 'ಕನ್ನಡವೆನೆ ಕುಣಿದಾಡುವುದೆನ್ನೆದೆ' ಎಂದುಹಾಡಿ ಹರ್ಷಿಸಿದ್ದರೋ ಅದೇ ನೆಲದ ಭಾಷೆ ಪರಿಸ್ಥಿತಿ ''ಕನ್ನಡಕ್ಕೆ ಹೋರಾಡು ಕನ್ನಡ ಕಂದ ಕನ್ನಡವ ಕಾಪಾಡು ಎನ್ನ ಆನಂದ'' ಎಂದು ಹಂಬಲಿಸುವ ನೆಲೆ ಮುಟ್ಟಿತು. ಮುಕ್ಕೋಟಿ ಜನರ ಭಾಷೆಯನ್ನು ಕಾಯಲು ಕಾವಲು ಸಮಿತಿ ಬೇಕಾಗಿದುದೇ ಒಂದು ಚೋದ್ಯ.

1985ರಲ್ಲಿ ಈ ಕಾವಲು ಸಮಿತಿ ಪುನರ್‍ರಚನೆಯಾಯಿತು. 1990ರಲ್ಲಿ ಇದು 'ಕನ್ನಡ ಅಭಿವೃದ್ಧಿ ಮಂಡಳಿ' ಎಂದು ಹೆಸರು ಬದಲಾಯಿಸಿಕೊಂಡಿತು. ಮತ್ತೆ ಎರಡು ವರ್ಷಗಳ ನಂತರ 1992ರಲ್ಲಿ ಇದು 'ಕನ್ನಡ ಅಭಿವೃದ್ಧಿ ಪ್ರಾಧಿಕಾರ' ಎನ್ನುವ ನಾಮಕರಣದೊಂದಿಗೆ ಪ್ರತಿಷ್ಠಾಪನೆಯಾಯಿತು. ಪ್ರಾಧಿಕಾರದ ಅಧ್ಯಕ್ಷರಿಗೆ ಸಂಪುಟ ದರ್ಜೆ ಸಚಿವರ ಸ್ಥಾನಮಾನಗಳಿವೆ. ಕನ್ನಡವನ್ನು ಕಾಪಾಡಲು ಮತ್ತು ಅಭಿವೃದ್ಧಿಗೊಳಿಸಲು ಹತ್ತು ಹದಿನೆಂಟು ನಿಯಮಗಳನ್ನು ಪಾಲಿಸಲು ಅನುವು ಮಾಡಿಕೊಡಲಾಗಿದೆ. ಇದಕ್ಕಾಗಿ ಸರ್ಕಾರ ಲಕ್ಷಗಟ್ಟಲೇ ಖರ್ಚು ಮಾಡುತ್ತಿದೆ. ಇದರ ಫಲಶೃತಿ ಏನು ಎನ್ನುವ ಪ್ರಶ್ನೆಗೆ ಇಂದಿನ ಅಧ್ಯಕ್ಷರಾದ ಪ್ರೊ. ಚಂದ್ರಶೇಖರ ಪಾಟೀಲರು ಹೀಗೆ ಉತ್ತರಿಸುತ್ತಾರೆ. ''ಕನ್ನಡ ಮತ್ತು ನಮ್ಮ ಸಂಸ್ಕೃತಿ ಎನ್ನುವುದು ಒಂದು ಹಿರಿದಾದ ಮರವಿದ್ದಂತೆ. ಅದರ ಬೇರುಗಳು ಭದ್ರವಾಗಿವೆ. ಆದುದರಿಂದ ಉರುಳಿ ಹೋಗುವ ಭಯವೇ ಇಲ್ಲ''. ಚಂಪಾರವರ ಕನಸು ವಿಶಾಲವಾದುದು ಮಹತ್ತರವಾದುದು. ಅವರು ಪ್ರಾಧಿಕಾರದ ಮೂಲಕ ಬದುಕಿನ ಎಲ್ಲ ಆಯಾಮಗಳಲ್ಲಿ ಕನ್ನಡವನ್ನು ಕಟ್ಟಿ ಬೆಳೆಸುವ ಗುರಿ ಇಟ್ಟುಕೊಂಡಿದ್ದಾರೆ. ಅದರ ಐದು ಮುಖ್ಯ ಹಂತಗಳು ಈ ರೀತಿ ಇವೆ. ಆಡಳಿತದಲ್ಲಿ ಕನ್ನಡವನ್ನು ವ್ಯಾಪಕವಾಗಿ ವ್ಯವಸ್ಥಿತವಾಗಿ ತರುವುದು. ಇದಕ್ಕಾಗಿ ಚಂಪಾರವರು ಸಿ.ಬಿ.ಐ. ಮಾದರಿಯಲ್ಲಿ ಕಚೇರಿಗಳಿಗೆ ದಿಢೀರ್ ಭೇಟಿ ನೀಡುತ್ತಾರೆ. ಕಚೇರಿಗಳಲ್ಲಿರುವ ಇಂಗ್ಲಿಷ್ ಮೊಹರುಗಳನ್ನು ವಶಪಡಿಸಿಕೊಳ್ಳುತ್ತಾರೆ. ಈ ದೆಸೆಯಲ್ಲಿ ಚಂಪಾರವರ ಕಾರ್ಯರೀತಿ ಅತ್ಯಂತ ಚುರುಕಾಗಿದೆ.

ಎರಡನೆಯದು ಸರೋಜಿನಿ ಮಹಿಷಿಯವರ ಶಿಫಾರಸ್ಸಿನ ಪ್ರಕಾರ ಕನ್ನಡಿಗರಿಗೆ ನೂರಕ್ಕೆ ನೂರರಷ್ಟು ಕೆಲಸದ ಭರವಸೆ. ಈ ಬಗ್ಗೆಯೂ ಚಂಪಾರವರ ಕಾರ್ಯ ಚಟುವಟಿಕೆ ತ್ವರಿತವಾಗಿಯೇ ನಡೆದಿದೆ.

ಇತ್ತೀಚೆಗೆ ರಾಜ್ಯಪಾಲರಿಂದ ಪ್ರಾಧಿಕಾರಕ್ಕೆ ಆದೇಶವೊಂದು ಲಭಿಸಿದೆ. ಅದೆಂದರೆ ಶಿಕ್ಷಣ ರಂಗದಲ್ಲಿಯೂ ಕನ್ನಡದ ಅಭಿವೃದ್ಧಿಗಾಗಿ ಪ್ರಾಧಿಕಾರ ಯೋಜನೆಗಳನ್ನು ಹಮ್ಮಿಕೊಳ್ಳಬಹುದಾಗಿದೆ. ಈ ಬಗ್ಗೆ ಸಮಿತಿಗಳ ರಚನೆಯಾಗಿದೆ. ಸರ್ಕಾರದ ಹೊಸ ನಿಯಮದಂತೆ 1994ರ ನಂತರ ಪ್ರಾರಂಭಿಸಿದ ಹೊಸ ಶಾಲೆಗಳು 1ನೇ ತರಗತಿಯಿಂದ 4ನೇ ತರಗತಿಯವರೆಗೆ ಎಲ್ಲ ವಿಷಯಗಳನ್ನು ಕನ್ನಡದಲ್ಲಿ ಕಲಿಸುತ್ತೇವೆ ಎಂದು ಕರಾರು ಪತ್ರ ಬರೆದುಕೊಟ್ಟರೆ ಮಾತ್ರ ಸರ್ಕಾರ ಶಾಲೆ ನಡೆಸಲು ಪರವಾನಗಿ ನೀಡುತ್ತದೆ. ಹೊಸ ಶಾಲೆಯನ್ನು ಪ್ರಾರಂಭಿಸುವವರು ಉತ್ಸಾಹದಿಂದ ಕರಾರು ಪತ್ರವನ್ನೇನೋ ಬರೆದು ಕೊಡುತ್ತಾರೆ. ಆದರೆ ನಂತರ ನಡೆಯುವ ವಿದ್ಯಮಾನವೇ ಬೇರೆ ಮಾನ್ವಿಯಂಥ ಸಣ್ಣ ಊರಿನಲ್ಲಿದ್ದ ಶಾಲೆಯೊಂದಕ್ಕೆ ಚಂಪಾರವರೇ ದಿಢೀರ್ ಭೇಟಿ ನೀಡಿ ಅವರು ಕದ್ದು ಮುಚ್ಚಿ ನಡೆಸುತ್ತಿದ್ದ ಇಂಗ್ಲಿಷ್ ಪಠ್ಯಪುಸ್ತಕಗಳನ್ನು ವಶಪಡಿಸಿಕೊಂಡು ಆ ಶಾಲೆಗೆ ಎಚ್ಚರಿಕೆ ನೀಡಿ ಬಂದಿದ್ದಾರೆ!

ಚಂಪಾರವರ ನಾಲ್ಕನೆಯ ಯೋಜನೆ ಸ್ವಾಗತಾರ್ಹವಾಗಿದೆ. ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಕಾಲೇಜುಗಳಲ್ಲಿ ತಾಂತ್ರಿಕ ಶಿಕ್ಷಣವನ್ನು ಹೊರತುಪಡಿಸಿ (ಬಿ.ಇ.,. ಎಂ.ಬಿ.ಬಿ.ಎಸ್) ಉಳಿದ ಪದವಿಗಳಲ್ಲಿ ದ್ವಿಭಾಷಾ ಶಿಕ್ಷಣ ಕ್ರಮವನ್ನು ಜಾರಿಗೊಳಿಸುವುದು. ಉದಾಹರಣೆಗೆ ಬಿ.ಕಾಂನ ಅಕೌಂಟೆನ್ಸಿಯಾಗಲೀ, ಕಾಮರ್ಸ್ ವಿಷಯವಾಗಲೀ, ಬಿ.ಎ.ನ ಚರಿತ್ರೆ, ಸಮಾಜಶಾಸ್ತ್ರ ಮತ್ತು ಬಿ.ಎಸ್.ಸಿ.ಯ ಪ್ರಾಣಿಶಾಸ್ತ್ರ, ರಸಾಯನಶಾಸ್ತ್ರ ಇತ್ಯಾದಿಗಳನ್ನು ಬೋಧಿಸುವಾಗ ವಿಷಯ ಮುಖ್ಯವಾಗಬೇಕೇ ಹೊರತು ಭಾಷೆ ಅಲ್ಲ. ಅನೇಕ ಕಾಲೇಜುಗಳಲ್ಲಿ ಈ ಶಿಕ್ಷಕರು ಕೆಟ್ಟ ಇಂಗ್ಲಿಷ್ ಬಳಸುವುದನ್ನು ಚಂಪಾ ಉದಾಹರಿಸುತ್ತಾರೆ. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಇಂಗ್ಲಿಷ್‌ನಲ್ಲಿ ಬಹಳ ಹಿಂದೆ ಉಳಿದು ಈ ವಿಷಯಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟ ಪಡುತ್ತಿದ್ದಾರೆ. ಈ ದ್ವಿಭಾಷಾ ಬೋಧನೆ ಕ್ರಮದಿಂದ ವಿಷಯಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಮತ್ತು ಐ.ಕ್ಯೂ ಬೆಳೆಸಿಕೊಳ್ಳುವಲ್ಲಿ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಅನುಕೂಲವಾಗುತ್ತದೆ. ಪರೀಕ್ಷೆಗಳಲ್ಲಿ ಉತ್ತರಿಸುವಾಗ ಸಹ ಇಂಗ್ಲಿಷ್ ಅಥವಾ ಕನ್ನಡದ ಆಯ್ಕೆ ವಿದ್ಯಾರ್ಥಿಗಳಿಗೆ ಲಭಿಸಿದರೆ ಕೆಟ್ಟ ಇಂಗ್ಲಿಷ್‌ಗಿಂತ

## ರಾಜ್ಯೋತ್ಸವ ವಿಶೇಷ

ಮಾತೃಭಾಷೆ ನಿಜಕ್ಕೂ ಆಪ್ಯಾಯವಾಗುತ್ತದೆ.

ಚಂಪಾರವರ ಐದನೇ ಯೋಜನೆ ಬೆಕ್ಕಸ ಬೆರಗುಗೊಳಿಸುತ್ತದೆ. ಅವರ ದೂರದೃಷ್ಟಿಗೆ ಇದೊಂದು ಉತ್ತಮ ಉದಾಹರಣೆಯಾಗಿದೆ. ಅದೆಂದರೆ ಎಲ್ಲ ವಲಯಗಳಲ್ಲಿ ಕಂಪ್ಯೂಟರ್ ಬಳಸಿ ಅದನ್ನು ಕನ್ನಡೀಕೃತಗೊಳಿಸುವುದು. ಇದು ಕಂಪ್ಯೂಟರ್ ಯುಗ. ಟಿ.ವಿ.ಯಂತೆಯೇ ಮನೆಮನೆಯಲ್ಲಿ ಕಂಪ್ಯೂಟರ್ ಸ್ಥಾನ ಪಡೆಯುತ್ತಿದೆ. ಇದನ್ನು ಕನ್ನಡದ ಸಾಧ್ಯತೆಯನ್ನಾಗಿ ಬೆಳೆಸಬೇಕು. ವಿಜ್ಞಾನದ ಜೊತೆಯಲ್ಲಿಯೇ ಭಾಷೆ ಬೆಳೆಯಬೇಕು. ಭಾಷೆಯನ್ನು ವಿಜ್ಞಾನ ಬೆಳೆಸುತ್ತದೆ. ವಿಜ್ಞಾನವನ್ನೂ ಭಾಷೆ ಬೆಳೆಸುತ್ತದೆ. ಇವರೆಡರ ಅವಿನಾ ಸಂಬಂಧ ಅಜರಾಮರ. ಇದಕ್ಕೆ ಕನ್ನಡವೂ ಹೊರತಲ್ಲ. ವಿಜ್ಞಾನದೊಂದಿಗೆ ಸರಿಗಟ್ಟುವಾಗ ಕನ್ನಡ ಎಂದೂ ಹಿಂದೆ ಬಿದ್ದಿಲ್ಲ. ಆದ್ದರಿಂದಲೇ ಚಂಪಾರವರು ಮರದ ಉದಾಹರಣೆ ತೆಗೆದುಕೊಳ್ಳುತ್ತಾರೆ. ''ನಮ್ಮ ಮರದ ಬೇರುಗಳು- ಭಾಳಾ ಆಳದಲ್ಲಿ ಅದಾವ್ರಿ. ಇನ್ನ ಐವತ್ಯಾಕೆ ನೂರು ವರ್ಷಗಳಾಚೆಗೂ ಕನ್ನಡಕ್ಕ ಏನೇನೂ ಧಕ್ಕಿ ಬರಾದಿಲ್ರೀ'' ಎನ್ನುವಾಗ ಅವರ ಕಣ್ಣುಗಳಲ್ಲಿ ಅದೇ ಕನಸುಗಳೇ ವ್ಯಾಪಿಸುತ್ತವೆ.

ಆದರೆ ಕನ್ನಡ ಪ್ರಾಧಿಕಾರದ ಮೊದಲ ಅಧ್ಯಕ್ಷರಾದ ಜಿ.ನಾರಾಯಣರವರ ವಿಚಾರ ದೃಷ್ಟಿ ತೀರಾ ಬೇರೆಯ ಚಿತ್ರವನ್ನು ಬಿಡಿಸಿಡುತ್ತದೆ ಚಂಪಾರವರ ಕಲ್ಪನೆ, ಕನಸುಗಳೆಲ್ಲ ಇವರ ದೃಷ್ಟಿಯಲ್ಲಿ ಗಗನ ಕುಸುಮ. ಅವರೆನ್ನುತ್ತಾರೆ ''ಇಂದು ಇಡೀ ವಿಶ್ವವೇ ಇಂಗ್ಲಿಷಿನ ಮಹಾಪೂರದಲ್ಲಿ ಮುಳುಗುತ್ತಿದೆ. ನೆಹರೂ ಕಾಲದಲ್ಲಿ ರಷ್ಯಾದಲ್ಲಿ ಇಂಗ್ಲಿಷ್ ನಾಲ್ಕನೆಯ ಭಾಷೆಯಾಗಿತ್ತು. ರಷ್ಯನ್, ಸ್ಪೇಯಿನ್, ಫ್ರೆಂಚ್ ಮತ್ತು ಇಂಗ್ಲಿಷ್, ಈ ಕ್ರಮದಲ್ಲಿ ಇಂಗ್ಲಿಷ್ ಆದ್ಯತೆ ಪಡೆಯುತ್ತಿತ್ತು. ಇಂದು ಅಲ್ಲಿ ಇಂಗ್ಲಿಷ್ ಎರಡನೆಯ ಸ್ಥಾನಕೇರಿದೆ. ಅನೇಕ ಕಡೆಗಳಲ್ಲಿ ರಷ್ಯನ್ ಭಾಷೆಗೆ ಸಮಾನಾಂತರವಾಗಿಯೂ ಇಂಗ್ಲಿಷ್ ಚಲಿಸುತ್ತಿದೆ. ಚೀನಾದಲ್ಲಿ, ಜಪಾನ್‌ನಲ್ಲಿ ಸಹ ಇಂಗ್ಲಿಷ್ ಕ್ರಮೇಣ ಸ್ಥಾನ ಗಳಿಸುತ್ತಿದೆ. ಭಾರತದಲ್ಲಿ ಬೆಂಗಾಲಿಗಳು ಎಷ್ಟೊಂದು ಭಾಷಾಭಿಮಾನಿಗಳಾಗಿದ್ದರು. ಈಗ ಅಲ್ಲಿ ಸಹ ಇಂಗ್ಲಿಷ್ ಅನಿವಾ ರ್ಯವಾಗುತ್ತಿದೆ. ನಾವು ಬಹುರಾಷ್ಟ್ರೀಯ ಕಂಪನಿಗಳನ್ನು ಸ್ವಾಗತಿಸುತ್ತಿದ್ದೇವೆ. ಗ್ಲೋಬಲೈಸೇಷನ್ ಬಗ್ಗೆ ದೊಡ್ಡದೊಡ್ಡ ಮಾತನಾಡುತ್ತೇವೆ. ಸರ್ಕಾರದ ಕಾರ್ಯಾಚರಣೆಗಳನ್ನು ವಿಕೇಂದ್ರಿಕರಣಗೊಳಿಸಿ ಎನ್ನುತ್ತೇವೆ. ಇವುಗಳ ಮುಖ್ಯ ಸ್ವರೂಪವನ್ನು ಮರೆತೇ ಬಿಡುತ್ತೇವೆ. ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಸಂಸ್ಕೃತಿಯನ್ನು ಹೊತ್ತು ತರುತ್ತವೆ. ಗ್ಲೋಬಲೈಸೇಷನ್‌ನಿಂದಾಗಿ ಒಂದೇ ಸಂಸ್ಕೃತಿ ಸಾರ್ವತ್ರಿಕವಾಗುತ್ತಿದೆ. ಸರ್ಕಾರದ ವಿಕೇಂದ್ರೀಕರಣದಿಂದಾಗಿ ನಗರದ ನಡವಳಿಕೆಗಳು ರೀತಿನೀತಿಗಳು ತಾಲ್ಲೂಕುಗಳಿಗೆ ತಲುಪುತ್ತಿವೆ. ಇದು ವಿಶ್ವದಲ್ಲೆಲ್ಲಾ ಅಪ್ಪಳಿಸುತ್ತಿರುವ ಚಂಡಮಾರುತ. ಇದರಲ್ಲಿ ಪ್ರಾದೇಶಿಕ ಭಾಷೆಯನ್ನುಳಿಸಿಕೊಳ್ಳಬೇಕೆನ್ನುವವರು ಪ್ರವಾಹದ ವಿರುದ್ಧ ಈಜುವ ಸಾಹಸ ಮಾಡಬೇಕು. ಇದು ಎಷ್ಟರ ಮಟ್ಟಿಗೆ ಎಷ್ಟು ದಿನ ಸಾಧ್ಯ ಎನ್ನುವ ಪ್ರಶ್ನೆಯೇ ನಮ್ಮ ನಿಮ್ಮಂತಹವರಿಗೆ ಮುಖ್ಯ''

ನಾರಾಯಣರ ಚಿಂತನೆ ನಿರಾಸೆಯಿಂದ ಕೂಡಿದೆ ಎನಿಸಿದರೂ ಅದರಲ್ಲಿರುವ ವಾಸ್ತವವನ್ನು ಮರೆಯುವಂತಿಲ್ಲ. ''ಮೂರು ವರ್ಷ ಪ್ರಾಧಿಕಾರಕ್ಕಾಗಿ ದುಡಿದೆ. ಕನ್ನಡ ನಿರ್ಲಕ್ಷಿಸಿದ ಒಬ್ಬನೇ ಒಬ್ಬ ಅಧಿಕಾರಿಯ ವಿರುದ್ಧ ಕ್ರಮ ತೆಗೆದುಕೊಳ್ಳಲಾಗಲಿಲ್ಲ. ಹೇಗೆ ಕ್ರಮ ತೆಗೆದುಕೊಳ್ಳುವುದು? ನಾವು ಯಾರಿಗೆ ಕ್ರಮ ತೆಗೆದುಕೊಳ್ಳಿ ಎಂದು ಸೂಚಿಸುತ್ತೇವೆಯೋ ಅವರಿಗೂ ಕನ್ನಡ ಬರುವುದಿಲ್ಲವಲ್ಲ'' ಎನ್ನುವ ಅವರ ಮಾತಿನಲ್ಲಿ ಮೇಲ್ನೋಟಕ್ಕೆ ಹಾಸ್ಯ ಕಂಡರೂ ಒಳಗಿನ ದುಃಖದ ದನಿ ಅರಿವಾಗದೇ ಇರುವುದಿಲ್ಲ. ಸರ್ಕಾರದ ಆಡಳಿತ ಯಂತ್ರದಲ್ಲಿ ಮಂತ್ರಿ ಮತ್ತು IAS ಅಧಿಕಾರಿಗಳದ್ದು ಬಹಳ ಮುಖ್ಯ ಪಾತ್ರ. ಮಂತ್ರಿಗಳಿಗೆ ಪಾರ್ಟಿ ಮತ್ತು ಸೀಟುಗಳನ್ನು ಉಳಿಸಿಕೊಳ್ಳುವುದೇ ಮಹಾ ಪ್ರಯಾಸವಾಗಿರುವಾಗ ಭಾಷೆಯ ಕಡೆ ಲಕ್ಷ್ಯ ಎಲ್ಲಿ ಹರಿದೀತು? ಇನ್ನು ಎಲ್ಲಿಂದಲೋ ನಿಯುಕ್ತರಾಗಿ ಬಂದ IAS ಅಧಿಕಾರಿಗಳಿಗೆ ಜನ ಸಾಮಾನ್ಯರ ಜೊತೆ ನೇರ ಸಂಪರ್ಕ ಇಲ್ಲವಾದ್ದರಿಂದ ಕನ್ನಡ ಅನಿವಾರ್ಯವಾಗುವುದೇ ಇಲ್ಲ. ಈಗ ನಮ್ಮ ಗೌರ್ನರ್‌ರವರನ್ನೇ ತೆಗೆದುಕೊಳ್ಳಿ, ಎರಡು ಟರ್ಮ್ ಮುಗಿಸಿದ್ದಾರೆ ಇಲ್ಲಿ. ಆದರೆ ಕನ್ನಡ ಕಲಿತಿಲ್ಲ. ಈ ಎರಡು ಪ್ರಬಲ ಶಕ್ತಿಗಳಿಗಿಂತ ಕೆಳಗಿನ ಹಂತದವರಿಂದ ಏನೂ ಮಾಡಲು ಸಾಧ್ಯವಿಲ್ಲ ಎನ್ನುವುದೇ ನಾರಾಯಣರ ಕೊರಗು. ಅವರ ಪ್ರಕಾರ ಬೆಂಗಳೂರು ಅಷ್ಟೇ ಅಲ್ಲ ಇಡೀ ಕರ್ನಾಟಕವೇ ಕಾಸ್ಮಾಪಾಲಿಟನ್ ಸ್ಟೇಟ್!

ನಾರಾಯಣರ ಅಭಿಪ್ರಾಯದಂತೆ ಇವತ್ತು ಕನ್ನಡ ಸಮೃದ್ಧಿಯಾಗಿ ಉಳಿದಿರುವುದು ಅನಕ್ಷರಸ್ಥರಲ್ಲಿ ಮಾತ್ರ. ವಿದ್ಯಾವಂತರ ಸಂಖ್ಯೆ ಹೆಚ್ಚಿದಂತೆಲ್ಲಾ ಕನ್ನಡದ ಸಾಧ್ಯತೆಗಳು ಕಡಿಮೆಯಾಗುತ್ತಾ ಹೋಗುತ್ತವೆ. ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಓದಿದ ಮನೆ ಯಜಮಾನ ತನ್ನ ಮನೆಗೆ ತರಿಸುವುದು ಇಂಗ್ಲಿಷ್ ದಿನ ಪತ್ರಿಕೆಯನ್ನೇ! ತನ್ನ ಮುಂದಿನ ಪೀಳಿಗೆಗೆ ಕಲಿಸುವುದು ಇಂಗ್ಲಿಷನ್ನೇ. ನಗರದ ಪರಿಸರದಲ್ಲಿ ಇಂಗ್ಲಿಷ್ ವೇಗವಾಗಿ ಬೆಳೆಯುತ್ತಿರುವಾಗ ಹಳ್ಳಿಗಳಲ್ಲಿ ಇಂಗ್ಲಿಷ್ ಕಲಿಯಬೇಡಿ ಕನ್ನಡ ಮಾತ್ರ ಕಲಿಯಿರಿ ಎಂದರೆ ಹಳ್ಳಿ ಮಕ್ಕಳಿಗೆ ದ್ರೋಹ ಮಾಡಿದಂತೆ! ತಮ್ಮ ಮಕ್ಕಳಿಗೆ ಯಾವ ಭಾಷೆ ಕಲಿಸಬೇಕು, ಯಾವ ವಿದ್ಯೆ ಕಲಿಸಬೇಕು ಎನ್ನುವುದನ್ನು ನಿರ್ಧಾರ ಮಾಡುವವರು ತಂದೆ ತಾಯಿಯರು. ಅವರಿಗೆ ಈ ವಿಷಯದಲ್ಲಿ ಸಂಪೂರ್ಣ ಸ್ವಾತಂತ್ರ್ಯವಿದೆ. ಅವರಿಗೆ ಕನ್ನಡವನ್ನೇ ಕಲಿಸಿ ಎಂದು ಕಟ್ಟುಪಾಡು ವಿಧಿಸುವುದಕ್ಕೆ ಯಾವ ಕಾನೂನಿಂದ ಸಾಧ್ಯವಿದೆ? ಇದು ನಾರಾಯಣರು ಕೇಳುವ ಪ್ರಶ್ನೆ. ಚಿಂತಕರನ್ನು ಮತ್ತಷ್ಟು ಚಿಂತನೆಯ ಆಳಕ್ಕೆ ತಳ್ಳುವ ಪ್ರಶ್ನೆ!

ಹಾಗೆಂದು ನಾರಾಯಣರು ತೀರಾ ಹತಾಶರಾಗಿಲ್ಲ. ಇನ್ನೂ ಐವತ್ತೇಕೆ ನೂರು ವರ್ಷಗಳ ನಂತರವೂ ಕನ್ನಡ ಅಳಿಯುವುದಿಲ್ಲ. ಆದರೆ ಅದು ಹೇಗೆ ಉಳಿಯುತ್ತದೆ ಯಾವ ಮಟ್ಟದಲ್ಲಿ ಉಳಿಯುತ್ತದೆ ಎನ್ನುವ ಪ್ರಶ್ನೆಗೆ ಉತ್ತರ ಈಗ ತೀರಾ ಅಸ್ಪಷ್ಟ.

ಕನ್ನಡ ಪ್ರಾಧಿಕಾರದ ಮತ್ತೊಬ್ಬ ಮಾಜಿ ಅಧ್ಯಕ್ಷರಾದ ಡಾ.ಎಚ್.ನರಸಿಂಹಯ್ಯನವರು ಒಂದೇ ಒಂದು ವರ್ಷ ಅಧ್ಯಕ್ಷರಾಗಿದ್ದವರು. ಈ ದಿನಗಳಲ್ಲಿ ಅವರು ತಮ್ಮ ಶಿಕ್ಷಣ ಸಂಸ್ಥೆಯ ಕಾರ್ಯಗಳಲ್ಲಿ ಬಿಡುವಿಲ್ಲದೆ ತೊಡಗಿಕೊಂಡಿರುವ ಕಾರಣ ಅವರೊಂದಿಗೆ ಮಾತನಾಡಲು ಸಾಧ್ಯವಾಗಲಿಲ್ಲ.

ಚಂಪಾರವರ ಕನಸು ಕಲ್ಪನೆಗಳು ಜಿ. ನಾರಾಯಣರ ವಾಸ್ತವ ಚಿಂತನೆಗಳು ಕನ್ನಡ ಕಾಳಜಿಯುಳ್ಳವರನ್ನು ಎಚ್ಚರಿಸಬೇಕು. ಪ್ರತಿಯೊಂದಕ್ಕೂ ಸರ್ಕಾರವನ್ನೇ ಅವಲಂಬಿಸದೆ ನಮ್ಮ ಭಾಷೆ ಸಂಸ್ಕೃತಿಗಳ ಬಗ್ಗೆ ಮನ ಮನದಲ್ಲಿ ಮನೆ ಮನೆಯಲ್ಲಿ ಅಭಿಮಾನ ಮೂಡಿದಾಗ ಮಾತ್ರ ಯಾವ ಕಾವಲು ಸಮಿತಿಯೂ ಬೇಕಾಗುವುದಿಲ್ಲ! ಇಲ್ಲಿ ಒಂದು ಸಣ್ಣ ತಮಿಳರ ಉದಾಹರಣೆ ಅಪ್ರಸ್ತುತವಾಗಲಾರದು. ಮಲೇಶಿಯಾದ ಪೆನಾಂಗ್ ಎಂಬೆಡೆ ನಾವು ಹೋದಾಗ ತಮಿಳು ಶಾಲೆಯೊಂದು ತನ್ನ ಶತಮಾನೋತ್ಸವವನ್ನು ಆಚರಿಸುತ್ತಿತ್ತು. ಆ ಬಗ್ಗೆ ವಿಚಾರಿಸಿದಾಗ ಅಂಥ ಶಾಲೆಗಳು ಮಲೇಶಿಯಾದಲ್ಲೆಲ್ಲಾ ನೂರಾರಿರುವುದಾಗಿ ತಿಳಿಯಿತು. ತಮಿಳರು ಹೋದಲ್ಲೆಲ್ಲಾ ತಮ್ಮ ಭಾಷೆ ಮತ್ತು ಸಂಸ್ಕೃತಿಗಳನ್ನು ಬಲವಾಗಿ ಸ್ಥಾಪಿಸುತ್ತಾರೆ. ಅವನ್ನು ದಟ್ಟವಾಗಿ ಪ್ರೀತಿಸುತ್ತಾರೆ.

ತಮಿಳರ ಪಕ್ಕದಲ್ಲೇ ಇರುವ ನಮಗೇಕೆ ಇದು ಸಾಧ್ಯವಾಗಿಲ್ಲ? ■

ರಾಜ್ಯೋತ್ಸವ ವಿಶೇಷ



# ರಾಜಕೀಯ ಚದುರಂಗದಲ್ಲಿ ಪ್ರಜೆಗಳ ಪರದಾಟ

ನಮ್ಮ ನಾಡ ಹಬ್ಬ ಬಂದಿದೆ. ಈ ಸಂದರ್ಭದಲ್ಲಿ ನಾಡಿನ ಜನತೆಯ ಆಶೋತ್ತರಗಳ ಮತ್ತು ಬೆಳವಣಿಗೆಯ ಬಗ್ಗೆ ಚಿಂತಿಸಬೇಕಾಗಿದೆ. ಪ್ರತಿ ಬಾರಿ ನಾಡ ಹಬ್ಬದ ಸಮಯದಲ್ಲಿ ನಮ್ಮ ಜನ, ನೆಲ, ಸಂಸ್ಕೃತಿ, ಸಾಹಿತ್ಯ ಇತ್ಯಾದಿಗಳ ಅಭಿವೃದ್ಧಿ ಬಗ್ಗೆ ಸುದೀರ್ಘ ಭಾಷಣಗಳ ಮೂಲಕ ಚಪ್ಪಾಳೆ ಗಿಟ್ಟಿಸುವ ನಾವು, ಅವು ಎಷ್ಟರ ಮಟ್ಟಿಗೆ ಕಾರ್ಯಗತವಾಗಿವೆ ಎಂಬುದರ ಮೌಲ್ಯಮಾಪನ ಮಾಡಿಕೊಳ್ಳಬೇಕಾಗಿದೆ.

■ ಎ.ಪಿ. ನಿರಂಜನಾರಾಧ್ಯ





ಕಳೆದ ಒಂದು ವರ್ಷದ ಅವಧಿಯಲ್ಲಿ ರಾಜ್ಯದ ರಾಜಕೀಯ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ ನಾವು ಎತ್ತ ಸಾಗುತ್ತಿದ್ದೇವೆಂಬುದರ ಅರಿವು ನಮಗಾಗುತ್ತದೆ.

ಒಂದು ವರ್ಷದ ಅವಧಿಯಲ್ಲಿ ಸಾಮಾಜಿಕ ಜೀವನದಲ್ಲಿ ನೈತಿಕ ಮೌಲ್ಯಗಳು ಕುಸಿದಿವೆ. ಪ್ರತಿನಿತ್ಯ ದಿನ ಪತ್ರಿಕೆಯಲ್ಲಿ ವರದಿಯಾಗುವ ಕೊಲೆ, ಸುಲಿಗೆ, ಅತ್ಯಾಚಾರ, ಹಿಂದುಳಿದ ವರ್ಗಗಳ ಮೇಲಿನ ದೌರ್ಜನ್ಯಗಳ ಸಂಖ್ಯೆ ಹೆಚ್ಚುತ್ತಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ನಾಯಕರು ನಡೆದು ತೋರಿಸಿದ ಆದರ್ಶಗಳನ್ನು ನಮ್ಮ ಇಂದಿನ ರಾಜಕಾರಣಿಗಳು ಗಾಳಿಗೆ ತೂರಿದ್ದಾರೆ. ಅಧಿಕಾರದ ಲಾಲಸೆ, ಸ್ವಜನ ಪಕ್ಷಪಾತ, ಜಾತೀಯತೆ ಮತ್ತು ಅವಕಾಶವಾದೀ ರಾಜಕೀಯ ನಮ್ಮ ರಾಜಕೀಯ ಪಕ್ಷಗಳ ಮೂಲ ತತ್ವಗಳಾಗಿವೆ.

ರಾಜ್ಯದಲ್ಲಿ ಆಡಳಿತ ಯಂತ್ರ ಕುಸಿದಿದೆ. ಯಾವ ಅಭಿವೃದ್ಧಿ ಕೆಲಸಗಳು ನಡೆಯುತ್ತಿಲ್ಲ. ಕಳೆದ ನವೆಂಬರ್ ಡಿಸೆಂಬರ್‌ನಲ್ಲಿ ಆಡಳಿತವನ್ನು ಚುರುಕುಗೊಳಿಸುವ ಮತ್ತು ಜನರಿಗೆ ಹೆಚ್ಚು ಹತ್ತಿರವಾಗಬೇಕೆಂಬ ಹೆಸರಿನಲ್ಲಿ 7 ಹೊಸ ಜಿಲ್ಲೆಗಳನ್ನು ರಚಿಸಲಾಯಿತು. ಉದ್ದೇಶ ಒಳ್ಳೆಯದೇ. ಆದರೆ ಜಿಲ್ಲಾ ರಚನೆಗಳ ನಂತರ ಅವುಗಳ ಕಾರ್ಯ ನಿರ್ವಹಣೆಗೆ ಬೇಕಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವಲ್ಲಿ ಮತ್ತು ಆಡಳಿತವನ್ನು ಚುರುಕುಗೊಳಿಸುವಲ್ಲಿ ಸರ್ಕಾರ ತೋರಿಸುವ ಬೇಜವಾಬ್ದಾರಿತನ ಆಡಳಿತ ವೈಫಲ್ಯಕ್ಕೆ ಉತ್ತಮ ಉದಾಹರಣೆ. ಜನರಿಗೆ ಹತ್ತಿರವಾಗುವ ಇವರ ಕಾರ್ಯಕ್ರಮ, ಜನರಿಂದ ದೂರವಾಗಿ



# ರಾಜ್ಯೋತ್ಸವ ವಿಶೇಷ

ಯೇ ಉಳಿದಿದೆ.

1994ರ ಚುನಾವಣೆಯ ನಂತರ ಜನತೆ ಹೊಸ ಸರ್ಕಾರದ ಬಗ್ಗೆ ಇಟ್ಟಿದ್ದ ನಂಬಿಕೆ, ವಿಶ್ವಾಸ ಇಂದು ಇಲ್ಲದಾಗಿದೆ. ಜನರಿಗೆ ಸರ್ಕಾರದ ಬಗ್ಗೆ ಭ್ರಮನಿರಸನವಾಗಿದೆ. ಕಾಂಗ್ರೆಸ್ ಪಕ್ಷವನ್ನು ಸೋಲಿಸಿ ಅಧಿಕಾರದ ಗದ್ದಿಗೆ ಹಿಡಿಯಲು ಮುಂದಾದ ಜನತಾದಳ ಅಂದು ತನ್ನ ನಾಯಕನನ್ನು ಆರಿಸಿದ ರೀತಿ ಎಲ್ಲರಿಗೂ ಮುಜುಗರವನ್ನುಂಟು ಮಾಡಿತ್ತು. ಜನತಾದಳದಲ್ಲಿನ ವೈಮನಸ್ಯ, ವಿಶೇಷವಾಗಿ ಗೌಡ, ಪಟೇಲ್ ಮತ್ತು ಹೆಗಡೆಯವರಲ್ಲಿನ ಇಂದಿನ ಸಂಬಂಧ ಏನೆಂಬುದರ ಸೂಕ್ಷ್ಮತೆ ಅಂದೇ ಸ್ಪಷ್ಟವಾಗಿ ಕಂಡು ಬಂತು. ಆದರೆ ಅದನ್ನು ಗುರುತಿಸಿ ಸರಿಪಡಿಸಿಕೊಳ್ಳುವ ವ್ಯವಧಾನವನ್ನು ಯಾವ ರಾಜಕಾರಣಿಯು ಪ್ರದರ್ಶಿಸಲಿಲ್ಲ.

ಕರ್ನಾಟಕದ ರಾಜಕಾರಣದಲ್ಲಿ ಇತ್ತೀಚಿನ ಅಪಾಯಕಾರಿ ಬೆಳವಣಿಗೆಯೆಂದರೆ ಜಾತೀಯತೆ ಮತ್ತು ಸ್ವಜನ ಪಕ್ಷಪಾತ. ಜಾತೀಯತೆ ರಾಜಕೀಯದಲ್ಲಿ ಹೊಸ ವಿಚಾರವಲ್ಲವೆಂಬುದು ಎಲ್ಲರಿಗೂ ತಿಳಿದಿದೆ. ಆದರೆ, ಇಂದು ಜಾತಿ ರಾಜಕೀಯ ತನ್ನ ಪರಾಕಾಷ್ಠೆಯನ್ನು ಮುಟ್ಟಿದೆ. ರಾಜಕೀಯದಲ್ಲಿ ಜಾತಿ ಮತ್ತು ಜನರ ಒಳಿತಿನ ಪ್ರಶ್ನೆ ಬಂದಾಗ, ಉತ್ತಮ ರಾಜಕಾರಣಿಯಾದವನು ಎರಡನೆಯದನ್ನು ಆಯ್ಕೆ ಮಾಡಿಕೊಳ್ಳುತ್ತಾನೆ. ರಾಜ್ಯದ ರಾಜಕಾರಣದಲ್ಲಿ ಜನತೆಯ ಹಿತಕ್ಕಿಂತ ಸ್ವಜನ ಪಕ್ಷಪಾತ, ಅಧಿಕಾರದ ಲಾಲಸೆ ಮೇಲುಗೈ ಸಾಧಿಸಿವೆ. ಗೌಡರು ಜಾತಿ ರಾಜಕೀಯದಲ್ಲಿ ತೊಡಗಿದ್ದಾರೆಂದು ಎಲ್ಲರೂ ಹೇಳುತ್ತಾರೆ. ಅದನ್ನು ಒಪ್ಪುವುದು ಬಿಡುವುದು ಗೌಡರಿಗೆ ಬಿಟ್ಟ ವಿಚಾರ. ಆದರೆ ಒಂದು ಮಾತಂತು ಸತ್ಯ. ಇಂಥ ರಾಜಕೀಯದಿಂದ ಬೇಸತ್ತ ದೇಶಪಾಂಡೆ, ಕೋದಂಡರಾಮಯ್ಯ, ಕೆ.ಬಿ. ಶಾಣಪ್ಪ ಹೆಗಡೆಯವರ ವೇದಿಕೆ ಸೇರಿದರೆ ಆರ್.ಎಲ್. ಜಾಲಪ್ಪ ಕಾಂಗ್ರೆಸ್ ಸೇರಿದರು. ಇವರೆಲ್ಲರೂ ಹಿಂದುಳಿದ ವರ್ಗದ ನಾಯಕರುಗಳೆ. ಈ ವಿಚಾರವನ್ನು ಗೌಡರು ಸೇರಿದಂತೆ ದಳದ ಎಲ್ಲ ನಾಯಕರು ಗಂಭೀರವಾಗಿ ಪರಿಗಣಿಸಬೇಕಾಗಿತ್ತು.

ರಾಜ್ಯದಲ್ಲಿ ಎರಡು ಪ್ರಬಲ ಕೋಮುಗಳಿವೆ ನಿಜ. ಆದರೆ ರಾಜಕೀಯ ಈ ನಾಡಿನ ಎಲ್ಲ ಜನತೆಗೆ ಸಂಬಂಧಿಸಿದ ವಿಷಯ. ಉತ್ತಮ ರಾಜಕಾರಣಿಯು ಎಲ್ಲ ವರ್ಗದ, ಜಾತಿಯ ಜನರನ್ನು ಒಟ್ಟಿಗೆ ಕೊಂಡೊಯ್ಯುವ ಪ್ರಯತ್ನ ಮಾಡಬೇಕೇ ಹೊರತು ಜಾತೀಯತೆಯ ವಿಷ ಬೀಜ ಬಿತ್ತಬಾರದು.

ಪ್ರತಿ ಬಾರಿ ಒಂದು ಜನಾಂಗದ ಮುಖಂಡ ಮುಖ್ಯಮಂತ್ರಿಯಾದಾಗ ಆ ಜಾತಿ ಮೇಲುಗೈ ಸಾಧಿಸುವುದು ರಾಜ್ಯದ ರಾಜಕಾರಣದ ದುರದೃಷ್ಟಕರ ಬೆಳವಣಿಗೆ. ಜಾತಿ ರಾಜಕಾರಣದಲ್ಲಿ ಮುಳುಗಿಸಿರುವವರು. ಗಮನಿಸಬೇಕಾದ ವಿಪರ್ಯಾಸವೊಂದಿದೆ, ನಿದರ್ಶನಕ್ಕಾಗಿ ಗೌಡರ ಭದ್ರಕೋಟೆಯೆನಿಸಿರುವ ಹಾಸನ ಕ್ಷೇತ್ರವನ್ನೇ ತೆಗೆದುಕೊಳ್ಳಿ. ಅಲ್ಲಿ 2.75 ಲಕ್ಷ ಒಕ್ಕಲಿಗರು, 2.5 ಲಕ್ಷ ಪರಿಶಿಷ್ಟ ಜಾತಿ ಮತ್ತು ಪಂಗಡದವರು, 1.75 ಲಕ್ಷ ಲಿಂಗಾಯಿತರು, 1.5 ಲಕ್ಷ ಮುಸಲ್ಮಾನರು ಮತ್ತು 3.5 ಲಕ್ಷ ಹಿಂದುಳಿದ ವರ್ಗದ ಮತದಾರರಿದ್ದಾರೆ. ಯಾವುದೇ ಒಂದು ಕೋಮಿನ ರಾಜಕೀಯ ಭವಿಷ್ಯ ಉಳಿದ ಕೋಮಿನ ಜನರನ್ನು ಅವಲಂಬಿಸಿದೆ ಎಂಬ ಕಟು ಸತ್ಯವನ್ನು ಮರೆಯಬಾರದು. ಆದ್ದರಿಂದಲೇ ಜಾತಿ ರಾಜಕಾರಣ ಹುರುಳಿಲ್ಲದ ಮತ್ತು ಹಸಿಸುಳ್ಳಿನ ರಾಜಕಾರಣವಾಗುತ್ತದೆ.

ರಾಜ್ಯ ರಾಜಕಾರಣದ ಇನ್ನೊಂದು ವಲಯದಲ್ಲಿ ಕೇಳಿ ಬರುವ ಸುದ್ದಿಯೆಂದರೆ ಪಟೇಲರು ನೇರ ನುಡಿಯ ವ್ಯಕ್ತಿ ಮತ್ತು ಬೇರೆಯವರ ವಿಚಾರದಲ್ಲಿ ಮೂಗು ತೂರಿಸುವುದಿಲ್ಲ. ಪಟೇಲರು ಹಿರಿಯ ರಾಜಕಾರಣಿಗಳಲ್ಲೊಬ್ಬರು ಮತ್ತು ಸಮಾಜವಾದಿ ಹಿನ್ನೆಲೆಯುಳ್ಳವರು ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಕೆಲವು ಸೂಕ್ಷ್ಮ ರಾಜಕೀಯ ಸಮಸ್ಯೆಗಳು ಎದುರಾದಾಗ ಅವರು ತಮ್ಮ ರಾಜಕೀಯ ಬದ್ಧತೆಯನ್ನು ಪ್ರದರ್ಶಿಸಲಿಲ್ಲ. ಕಾವೇರಿ ವಿಚಾರದಲ್ಲಿ ಅವರು ತೆಗೆದುಕೊಂಡ ನಿರ್ಧಾರ ಅವರಲ್ಲಿ ದೂರದೃಷ್ಟಿ ಮತ್ತು ವೈಜ್ಞಾನಿಕ ನಿಲುವಿನ ಕೊರತೆಯನ್ನು ಎತ್ತಿ ತೋರಿಸುತ್ತದೆ. ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ, ರಾಷ್ಟ್ರೀಯ ಜಲನೀತಿ ರೂಪಿಸುವವರೆಗೆ ಕಾವೇರಿ ನದಿ ಪ್ರಾಧಿಕಾರದ ರಚನೆಗೆ ಕಾಂಗ್ರೆಸ್ ಸೇರಿದಂತೆ ಎಲ್ಲ ಪಕ್ಷಗಳು ವಿರೋಧ ವ್ಯಕ್ತಪಡಿಸಿದವು. ಈ ಸಂದರ್ಭದಲ್ಲಿ ಎಲ್ಲ ಪಕ್ಷಗಳ, ನಾಡುನುಡಿಗೆ ಶ್ರಮಿಸಿದ ಎಲ್ಲ ಹಿರಿಯ ನಾಯಕರ ಸಮ್ಮುಖದಲ್ಲಿ ಚರ್ಚಿಸಿ, ಎಲ್ಲರೂ ಒಪ್ಪುವ ಒಂದು ನಿರ್ಧಾರ ತೆಗೆದುಕೊಳ್ಳಬಹುದಿತ್ತು. ಆದರೆ ಪಟೇಲರು ಅತ್ಯಂತ ಸಂಕುಚಿತ ರಾಜಕಾರಣ ಮಾಡಿದರು. ಕಾಂಗ್ರೆಸ್ ಅಥವಾ ಸಂಯುಕ್ತರಂಗ ಕೇಂದ್ರದಲ್ಲಿದ್ದಾಗ ಈ ನಿರ್ಧಾರ ತೆಗೆದುಕೊಂಡಿದ್ದರೆ ಬಿಜೆಪಿ ಯಾವ ರಾಜಕಾರಣ ಮಾಡುತ್ತಿತ್ತೆಂಬ ಸೂಕ್ಷ್ಮತೆಯನ್ನು ಅರ್ಥ ಮಾಡಿಕೊಳ್ಳದಿರುವುದು ಪಟೇಲರ ರಾಜಕೀಯ ವೈಫಲ್ಯಕ್ಕೊಂದು ನಿದರ್ಶನ.

ಪಟೇಲರೇ ಹೇಳುವಂತೆ ''ನಾನು ನನ್ನ ಎಲ್ಲ ಸಹೋದ್ಯೋಗಿಗಳಿಗೆ ಅವರ ಇಲಾಖೆಗಳಿಗೆ ಸಂಬಂಧಿಸಿದಂತೆ ಕಾರ್ಯ ನಿರ್ವಹಿಸಲು ಮುಕ್ತ ಸ್ವಾತಂತ್ರ್ಯ ನೀಡಿದ್ದೇನೆ'' ಎಂಬುದು ಒಪ್ಪಬಹುದಾದ ಮಾತು. ಕೇವಲ, ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲು ಅನುವು ಮಾಡಿ ಕೊಟ್ಟರೆ ಸಾಲದು. ಅವರು ಜನತೆಯ ಹಿತಕ್ಕೆ ಧಕ್ಕೆಯಾಗದ ರೀತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆಯೇ ಎಂಬುದನ್ನು ಮನವರಿಕೆ ಮಾಡಿಕೊಳ್ಳುವುದು ಒಬ್ಬ ಮುಖ್ಯಮಂತ್ರಿಯ ಕರ್ತವ್ಯ. ಇದು ಮುಕ್ತತೆಯನ್ನು ನೀಡುವುದಕ್ಕಿಂತಲೂ ಮಹತ್ವದ ವಿಚಾರ. ಪಟೇಲರು ಈ ಸತ್ಯವನ್ನು ಮರೆತಿರುವುದರಿಂದಲೇ ಅವರಿಂದು ಈ ಸ್ಥಿತಿ ತಲುಪಿದ್ದಾರೆ. ಆಡಳಿತದ ಬಗ್ಗೆ ಶಾಸಕರು ಮತ್ತು ದಳದ ಪ್ರತಿನಿಧಿಗಳು ತೀವ್ರ ವಿರೋಧ ವ್ಯಕ್ತಪಡಿಸಿದಾಗ, ಆಡಳಿತವನ್ನು ಚುರುಕುಗೊಳಿಸಿ ಉತ್ತಮ ಫಲಿತಾಂಶ ನೀಡುವ ಸಲುವಾಗಿ ತಿಪ್ಪಗೊಂಡನಹಳ್ಳಿಯಲ್ಲಿ ಸಭೆ ನಡೆಯಿತು. ಆದರೆ, ಆ ಸಭೆಯ ತೀರ್ಮಾನ ತೀರ್ಮಾನವಾಗೇ ಉಳಿದಿದೆ. ಆಡಳಿತ ಯಂತ್ರ ಎಷ್ಟು ನಿಷ್ಕ್ರಿಯವಾಗಿದೆ ಎಂಬುದಕ್ಕೆ ಕೆಳಗಿನ ಒಂದು ಉದಾಹರಣೆ ಸಾಕು.

ಈ ವರ್ಷದ ಪ್ರಾರಂಭದಲ್ಲಿ ನಾವು ಕಂಡ ಅಮಾನುಷ ಘಟನೆಯೆಂದರೆ ಉತ್ತರ ಕರ್ನಾಟಕದಲ್ಲಿ ರೈತರ ಆತ್ಮಹತ್ಯೆ. ವರದಿಗಳ ಪ್ರಕಾರ ಸುಮಾರು 27 ಜನ ರೈತರು ಅಸು ನೀಗಿದ್ದಾರೆ. ಇಂಥ ದಾರುಣ ಪರಿಸ್ಥಿತಿಯಲ್ಲಿ ಸರ್ಕಾರ ರೈತರ ಸಂಕಷ್ಟದ ಬಗ್ಗೆ ಲಜ್ಜೆಗೇಡಿತನದಿಂದ ವರ್ತಿಸಿದ್ದು, ''ಮಣ್ಣಿನ ಮಗನನ್ನು'' ಒಳಗೊಂಡಂತೆ ಯಾರೂ ರೈತರ ಸಹಾಯಕ್ಕೆ ಧಾವಿಸದೇ ಹೋದದ್ದು, ಸೂಕ್ತ ಸಮಯದಲ್ಲಿ ಪರಿಹಾರ ಪ್ರಕಟಿಸದೆ ಇದ್ದದ್ದು ಮತ್ತಷ್ಟು ಪ್ರಾಣಗಳನ್ನು ಬಲಿ ತೆಗೆದುಕೊಂಡಿತು. ಸಮಿತಿಯ ರಚನೆ, ಸಚಿವರ ಮತ್ತು ಸದಸ್ಯರ ಭೇಟಿ ಮುಂತಾದ ಸರ್ಕಾರದ ಆಶ್ವಾಸನೆ ಮೊಸಳೆ ಕಣ್ಣೀರಿನ ನಾಟಕ. ಜನಪರ ಸರ್ಕಾರವೊಂದು ಮಾಡುವ ಕೆಲಸವಲ್ಲ. ಬದಲಾಗಿ ಶರವೇಗದಲ್ಲಿ ಅವರ ನೆರವಿಗೆ ಧಾವಿಸಿ ಸೂಕ್ತ ಪರಿಹಾರ ಪ್ರಕಟಿಸುವುದರ ಮೂಲಕ ಮುಂದಿನ ಅನಾಹುತಗಳನ್ನು

ತಪ್ಪಿಸಬೇಕಾಗಿತ್ತು. ಸರ್ಕಾರದ ನೀತಿ ಹೇಗಿತ್ತೆಂದರೆ 'ಶೆಟ್ಟಿ ಸಿಂಗಾರವಾಗುವುದರಲ್ಲಿ ಪಟ್ಟಣ ಸೂರೆಯಾಯ್ತು" ಎಂಬಂತಿತ್ತು. ಆತ್ಮಹತ್ಯೆ ಪ್ರಕರಣ ಜಾಸ್ತಿಯಾದವೇ ಹೊರತು ಸರ್ಕಾರ ಸಹಾಯ ಮಾಡಲಿಲ್ಲ.

ಒಟ್ಟಾರೆ ರಾಜಕೀಯ ವಲಯದಲ್ಲಿ ಕೇಳಿ ಬರುವ ಪ್ರಬಲ ಕೂಗೆಂದರೆ ಪಟೇಲರು ಹೆಚ್ಚು ಹೆಚ್ಚು ರಾಜಕೀಯ ಸನ್ಯಾಸದತ್ತ ಸಾಗುತ್ತಿದ್ದಾರೆ. ಮುಖ್ಯಮಂತ್ರಿಯೊಬ್ಬರಿಗೆ ಇರಬೇಕಾದ ಸಕ್ರಿಯ ರಾಜಕಾರಣ ಅವರಲ್ಲಿ ಇಂದು ಇಲ್ಲವಾಗಿದೆ. ರಾಜಕೀಯದಲ್ಲಿ ಮುಂದುವರಿಯಬೇಕು ಮತ್ತು ಮುಂದೆ ಬರಬೇಕೆಂಬ ಅಭಿಲಾಷೆಯುಳ್ಳ ರಾಜಕಾರಣಿಗಳಿಗೆ ಪಟೇಲರ ರಾಜಕೀಯ ನಿಷ್ಕ್ರಿಯತೆ ನಿರಾಶೆಯನ್ನುಂಟು ಮಾಡಿದೆ. ನಾಡಿನ ಜನತೆಯ ಹಿತಕ್ಕಿಂತ ಅವರ ವೈಯಕ್ತಿಕ ಜೀವನದಲ್ಲಿ ಹೆಚ್ಚು ಆಸಕ್ತಿ ಹೊಂದಿದಂತೆ ಕಾಣುತ್ತದೆ.

ಆದರೆ, ಇದಕ್ಕೆ ವಿರುದ್ಧವಾಗಿ ಗೌಡರು ಮಾಜಿ ಪ್ರಧಾನಿಗಿಂತಲೂ ಹೆಚ್ಚಾಗಿ, ಒಬ್ಬ ಸಕ್ರಿಯ ರಾಜಕಾರಣಿಯಾಗಿ ವಿರಾಜಿಸುತ್ತಿದ್ದಾರೆ. ಅವರಲ್ಲಿ ಆ ಲವಲವಿಕೆಯಿದೆ. ಆದ್ದರಿಂದಲೇ ಕರ್ನಾಟಕದ ಜನತಾದಳದಲ್ಲಿ ಬಿಕ್ಕಟ್ಟು ಉಂಟಾದ ಎಲ್ಲ ಸಂದರ್ಭಗಳಲ್ಲಿ ಗೌಡರು ಜೀವಂತವಾಗಿರಲು ಸಾಧ್ಯವಾಗಿದೆ. ದೇವೇಗೌಡರು ತಮ್ಮ ಈ ರಾಜಕೀಯ ಸಕ್ರಿಯತೆಯನ್ನು ನಾಡಿನ ಜನತೆಯ ಒಳಿತಿಗಾಗಿ ಉಪಯೋಗಿಸಬೇಕಾಗಿದೆ.

ಹೆಗಡೆ ವಿಚಾರದಲ್ಲಿ ಮಾಡಿದ ತಪ್ಪು ಕಳೆದ ಲೋಕಸಭಾ ಚುನಾವಣೆಯಲ್ಲಿ ಯಾವ ಫಲ ನೀಡಿತು ಎಂಬುದರ ಅರಿವು ಈಗಾಗಲೇ ಆಗಿದೆ. ಅದೇ ರೀತಿ ಎಲ್ಲ ನಾಯಕರು ಒಟ್ಟಿಗೆ ಕೆಲಸ ನಿರ್ವಹಿಸಿದಾಗ ದೊರೆತ ಪ್ರತಿಫಲದ ಚಿತ್ರಣವೂ ಇದೆ. ಎರಡನ್ನು ಹೋಲಿಸಿ ನೋಡಿದಾಗ ಯಾವುದು ಸೂಕ್ತ ಎಂಬುದನ್ನು ಈ ನಾಯಕರು ಮನವರಿಕೆ ಮಾಡಿಕೊಳ್ಳಬೇಕಾಗಿದೆ. ಇತ್ತೀಚಿನ ದಳದ ರಾಜಕೀಯ ಬಿಕ್ಕಟ್ಟು ಮತ್ತು ಒಳ ಜಗಳಗಳನ್ನು ಗಮನಿಸಿದರೆ ಇವರು ದಾರಿ ತಪ್ಪಿದ್ದಾರೆಂಬುದರ ಅರಿವು ಶ್ರೀಸಾಮಾನ್ಯನಿಗೆ ಉಂಟಾಗಿದೆ.

ಆದರೆ ರೈಲುಗಾಡಿ ಹಳಿ ತಪ್ಪುವ ಮುನ್ನ ಹೆಚ್ಚೆತ್ತುಕೊಳ್ಳಬೇಕಾಗಿದೆ. ಜಾತೀಯತೆಯ ಕ್ಷುಲ್ಲಕ ರಾಜಕಾರಣಕ್ಕೆ ಇತಿಶ್ರೀಯಾಡಬೇಕಾಗಿದೆ. ನಾಡಹಬ್ಬದ ಈ ಸಂದರ್ಭದಲ್ಲಿ ವಿಷಪೂರಿತ ಮತ್ತು ಅಪವಿತ್ರ ರಾಜಕೀಯದ ಬದಲಾಗಿ ನಾಡಿನ ಜನತೆಗೆ ನೀಡಿದ್ದ ವಚನಗಳ ಪರಿಪಾಲನೆಯಾಗಬೇಕಾಗಿದೆ. ನಮ್ಮಲ್ಲಿ ಮಾತು ಆಡಿದರೆ ಮುಗಿಯಿತು ಎನ್ನುತ್ತಾರೆ. ಆದರೆ ಇದಕ್ಕೆ ಅಪವಾದವಾಗಿ ಇಂಗ್ಲಿಷ್ ಕವಿಯೊಬ್ಬ ಮಾತು ಆಡಿದರೆ ಅದು ಜೀವಿಸಲು ಪ್ರಾರಂಭಿಸುತ್ತದೆ ಎನ್ನುತ್ತಾನೆ. ಚುನಾವಣೆ ಸಂದರ್ಭದಲ್ಲಿ ಆಡಿದ ಮಾತು ಜನರ ಮಧ್ಯೆ ಜೀವಂತವಾಗಿದೆ. ನುಡಿದಂತೆ ನಡೆಯದೇ ಹೋದರೆ ನೆಲ ಕಚ್ಚುವುದು ಖಚಿತ. ■

ರಾಜ್ಯೋತ್ಸವ ವಿಶೇಷ

ಎಂ.ಎಸ್. ನರಸಿಂಹಮೂರ್ತಿ

# ಜಯ ಕನ್ನಡ ಮಾತೆ!

"ಸ್ವಲ್ಪ ಈ ಮೂಟೆ ಇಳಿಸ್ಕೋ ಮಹರಾಯ, ಬಹಳ ಭಾರ ಇದೆ" ಎಂದು ವಿಶ್ವ ಕೂಗಿದ. ಸ್ಕೂಲಿನ ಫ್ಲೋಲೆ ಸ್ಕೂಲು ಹಾಕಿಕೊಂಡು ಅವನು ಅಟ್ಟಕ್ಕೆ ಕೈ ಹಾಕಿದ್ದರೂ ಅಟ್ಟಹಾಸವಿರಲಿಲ್ಲ. ಮಾತಲ್ಲಿ ನಯವಿರಲಿಲ್ಲ, ಭಯವಿತ್ತು. ಕಾರಣ ಗೋಣಿ ಚೀಲ ಬಹಳ ಭಾರವಿತ್ತು.

ಹೆಗಲಿಗೆ ಹೆಗಲು ಕೊಟ್ಟು ದುಡಿಯುವುದೆಂದರೆ ನನಗೆ ಇಷ್ಟ. ಅದು ಯಾರ ಹೆಗಲಾದರೂ ಆಗಿರಬಹುದು. ಹಗಲಾದರೂ ಪರವಾಗಿಲ್ಲ. ಗೋಣಿಗೆ ಹೆಗಲು ಕೊಟ್ಟೆ. ಭಾರ ಭೂಮಿಗಿಳಿಯಿತು.

"ಏನಿದೆಯೋ ಇದರಲ್ಲಿ ನಿನ್ನ ತಾತನ ಆಸ್ತಿ?"

"ನಮ್ಮೆಲ್ಲರ ತಾಯಿ ಕಣೋ" ಎಂದ ವಿಶ್ವ ಇಂಗ್ಲಿಷಿನ ಗನಿಬ್ಯಾಗನ್ನು ಬಿಡಿಸಿದ. ಒಳಗಡೆ ಒಂದು beautiful ಆದ statue, Four hands ಉ.

"ಯಾವುದೋ ಇದು? ಕಂಚಿ ಕಾಮಾಕ್ಷೀನಾ?"

"ಕಂಚಿ ಕಾಮಾಕ್ಷೀನೂ ಅಲ್ಲ, ಮಧುರೆ ಮೀನಾಕ್ಷೀನೂ ಅಲ್ಲ, ಕನ್ನಡ ಭುವನೇಶ್ವರಿ ಕಣೋ" ಎಂದ ವಿಶ್ವ, ವಿಗ್ರಹದ ಮೇಲಿದ್ದ ಧೂಳು

"ರಾಜ್ಯೋತ್ಸವಕ್ಕೆ ಏಣಿ ಏಕೆ?"
"ಕನ್ನಡ ಇಲ್ಲದೇ ಇರೋ ಬೋರ್ಡುಗಳಿಗೆ ಟಾರ್ ಬಳಿತೀವಿ ಸಾರ್" ಒಬ್ಬ ಹೇಳಿದ.
"ಆಮೇಲೆ?"
"ಅವರಿಂದ ಚಂದಾ ವಸೂಲಿ ಮಾಡ್ತೀವಿ ಸಾರ್"





## ಸ್ಪೆಲ್ಲಿಂಗು

ರಜಾ ಚೀಟಿ ಇಂಗ್ಲಿಷಿನಲ್ಲಿತ್ತು. ಮೋಹನ ಮೂರು ದಿನ ಬಿಟ್ಟು ಆಫೀಸಿಗೆ ಬಂದಾಗ ಮ್ಯಾನೇಜರ್ ಕೇಳಿದರು.

''ಮೋಹನ್, ಹೈ ಫೀವರ್ ಅಂತ ಬರೆದಿದ್ರಿ, ಈಗ ಹೇಗಿದೆ?''

''ವಾಸಿ ಸಾರ್. ನಿಮ್ಮ ಹತ್ರ ನಿಜ ಹೇಳಬೇಕೆಂದರೆ ನನಗೆ ಜ್ವರ ಬಂದಿರಲಿಲ್ಲ. ಡೈಯೇರಿಯಾ ಆಗಿತ್ತು. ಆದರೆ ಡೈಯೇರಿಯಾಗೆ ಸ್ಪೆಲ್ಲಿಂಗ್ ತಿಳೀದೆ Fever ಅಂತ ಬರೆದೆ''

'ಹೌದೌದು, diarrhoea ಸ್ಪೆಲ್ಲಿಂಗು ಡೈಯೇರಿಯಾಗಿಂತಲೂ ಕಷ್ಟ'' ಎಂದರು ಮ್ಯಾನೇಜರ್.

ಕೊಡವಿದ. ಮೂರಡಿ ಎತ್ತರದ ಕಂಚಿನ ವಿಗ್ರಹವದು. ಕೈಗಳ, ರಟ್ಟೆಯ ಬಳಿ ಇದ್ದ ಜಿರಲೆ ಮೊಟ್ಟೆಗಳನ್ನು ಕೆರೆದು ತೆಗೆದ. ದೇವಿಯ ಮುಖದಲ್ಲಿ ಅಪಾರವಾದ ತೇಜಸ್ಸು.

''Brasso ಹಾಕಿ ಮುಖ ತೊಳೆದ ಮೇಲೆ ಇನ್ನೂ ಚೆನ್ನಾಗಿರುತ್ತೆ ಗೊತ್ತಾ?'' ಎಂದ ವಿಶ್ವ.

'' ಆದರೆ ಈ ದೇವಿಗೆ ಅಜ್ಞಾತವಾಸ ಯಾಕೆ? ಕಸಕ್ಕಿಂತ ಕಡೆಯಾಗಿ ಗೋಣಿ ಚೀಲದಲ್ಲಿ ಕಟ್ಟಿ ಮೇಲೆ ಎಸೆದಿದ್ದೀಯಲ್ಲ?''

''ಇದು ಕರ್ನಾಟಕ ಮರಿ. ವರ್ಷಪೂರ್ತಿ ಪೂಜೆ ಮಾಡೋಕೆ ನಮಗೆ ಬಿಡುವು ಎಲ್ಲಿರುತ್ತೆ? ಕನ್ನಡ ಮಾಸ ಅರ್ಥಾತ್ ನವೆಂಬರಿನಲ್ಲಿ ಈ ವಿಗ್ರಹಕ್ಕೆ ಪೂಜೆ ಸಲ್ಲಿಸಿ ಕನ್ನಡಕ್ಕೆ ಜಯ್ ಹೇಳಿದರೆ ಮುಂದಿನ ಹನ್ನೊಂದು ತಿಂಗಳು ಆರಾಮ''

''ಇರೋಕೆ ಕನ್ನಡದ ಭೂಮಿ ಬೇಕು, ಉಸಿರಾಡೋಕೆ ಕನ್ನಡದ ಗಾಳಿ ಬೇಕು, ಕುಡಿಯೋಕೆ ಕಾವೇರಿ ನೀರು ಬೇಕು ಆದರೆ ಮಾತಾಡೋಕೆ ಕನ್ನಡ ಬೇಡವಾ?''

''ಈ ಪ್ರಶ್ನೆ ನಮ್ಮ ಕನ್ನಡ ಅನುಷ್ಠಾನ ಮಂತ್ರಿಗಳನ್ನು ಕೇಳು''

''ಯಾಕೆ?''

''ಅವರ ಮಕ್ಕಳೆಲ್ಲಿ ಇಂಗ್ಲಿಷ್ ಮೀಡಿಯಂ. ಅವರ ಭಾಷಣಗಳೂ ಭಾಷಾತೀತವಾಗಿರುತ್ತೆ. ಆದರೆ ಕನ್ನಡವನ್ನು ಬಳಸಿ ಅಂತಾರೆ''

ನನಗೆ ಡಾ. ಎಚ್ಚೆನ್ ನೆನಪಾದರು. ಪ್ರತಿನಿತ್ಯ ಕಬ್ಬನ್ ಪಾರ್ಕಿಗೆ ಹೋಗುವ ಅವರು ಈವರೆಗೆ ಕಂಡಿರುವುದು ಬರೀ ಇಂಗ್ಲಿಷ್ ಮೀಡಿಯಂ ನಾಯಿಗಳನ್ನು ಮಾತ್ರ! ಸುಂದರ ತರುಣಿಯರ ಕಣ್ಮಣಿಗಳವು. ದುಬಾರಿ ಕುನ್ನಿಗಳು.

'' Come here ಜಿಮ್ಮಿ, Hop in, go and get the ball, come on shake hand" ಎಂದು ಮುದ್ದಾಗಿ ಇಂಗ್ಲಿಷಿನಲ್ಲಿ ಮಾತಾಡಿಸಿ ನಾಯಿಯ ಮೂತಿಗೆ ಮುತ್ತೂ ಕೊಡುತ್ತಾರೆ ಲಲನೆಯರು. ಡಾ. ಎಚ್ಚೆನ್ ಅವರಿಗೆ ಒಂದು ಬಾರಿ ತೆಲುಗು ಮೀಡಿಯಂ ನಾಯಿ ಸಿಕ್ಕಿತ್ತಂತೆ!

''ರಾ ಇಕ್ಕಡ, ಬಿಸ್ಕತ್ ಕಾವಾಲಂಟೆ ಬೌಬೌ ಅನು'' ಎಂದು ಆ ಪ್ರಮದೆ ನಾಯಿಗೆ ಮುದ್ದು ಮಾಡುತ್ತಿದ್ದುದನ್ನು ಹಲವಾರು ಮಂದಿ ನೋಡಿದವರಿದ್ದಾರೆ. ತಾನೂ ಬೌಬೌ ಅನ್ನುತ್ತಿದ್ದಳಂತೆ! ಈ ಜನ ಮನುಷ್ಯರ ಜೊತೆ ಕನ್ನಡ ಮಾತಾಡುವುದಿಲ್ಲ

**ಈ ಜನ ಮನುಷ್ಯರ ಜೊತೆ ಕನ್ನಡ ಮಾತಾಡುವುದಿಲ್ಲ ನಿಜ. ಆದರೆ ಕರ್ನಾಟಕದಲ್ಲಿರುವ ನಾಯಿಗಳಿಗೂ ಇಂಗ್ಲಿಷ್ ಕಲಿಸುವುದು ಎಷ್ಟು ಸಮಂಜಸ?**

## ಸಂವಿಧಾನದಲ್ಲಿ ಕನ್ನಡ

1949ರ ನವೆಂಬರ್ 26ನೇ ತಾರೀಖು ಭಾರತ ಒಂದು ಲೋಕತಂತ್ರಾತ್ಮಕ ಗಣರಾಜ್ಯವಾಗಿ ತನ್ನದೇ ಆದ ಸಂವಿಧಾನವನ್ನು ಅಂಗೀಕರಿಸಿತು. ಸಂವಿಧಾನದ 17ನೇ ಭಾಗದಲ್ಲಿ ಅಧಿಕೃತ ಭಾಷೆಯನ್ನು ಕುರಿತು ಹೇಳಲಾಗಿದೆ. ಅನುಚ್ಛೇದಗಳು 343 ಮತ್ತು 344 ಒಕ್ಕೂಟದ ಅಧಿಕೃತ ಭಾಷೆಯಾದ ಹಿಂದಿಯನ್ನು ಕುರಿತು ತಿಳಿಸುತ್ತವೆ. ಪ್ರಾದೇಶಿಕ ಭಾಷೆಗಳಿಗೆ ಅನುಚ್ಛೇದ 345, 346, 347 ಮೀಸಲಾಗಿವೆ. ಆಯಾ ವಿಧಾನಮಂಡಲಗಳಲ್ಲಿ ಅಧಿಕೃತವಾಗಿ ಆಯ್ಕೆ ಮಾಡಿ ನಿರ್ಧರಿಸುವ ಭಾಷೆ ರಾಜ್ಯಭಾಷೆಯಾಗುತ್ತದೆ. ರಾಜ್ಯದ ಎಲ್ಲ ವ್ಯವಹಾರ, ಕಾನೂನು, ಆಡಳಿತ ಪ್ರತಿಯೊಂದೂ ರಾಜ್ಯಭಾಷೆಯಲ್ಲೇ ನಡೆಯಬೇಕು ಎಂಬ ನಿಯಮವಿದೆ. ತಮಿಳು, ತೆಲುಗು ಮರಾಠಿ ಮೊದಲಾದ ಪ್ರಾದೇಶಿಕ ಭಾಷೆಗಳು ಈ ನಿಯಮವನ್ನು ಅನುಸರಿಸಿವೆ. ಆದರೆ ಕನ್ನಡ? ಕನ್ನಡಿಗರಿಂದಲೇ ಕನ್ನಡ ಮೂಲೆಗುಂಪಾಗುತ್ತಿದೆ. ಸ್ನೇಹಕೂಟಗಳಲ್ಲಿ, ಸಭೆಸೆಮಿನಾರುಗಳಲ್ಲಿ ಇಂಗ್ಲಿಷ್ ಮೆರೆಯುವುದನ್ನು ಕಾಣಬಹುದು. ಬೆಂಗಳೂರಿನ ಶೇಕಡಾ 90 ರಷ್ಟು ಚಿತ್ರಮಂದಿರಗಳಲ್ಲಿ ಕನ್ನಡೇತರ ಚಿತ್ರಗಳು ಸೊಗಸಾಗಿ ಓಡುತ್ತವೆ. ಕನ್ನಡಕ್ಕೆ ಇನ್ನೆಲ್ಲಿಯ ಸ್ಥಾನ?



## ರಾಜ್ಯೋತ್ಸವ ವಿಶೇಷ



### ಫಸ್ಟ್ ನೈಟು!

''ನಂಗೆ ಸೆಕೆಂಡ್ ಮ್ಯಾರೇಜ್ ಕಣೋ.
ಫಸ್ಟ್ ನೈಟ್‌ಗೇ ಬಂದು ನನಗೆ
ಸಹಾಯ ಮಾಡಬೇಕು''
ಎಂದು ಮೋಹನ
ಹೇಳಿದಾಗ ಗಾಬರಿಯಾದ ವಿಶ್ವ

''ನಾನು ಬಂದು ಸಹಾಯಾನಾ?
ಮೊದಲನೇ ಮ್ಯಾರೇಜಲ್ಲಿ
ನಿನಗೆ ಅನುಭವ ಆಗಿರಬೇಕಲ್ಲ?''

''ಓಹೋ! ಹಾಗೆ ತಿಳಿದೆಯಾ?
ನಂಗೆ ನವೆಂಬರ್ 2ndಗೆ ಮದುವೆ.
Nov Ist night ಬಾರೋ
ಅಂದೆ ಕಣೋ. ಥೂ, ಅಯೋಗ್ಯ''
ಎಂದು ಮೋಹನ ರೇಗಿದ.

ನಿಜ. ಆದರೆ ಕರ್ನಾಟಕದಲ್ಲಿರುವ ನಾಯಿಗಳಿಗೂ ಇಂಗ್ಲಿಷ್ ಕಲಿಸುವುದು ಎಷ್ಟು ಸಮಂಜಸ? ಇಂಗ್ಲಿಷರು ಆಳುತ್ತಿದ್ದಾಗ ಮೆಕಾಲೆ ಸಲಹೆಗಳನ್ನು ಅನುಷ್ಠಾನಕ್ಕೆ ತಂದು ಭಾರತದ ಶಿಕ್ಷಣ ಪದ್ಧತಿಯಲ್ಲಿ ಇಂಗ್ಲಿಷಿನ ಪಾರ್ಥೇನಿಯಂ ಬೀಜ ಬೆರೆಸಿದ್ದಾಯ್ತು. ಅದು ಎಂತಹ ಪ್ರಬಲ ಬೀಜ ಎಂದರೆ ಪೋಷಿಸದಿದ್ದರೂ ಟಿಸಿಲು ಒಡೆದು ಬೀಜ ಉದುರಿಸುವ ಪಾರ್ಥೇನಿಯಂ ಗಿಡಕ್ಕಿಂತ ಅನಿಷ್ಟವಾದ ರಕ್ತಬೀಜಾಸುರ! ಕನ್ನಡವನ್ನು ಮೂಲೆಗುಂಪು ಮಾಡಲು ಎಲ್ಲ ರೀತಿಯಲ್ಲೂ ನಮ್ಮ ದೈನಂದಿನ ವ್ಯವಹಾರ ನೆರವಾಗುತ್ತಿರುವುದು ಶೋಚನೀಯ.

ವಿಶ್ವ ದೇವಿಯ ವಿಗ್ರಹಕ್ಕೆ ಹಿತ್ತಾಳೆ ಪಾಲಿಷ್ ಹಚ್ಚಿ ನಿಗಿನಿಗಿ ಮಾಡಿದ. ಕನ್ನಡ ಕಳೆ ನಗನಗ ಹೊಳೆಯುತ್ತಿತ್ತು.

''ಮುಂದಿನ ಕಾರ್ಯಕ್ರಮ ಏನಪ್ಪ?'' ಎಂದೆ.

''ರಾಜ್ಯೋತ್ಸವ ಕಣಯ್ಯ. ಸಿದ್ಧತೆಗಳು ಆಗ್ತಾ ಇವೆ. ನೋಡು, ನಮ್ಮ ಹುಡುಗರು ಬರ್ತಾ ಇದ್ದಾರೆ''

ಎಂಟು ಹತ್ತು ಮಂದಿ ಹೈದರು ಕೈಲಿ ಡಬ್ಬ, ಬ್ರಶ್ಶು, ಏಣಿ ಹಿಡಿದು ಬಂದಿದ್ದರು.

''ರಾಜ್ಯೋತ್ಸವಕ್ಕೆ ಏಣಿ ಏಕೆ?''

''ಕನ್ನಡ ಇಲ್ಲದೇ ಇರೋ ಬೋರ್ಡುಗಳಿಗೆ ಟಾರ್ ಬಳಿತೀವಿ ಸಾರ್'' ಒಬ್ಬ ಹೇಳಿದ.

''ಆಮೇಲೆ?''

''ಅವರಿಂದ ಚಂದಾ ವಸೂಲಿ ಮಾಡ್ತೀವಿ ಸಾರ್''

''ಆಮೇಲೆ?''

''ನವೆಂಬರ್ ಆಗೋವರೆಗೆ ಅವರ ಬೋರ್ಡು ಹಾಗೇ ಇರುತ್ತೆ. ಡಿಸೆಂಬರ್‌ನಲ್ಲಿ ಅವರು ಹೊಸ ಇಂಗ್ಲಿಷ್ ಬೋರ್ಡ್ ಹಾಕ್ತಾರೆ ಸಾರ್''

''ಆಗ ಸುಮ್ನೆ ಇರ್ತೀರಾ?''

''ರಾಜ್ಯೋತ್ಸವ ಮುಗಿದಿರುತ್ತಲ್ಲ ಸಾರ್?''

ನನಗೆ ತಲೆ ಕೆಡಲು ಆರಂಭವಾಗಿತ್ತು. ವಿಶ್ವ ಮುಗುಳ್ನಗುತ್ತಿದ್ದ.

''ಅಲ್ಲಯ್ಯ, ಟಾರ್ ಬಳಿದರೆ ಕನ್ನಡ ಉದ್ಧಾರ ಆಗುತ್ತಾ?''

''ಅಭ್ಯಾಸ ಆಗಿದೆ ಕಣೋ. ಕಂಟೋನ್ಮೆಂಟು, ಕಮರ್ಷಿಯಲ್ ಸ್ಟ್ರೀಟ್ ಕಡೆಯವರು ನಮಗೆ ಫೋನ್ ಮಾಡಿ ಕೇಳ್ತಾರೆ - ಸಾರ್, ಟಾರ್ ಬಳಿಯೋಕೆ ಯಾವಾಗ ಬರ್ತೀರ? ಹೋದವರ್ಷ ಇಷ್ಟು ಹೊತ್ತಿಗೆ ಬಂದಿದ್ರಿ - ಅಂತಲೂ ಹೇಳ್ತಾರೆ''

''ಯಾವುದೋ ಕಂದಾಚಾರದಂತೆ ಕನ್ನಡದ ಕೆಲಸ ಮಾಡಿದರೆ ಅದು ಉದ್ಧಾರ ಆಗುತ್ತಾ?''

''ಕನ್ನಡ ನಂಬಿಕೊಂಡ್ರೆ ಜನ ಉದ್ಧಾರ ಆಗೊಲ್ಲ ಅಂತಿದ್ದಾರೆ. ಯಾಕೆಂದ್ರೆ ಎಲ್ಲೆಲ್ಲೂ ಕನ್ನಡೇತರರೇ ಮೆರೀತಿದ್ದಾರೆ. ಅವರೇ ನಮ್ಮ ಬಾಸುಗಳು. ಇಂಗ್ಲಿಷ್ ಅಂದರೆ ಅದೇ ಅವರಿಗೆ ವೇದ. 'ಹಲೋ' ಅನ್ನೋದು 'ಹರಿಃ ಓಂ' ಗಿಂತ ಮಿಗಿಲು! ಇಂಗ್ಲಿಷಲ್ಲಿ ಇಂಟರ್‌ವ್ಯೂ' ಭುವನೇಶ್ವರಿ ಏನು ಮಾಡೋಕೆ ಸಾಧ್ಯ?''

''ಸರ್ಕಾರಕ್ಕೆ ದೂರು ನೀಡಿದರೆ?''

ವಿಶ್ವ ಗಹಗಹಿಸಿ ನಕ್ಕ. ಅವನು ಇಂಗ್ಲಿಷಿನಲ್ಲಿ ನಕ್ಕ. ಏಕೆಂದರೆ ಆಗಾಗ 'ವೆಲ್‌ಸೆಡ್', 'ವಂಡರ್‌ಫುಲ್' ಎಂದು ಹೇಳಿ ನಕ್ಕಿದ್ದ.

''ವಿಧಾನ ಸೌಧ ಒಳಗಡೆ ಕನ್ನಡಾನ ಪೂರ್ಣ ಪ್ರಮಾಣದಲ್ಲಿ ಅನುಷ್ಠಾನಕ್ಕೆ ತರೋಕೆ ಆಗದೆ ಸುಮ್ಮನಾಗಿದೆ ಸರ್ಕಾರ. ಅವರಿಗೆ ದೂರು ನೀಡಿದರೆ ಏನು ಮಾಡ್ತಾರೆ?''




### ಚರ್ಮತಜ್ಞ

ನಕಲಿ ಡಾಕ್ಟರು ಹೊಸ ಕ್ಲಿನಿಕ್
ಪ್ರಾರಂಭ ಮಾಡಿದ ದಿನವೇ
ಪೊಲೀಸರ
ಕೈಗೆ ಸಿಕ್ಕಿ ಬಿದ್ದಾಗ ವಿಶ್ವ
ಆಶ್ಚರ್ಯಪಟ್ಟ.
''ಅವನ ಮಾರ್ಕ್ಸ್ ಕಾರ್ಡು,
ಡಿಗ್ರಿ ಸರ್ಟಿಫಿಕೇಟು
ನೋಡದೇನೇ
ಹೇಗೆ ಹಿಡಿದ್ರಿ?''
''ಆ ಬೋರ್ಡು ನೋಡಿಸಾರ್,
ಚರ್ಮತಜ್ಞ ಅಂತ
ಕನ್ನಡದಲ್ಲಿದೆ.
ಅದರ ಪಕ್ಕ ಇಂಗ್ಲಿಷಿನಲ್ಲಿ
Leather Specialist
ಅಂತ ಬರೆಸಿದ್ದಾನೆ!''

''ಕನ್ನಡ ಕಾವಲು ಸಮಿತಿಯ ಪುಟ್ಟಪ್ಪನವರು?''

''ಅವರು ಕೋಲು ಕೆಳಗಿಟ್ಟು 'ಹಾಳಾಗ್ಲಿ' ಅಂತ ಕೈಬಿಟ್ಟರು''.

''ಈಗಿನ ಚಂಪಾರವರು ? ಅಭಿವೃದ್ಧಿ ಪ್ರಾಧಿಕಾರ?''

''ಶಕ್ತಿ ಮೀರಿ ಪ್ರಯತ್ನ ಮಾಡ್ತಾ ಇದ್ದಾರೆ. ಆದರೂ ಕನ್ನಡತನ ವಿಧಾನಸೌಧದ ಒಳಗೆ ಬಂದಿಲ್ಲ. ಜನ ಇಂಗ್ಲಿಷಿನಲ್ಲಿ ಆಲೋಚನೆ ಮಾಡಿದರೆ ಅವರು ತಾನೇ ಏನು ಮಾಡಿಯಾರು?''

''ಇಂಗ್ಲಿಷ್ ಸ್ಕೂಲ್‌ಗಳಿಗೆ ಹೊಸದಾಗಿ ಅನುಮತಿ ಕೊಡಬಾರದು''

''ನಮ್ಮವರೇ ಅದಕ್ಕೆ ಕಲ್ಲು ಹಾಕಿದರಲ್ಲ? ಬೆಂಗಳೂರು ಬಹು ಭಾಷಿಗರ ನಗರ. ಆದ್ದರಿಂದ ಕನ್ನಡದ ಜೊತೆಗೆ ಎಲ್ಲ ಭಾಷೆಗಳಿಗೂ ಮಹತ್ವ ನೀಡಬೇಕು ಅಂದ್ರು''.

ಹುಡುಗರು ಟಾರ್‌ಗೆ ಸ್ವಲ್ಪ ಸೀಮೆ ಎಣ್ಣೆ ಹಾಕಿ ಹದ ಮಾಡಿಕೊಂಡರು. ರಾಜ್ಯೋತ್ಸವದ ಕೆಲಸಕ್ಕೆ ಅಣಿಯಾಗಿ ಏಣಿ ಹಿಡಿದರು.

''ಸಾರ್. ನಾವು ಹೊರಡ್ತೀವಿ''

''ಆಗಬಹುದು'' ಎಂದ ವಿಶ್ವ ''ಇಂಗ್ಲಿಷ್ ಬೋರ್ಡ್‌ಗಳನ್ನು ಬಿಡಬೇಡಿ''

''ಚಂದಾ ಜಾಸ್ತಿ ಕೊಟ್ಟರೆ ಟಾರ್ ಬಳಿಯೊಲ್ಲ ಸಾರ್''

''ಅದ್ಯಾಕೆ?'' ಎಂದೆ ನಾನು.

''ಅವರಿಗೆ ದಂಡ ವಿಧಿಸಿದಂತೆ ಆಗಿರುತ್ತಲ್ಲ? ಪಾಪ ಅವರೂ ನಮ್ಮವರೇ ಸಾರ್. ಕನ್ನಡ ಕಂಡ್ರೆ ಅವರಿಗೆ ಅಷ್ಟಕಷ್ಟೆ. ಆದರೆ ಒಳ್ಳೆಯವರು ಸಾರ್''

## ಯಾವ ರೂಟು

''ಆರೂ ಟು ಏಳು
ಬಹಳ
ಬಿಸಿ ಇರ್ತೀನಿ''
ಎಂದ ವಿಶ್ವ
ಯಾವ ರೂಟೋ
ತಿಳಿಯಲಿಲ್ಲ.
'ಏನೋ ಹಾಗಂದ್ರೆ?''
''6 to 7 (ಗಂಟೆವರೆಗೆ)
ಬಹಳ ಬಿಸಿ
ಇರ್ತೀನಿ''
ಎಂದು
ವಿವರಣೆ
ನೀಡಿದ.



## ಗಾಯತ್ರಿಯದ್ಭುತ ಮಂತ್ರ

ಕನ್ನಡದ ನೆಲದ ಪುಲ್ಲೆನಗೆ ಪಾವನ ತುಲಸಿ!
ಕನ್ನಡದ ನೆಲದ ನೀರ್ವೊನಲೆನಗೆ
ದೇವನದಿ!
ಕನ್ನಡದ ನೆಲದ ಕಲ್ಲೆನಗೆ ಶಾಲಗ್ರಾಮ ಶಿಲೆ!
ಕನ್ನಡ ದೈವ ಮೈ
ಕನ್ನಡ ಶಬ್ದಮೆನಗೋಂಕಾರ ಮೀಯೆನ್ನ
ಕನ್ನಡದ ನುಡಿಯೆ ಗಾಯತ್ರಿಯದ್ಭುತ
ಮಂತ್ರ
ಮಿನ್ನಾವುದೈ ಪೆರತು ಕನ್ನಡದ
ಸೇವೆಯಿಂದಧಿಕಮೀ
ಜಗದೊಳೆನಗೆ?

**- ಸಾಲಿ ರಾಮಚಂದ್ರರಾಯರು**

ಎಂದು ಹುಡುಗರು ಹೊರಟರು.

ನವೆಂಬರ್ ತಿಂಗಳಲ್ಲಿ ಕನ್ನಡ ಕಟ್ಟಾಳುಗಳು ಟಾರ್ ಡಬ್ಬ ತರುತ್ತಾರೆಂದು ಹೆದರಿ ಕೆಟ್ಟದಾಗಿ ಕನ್ನಡದಲ್ಲಿ ಬೋರ್ಡುಗಳನ್ನು ಹಾಕಿದ್ದು ನೆನಪಿಸಿಕೊಂಡೆ.

"Rooms Available" ಬೋರ್ಡನ್ನು ಕನ್ನಡೀಕರಿಸಿ''ರೋಮಗಳು ಬಾಡಿಗೆಗೆ ದೊರೆಯುತ್ತವೆ' ಎಂದು ಬರೆಸಲಾಗಿತ್ತು. ''ಏನು ಸ್ವಾಮಿ, ಇವುಗಳನ್ನು ಬಾಡಿಗೆಗೆ ಕೊಡುತ್ತಾರಾ? ಏನು ಕಾಲ ಬಂತಪ್ಪ!'' ಎಂದು ದಾರಿಹೋಕನೊಬ್ಬ ಗೊಣಗಿದ್ದ.

ವಿಶ್ವ ವಿಗ್ರಹಕ್ಕೆ ಅಲಂಕಾರ ಮಾಡಿದ್ದ. ಕನ್ನಡದ ಪದಗಳನ್ನು ಮೂಗ್ನಲ್ಲಿ ಹಾಡ್ತಿದ್ದ. ರಾಜರತ್ನಂ ನೆನಪಾದರು.

''ನರಕಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ-
ಮೂಗ್ನಲ್ ಕನ್ನಡ್ ಪದವಾಡ್ತೀನಿ
ನನ್ ಮನಸನ್ ನೀ ಕಾಣೆ!''

'' ಯಾಕೋ ವಿಶ್ವ ಯಾರಾದ್ರೂ ನಾಲ್ಗೆ ಸೀಳಿ, ಬಾಯಿ ಹೊಲಿಸಿದ್ದಾರಾ?'' ಎಂದೆ.

''ವರ್ಷಕ್ಕೆ ಒಂದ್ಸಲ ಹೇಳೋ ಪದ್ಯಗಳು. ಎಲ್ಲಿ ನೆನಪಿರುತ್ತೆ? ಮೂಗ್ನಲ್ಲಿ ಗೊಣಗಿದ್ರೆ ಪದಗಳು ಪ್ರಾಬ್ಲಂ ಕೊಡೊಲ್ಲ'' ಎಂದ.

'' ಈ ವರ್ಷ ಏನು ಮಾಡ್ತೀಯಪ್ಪ?''

''ಅದೇ ಮಾಮೂಲು. ಮಂತ್ರಿಗಳು ಬಂದು ಭಾಷಣ ಮಾಡ್ತಾರೆ. ಎಲ್ಲ ಹಂತಗಳಲ್ಲೂ ಕನ್ನಡ ತರ್ತೀವಿ ಅಂತಾರೆ. ನಾವು ಚಪ್ಪಾಳೆ ಹೊಡೀತೀವಿ''

''ಆಮೇಲೆ?''

''ಬ್ರೇಕ್‌ಡ್ಯಾನ್ಸು, ಚಿತ್ರ ನಟಿಯರ ಷೋ, ಕಡೇಲಿ ಸಾಹಿತಿ ಒಬ್ಬರಿಗೆ ಶಾಲು ಹಾಕಿ ಸನ್ಮಾನ''

''ಬಜೆಟ್ಟು?''

''ಆರ್ಕೆಷ್ಟ್ರಾಗೆ ಹತ್ತು ಸಾವಿರ, ಪೆಂಡಾಲಿಗೆ ಹತ್ತು ಸಾವಿರ, ಇತರೆ ಖರ್ಚು ಹತ್ತು ಸಾವಿರ,

''ಒಟ್ಟು ಮೂವತ್ತು ಸಾವಿರ ಆಯ್ತು''

''ಸಾಹಿತಿಗೆ ಸನ್ಮಾನ 300 ರೂಪಾಯಿ. ಶಾಲು, ಹಾರ, ಕಿತ್ಲೆ ಹಣ್ಣು''

''ಅದು ತಾನೇ ಯಾಕೆ?'' ಎಂದೆ ಅಸಮಾಧಾನದಿಂದ.

''ಕನ್ನಡ ರಾಜ್ಯೋತ್ಸವದ ದಿನ ಕನ್ನಡ ಸಾಹಿತಿಗೆ ಹಾರ ಹಾಕಬೇಕಪ್ಪ, ಅದೇ ಮುಖ್ಯ. ಅಂದಾಗೆ ನೀನೂ ಸಾಹಿತಿ ಅಲ್ವ? ಯಾರೂ ಸಿಗಲಿಲ್ಲ ಅಂದ್ರೆ ನೀನೇ ಬಂದು ಬಿಡು... ಕನ್ನಡದ ಕೆಲಸ ಕಣಯ್ಯ'' ಎಂದು ಕಳಕಳಿಯಿಂದ ಹೇಳಿದ.

''ಇಲ್ಲಪ್ಪ, ನನಗೆ ಬೇರೆ ಕೆಲ್ಸ ಇದೆ'' ಎನ್ನುತ್ತಾ ಅಲ್ಲಿಂದ ಜಾರಿಕೊಂಡೆ.

■

ರಾಜ್ಯೋತ್ಸವ ವಿಶೇಷ



■ ಕೋ.ಚೆನ್ನಬಸಪ್ಪ
ನಿವೃತ್ತ ನ್ಯಾಯಧೀಶರು
127, ಪಶ್ಚಿಮ ಕಾರ್ಡ್ ರಸ್ತೆ,
ಮಹಾಲಕ್ಷ್ಮಿಪುರ, ಬೆಂಗಳೂರು - 86

**ಹಿಂದೆ ಬೆಂಗಳೂರು, ಮೈಸೂರು ಮುಂತಾದ ಜಿಲ್ಲಾ ಮುಖ್ಯ ಪಟ್ಟಣಗಳಲ್ಲಿದ್ದ ಇಂಗ್ಲಿಷ್ ಮಾಧ್ಯಮದ ಪಿಡುಗು - ವಿಷಪ್ರಾಶನ - ಈಗ ಹಳ್ಳಿಗಳಿಗೂ ಹಬ್ಬಿರುವುದು ಈ ನಾಡು, ಈ ಜನ ಆತ್ಮಹತ್ಯೆಯ ನಿಶ್ಚಿತ ದಾರಿಯಲ್ಲಿ ನಡೆದಿರುವುದರ ದ್ಯೋತಕ!**

# ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ: ಕನಸು! ಬರೀ ಕನಸು!!



ನವೆಂಬರ್ ಸಂಚಿಕೆಗಾಗಿ, ರಾಜ್ಯೋತ್ಸವದ ಸಂದರ್ಭದಲ್ಲಿ ಒಂದು ವಿಶೇಷ ಲೇಖನ ಬರೆದು ಕೊಡಬೇಕೆಂದು 'ಬದುಕು' ಸಂಪಾದಕರು ದೂರವಾಣಿ ಮೂಲಕ ಕೇಳಿದರು.

'ಕಳೆದ ನಲವತ್ತೆರಡು ವರ್ಷಗಳಿಂದಲೂ ರಾಜ್ಯೋತ್ಸವದ ಬಗ್ಗೆ ಬಲ್ಲವರು, ಬುದ್ಧಿವಂತರು, ಶಿಕ್ಷಕರು, ಪ್ರೊಫೆಸರುಗಳು - ರಾಜಕಾರಣಿಗಳಂತೂ ಸೈಯೇಸೈ - ಪುಂಖಾನುಪುಂಖವಾಗಿ ಬರೆದಿದ್ದಾರೆ, ಹೇಳಿದ್ದಾರೆ. ಹೊಸದು ಹೇಳುವುದೇನಿದೆ?' ಎಂದು ಹೇಳಿದೆ.

'ನೀವು ಈ ಬಗ್ಗೆ ಯೋಚಿಸಿದ್ದೀರಿ. ಚಿಂತನೆ ಮಾಡಿದ್ದೀರಿ. ನಿಮ್ಮ ಚಿಂತನೆಯನ್ನು ಬರೆಯಿರಿ.' ಎಂದರು.

ಹಿಂದೆ ಒಮ್ಮೆ ನಾನು ನಾಗೇಶ ಶಾಸ್ತ್ರಿಗಳ ಮುಂದ 'ಎಲ್ಲ ಕವಿಗಳೂ ಹಿಂದೆ ಹೇಳಿದ್ದನ್ನೇ ಹೇಳುತ್ತಾರೆ. ಅದೇ ಇಷ್ಟ ದೈವ ಪ್ರಾರ್ಥನೆ... ಅದೇ ಪ್ರಕೃತಿ ವರ್ಣನೆ, ಅದೇ ಸ್ತ್ರೀಸೌಂದರ್ಯ ವರ್ಣನೆ ಇದೇನು.... ಈ ಕಿಸುಬಾಯಿ ದಾಸರ ಹಾಡು' ಎಂದಾಗ ಶಾಸ್ತ್ರಿಗಳು: 'ತಮ್ಮಾ ಹೊಸದನ್ನು ಯಾರೂ ಹೇಳೋದಿಲ್ಲೊ, ಹೊಸದಾಗಿ ಹೇಳ್ತಾರೆ' ಎಂದಿದ್ದರು. ಏನಾದರೂ ಬರೆಯುವುದಿದ್ದರೆ ಹೊಸ ಮಾತಿನಲ್ಲಿ ಹಳೆಯದನ್ನೇ ಬರೆಯಬೇಕು ಎಂದು ನಾನೇ ಉತ್ತರಿಸಿ ಅವರ ಮಾತನ್ನು ಬೆಂಬಲಿಸಿದೆ. ಬರೆಯುವುದಾಗಿ ಮಾತು ಕೊಟ್ಟೆ.

ಕರ್ನಾಟಕ ಏಕೀಕರಣದ ಬೀಜ ಬಿತ್ತಿದ ಪುಣ್ಯಪುರುಷರಾದ ಡೆಪ್ಯುಟಿ ಚೆನ್ನಬಸಪ್ಪನವರಿಂದ ಹಿಡಿದು ಆಲೂರು ವೆಂಕಟರಾಯರು, ನಾರಾಯಣ ಹುಯಿಲಗೋಳರವರೆಗೆ, ಆ ತರುವಾಯ ಬಂದ ರಾಜಕಾರಣಿಗಳೆಲ್ಲ - ನಮ್ಮ ಮಕ್ಕಳಿಗೆ, ಅಂದರೆ ಕನ್ನಡಿಗರಿಗೆ ಮಾತೃಭಾಷೆಯಲ್ಲಿ ಶಿಕ್ಷಣ ಸಿಗ ಬೇಕಾದರೆ ಹರಿದು ಹಂಚಿ ಹೋಗಿದ್ದ ಕನ್ನಡ ಮಾತ ನಾಡುವ ಜನರಿರುವ ವಿವಿಧ ಭಾಗಗಳನ್ನು ಒಂದೇ ಆಡಳಿತದಲ್ಲಿ ತರಬೇಕೆಂದು ಏಕೀಕರಣ ಚಳವಳಿ ಹೂಡಿದರು. ಹಾಗೆ ಒಂದುಗೂಡಿದ ರಾಜ್ಯದ ಆಡಳಿತೆ ನಮ್ಮ ಮನೆ ಮಾತಿನಲ್ಲೇ ನಡೆಸಿಕೊಂಡು ಹೋಗಲು ಅನುಕೂಲವಾಗುತ್ತದೆ ಎಂದು ಪ್ರತಿ ಪಾದಿಸಿದರು. ಅವರ ಈ ಮಾತು ನ್ಯಾಯವೆಂದು, ಯೋಗ್ಯವೆಂದು, ಸತ್ಯವೆಂದು ಹಿಂದೆ ಬ್ರಿಟಿಷರೂ ಒಪ್ಪಿದ್ದರು. ಸ್ವಾತಂತ್ರ್ಯ ಬಂದ ಮೇಲೆ ನಮ್ಮವರೂ ಒಪ್ಪಿ ಭಾಷಾವಾರು ಪ್ರಾಂತ್ಯ ರಚನೆ ಮಾಡಿದರು. ಹಾಗೆ ಕನ್ನಡಿಗರ ಕನಸು ನನಸಾಯಿತು. ನವೆಂಬರ್ 1, 1956 ರಂದು ಒಬ್ಬ ಮಹನೀಯರು 'ಉದಯ ವಾಯಿತು ಚೆಲುವ ಕನ್ನಡ ನಾಡು'' ಎಂದು ಹಾಡಿಯೂ ಬಿಟ್ಟರು. ಈ ಮಾತು ಪೂರ್ಣ ಸತ್ಯವಲ್ಲ ಎಂದು ಕುವೆಂಪು ಅಂದೇ ಎಚ್ಚರಿಕೆ ಕೊಟ್ಟು; ಭೌಗೋಳಿಕವಾಗಿ ಕರ್ನಾಟಕ ಉದಯವಾಗಿದೆ. ಭಾವನಾತ್ಮಕವಾಗಿಯೂ ನಾವೆಲ್ಲ ಒಂದು ಎಂಬ ಭಾವನೆ ಬರಬೇಕು. ಅದಕ್ಕಿಂತ ಹೆಚ್ಚಾಗಿ ಶಿಕ್ಷಣದಲ್ಲಿ ಕನ್ನಡ ಮಾಧ್ಯಮ, ಆಡಳಿತದಲ್ಲಿ ಕನ್ನಡ ಆಗಬೇಕು... ಎಂದಿದ್ದರು.

ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲೇ ಆಗಬೇಕೆಂಬುದು ಇಡೀ ಜಗತ್ತಿನ ಸರ್ವಶ್ರೇಷ್ಠ ಶಿಕ್ಷಣ ತತ್ವಜ್ಞಾನಿಗಳ ಒಮ್ಮತ. ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಮಾತೃಭಾಷೆಯೆ ಶಿಕ್ಷಣ ಮಾಧ್ಯಮ ಎಂಬುದು ಜಗತ್ತಿನ ಎಲ್ಲ ದೇಶದಲ್ಲೂ ಆಚರಣೆಯಲ್ಲಿದೆ. ಜಪಾನ್, ಜರ್ಮನಿಯಂಥ ವಿಜ್ಞಾನದಲ್ಲಿ, ಯಂತ್ರೋದ್ಯಮದಲ್ಲಿ ಅತ್ಯಂತ ಮುಂದುವರಿದ ರಾಷ್ಟ್ರಗಳು ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆಯಲ್ಲೆ ಕೊಡುತ್ತಿವೆ. ಚೈನಾ, ಫ್ರಾನ್ಸ್, ರಷ್ಯಾ, ಇಟಲಿ, ಸ್ಪೇನ್.. ಅದು ಇದು ಎಂದು ಹೆಸರಿಸುವುದೆ ಬೇಡ-ಎಲ್ಲ ದೇಶಗಳಲ್ಲೂ ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲೇ ನಡೆಯುತ್ತಿದೆ.

ಮಾತೃಭಾಷೆಯಲ್ಲೇ ಪ್ರಾಥಮಿಕ ಶಿಕ್ಷಣ ಬೇಕೆಂಬ ಮಾತು ಅಮೆರಿಕೆಯಲ್ಲಿ, ಕೆನಡಾದಲ್ಲಿ ಈಗ ಬಹು ಅಬ್ಬರವಾಗಿ ಕೇಳಿ ಬರುತ್ತಿದೆ. ಅಮೆರಿಕೆಯಲ್ಲಿ ಇಂಗ್ಲಿಷ್ ಮಾತನಾಡುವ ಜನರೆ ಅತ್ಯಧಿಕ. ಅಲ್ಲಿ ದಕ್ಷಿಣ ರಾಜ್ಯಗಳಾದ ನ್ಯೂಮೆಕ್ಸಿಕೊ, ಟೆಕ್ಸಸ್,



ಶಾಲೆ ಕಲೆಯೊಲ್ಲಾ ದನ ಕಾಯ್ತೀನಿ ಅಂದ. ಮೊದ್ಲು ಡಿಗ್ರಿ ಮುಗಿಸು ಆಮೇಲೆ ದನ ಕಾಯೋದು ಇದ್ದೇ ಇದೆ ಅಂತ ಬಯ್ದೆ... ಅಷ್ಟೇ.

ಆಲಭಾಮಾ, ಫ್ಲೋರಿಡಾದಲ್ಲಿ, ಸ್ಪ್ಯಾನಿಷ್ ಮಾತನಾಡುವ ಜನ ಅಧಿಕ ಪ್ರಮಾಣದಲ್ಲಿದ್ದಾರೆ. ಟೆಕ್ಸಸ್ ರಾಜ್ಯದಲ್ಲಿ ಶೇ. 27 ರಷ್ಟು ಹಿಸ್ಪಿಯಾನಿಕ್ಸ್ (ಸ್ಪ್ಯಾನಿಷ್ ಮಾತನಾಡುವ ಅಮೆರಿಕನ್ನರು) ಇದ್ದಾರೆ. ಅವರಿಗೆ ಸ್ಪ್ಯಾನಿಷ್ ಭಾಷೆಯಲ್ಲೇ ಪ್ರಾಥಮಿಕ ಶಿಕ್ಷಣ ಕೊಡುವ ವ್ಯವಸ್ಥೆ ಈಗ ಜಾರಿಯಲ್ಲಿದೆ. ಇಂಗ್ಲಿಷ್ ಮಾತೃಭಾಷೆಯಲ್ಲದ ನಮ್ಮ ಮೊಮ್ಮಗಳನ್ನು ಸ್ಪ್ಯಾನಿಷ್ ಮಾಧ್ಯಮದ ತರಗತಿಯಲ್ಲಿ ಕೂಡಿಸಿದ್ದರಂತೆ! ಹೆತ್ತವರು ಹೋಗಿ 'ಸ್ಪ್ಯಾನಿಷ್ ಕೂಡ ನಮ್ಮ ಮಾತೃಭಾಷೆಯಲ್ಲ, ಕನ್ನಡ ಮಾತೃಭಾಷೆ. ಆ ಅವಕಾಶ ಇಲ್ಲದ್ದರಿಂದ ಇಂಗ್ಲಿಷ್ ಮಾಧ್ಯಮವೇ ಬೇಕು' ಎಂದು ಹೇಳಿ ಬದಲಾಯಿಸಿದರು.

ಮಾತೃಭಾಷೆಯ ವಿಚಾರದಲ್ಲಿ ಕೆನಡಾದಲ್ಲಿ ಘನಘೋರ ವಿವಾದ ನಡೆದಿದೆ. ಕ್ವಿಬೆಕ್ ರಾಜ್ಯದಲ್ಲಿ ಫ್ರೆಂಚರು ಅಧಿಕ ಸಂಖ್ಯೆಯಲ್ಲಿದ್ದಾರೆ. ಅವರು ಫ್ರೆಂಚ್ ಭಾಷೆಗೆ ಪ್ರಾಶಸ್ತ್ಯ ಬೇಕೇಬೇಕೆಂದು ಹಠ ಹಿಡಿದು, ಕೆನಡಾದಿಂದ ಪ್ರತ್ಯೇಕವಾಗಿ ಹೋಗಲೂ ಸಿದ್ಧರಾಗಿದ್ದಾರೆ. ಇದು ಆ ಮುಂದುವರಿದ ದೇಶಗಳ ಜನ ತಮ್ಮ ಮಾತೃಭಾಷೆಯ ಬಗ್ಗೆ ಶಿಕ್ಷಣದ ಬಗ್ಗೆ ತಳೆದಿರುವ ಧೋರಣೆ.

ಈ ಮಾತೃಭಾಷೆಯ ಪ್ರಾಮುಖ್ಯವನ್ನು - ಭಾಷಾ ಮೋಹವಲ್ಲ - ಅಮೆರಿಕೆಯ ಮೂಲ ನಿವಾಸಿಗಳು-ಅವರನ್ನು ಇಂಡಿಯನ್ಸ್, ರೆಡ್ ಇಂಡಿಯನ್ಸ್ ಎಂದು ಕರೆಯುತ್ತಾರೆ, ಈಗೀಗ ಅರಿಯತೊಡಗಿದ್ದಾರೆ. ಅಮೆರಿಕೆಯ ಆ ಮೂಲ ನಿವಾಸಿಗಳು ದಕ್ಷಿಣ ರಾಜ್ಯಗಳಲ್ಲಿ ಬಹು ಅಲ್ಪ ಸಂಖ್ಯಾತರಾಗಿ ಈಗಲೂ ಇದ್ದಾರೆ. ನಮ್ಮ ದೇಶದ ಮಿಜೋರಾಂ ಜನರನ್ನು ಹೋಲುವ ಲಕ್ಷಣದ ಜನ ಅವರು. ಅವರ ಭಾಷೆಯೂ ಇದೆ. ಅಮೆರಿಕೆಯನ್ನು ಆಕ್ರಮಿಸಿದ ಇಂಗ್ಲಿಷರು, ಫ್ರೆಂಚರು, ಸ್ಪೇನರು ಆ ಮೂಲ ಆದಿವಾಸಿಗಳ ಸಂಸ್ಕೃತಿಯನ್ನು, ಭಾಷೆಯನ್ನು ಅನಾಮತ್ತಾಗಿ ನಿರ್ನಾಮ ಮಾಡಿ ಪ್ರಪಂಚದ ನಾಗರಿಕತೆಗೆ ಪರಮ ಅನ್ಯಾಯ ಮಾಡಿದರೆಂದು ಸಮಾಜ ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಆ ಮೂಲ ನಿವಾಸಿಗಳ ಭಾಷೆಯನ್ನು ಪುನಶ್ಚೇತನಗೊಳಿಸಿ ಆ ಜನರಿಗೆ ಮಾತೃಭಾಷೆಯಲ್ಲೇ ಶಿಕ್ಷಣ ಕೊಡಬೇಕೆಂಬ ಪ್ರಯತ್ನ ನಡೆಯುತ್ತಿದೆ. ಅದಕ್ಕಾಗಿ ಬಹು ಪ್ರಾಮಾಣಿಕ ಪ್ರಯತ್ನ ಮಾಡುತ್ತಿದ್ದಾರೆ!

ಹೀಗಿದ್ದರೂ ನಮ್ಮ ದೇಶದಲ್ಲಿ, ತತ್ರಾಪಿ ಕರ್ನಾಟಕದಲ್ಲಿ ಮಾತೃಭಾಷೆಯ ಬಗ್ಗೆ ಅನಾದರ, ಅಸಡ್ಡೆ, ಇಂಗ್ಲಿಷ್ ಮಾಧ್ಯಮ ಗೀಳು ಪ್ರಾಥಮಿಕ ಹಂತದಲ್ಲೇ ಹಿಡಿದಿರುವುದು ಪರಮಾಶ್ಚರ್ಯದ ಸಂಗತಿಯಾಗಿದೆ. ಈ ರಾಜ್ಯದಲ್ಲಿ ತಲೆಯೆತ್ತಿರುವ ಆಂಗ್ಲ ಮಾಧ್ಯಮ ಕಾನ್ವೆಂಟು ಶಾಲೆಗಳು, ಖಾಸಗಿ ಪ್ರಾಥಮಿಕ ಶಾಲೆಗಳು ಇತ್ತೀಚೆಗೆ ಹಳ್ಳಿಗಳಲ್ಲೂ ತಲೆಯೆತ್ತುತ್ತಿರುವುದು ಈ ಭಾಷೆ ಉಳಿದೀತೇ ಎಂಬ ಸಂಶಯಕ್ಕೆ ಎಡೆ ಮಾಡಿದೆ. ಹತ್ತಿಪ್ಪತ್ತು ವರ್ಷಗಳ ಹಿಂದೆ ಬೆಂಗಳೂರು, ಮೈಸೂರು ಮುಂತಾದ ಜಿಲ್ಲಾ ಮುಖ್ಯ ಪಟ್ಟಣಗಳಲ್ಲಿದ್ದ ಇಂಗ್ಲಿಷ್ ಮಾಧ್ಯಮದ ಪಿಡುಗು - ವಿಷಪ್ರಾಶನ - ಈಗ ಹಳ್ಳಿಗಳಿಗೂ ಹಬ್ಬಿರುವುದು ಈ ನಾಡು, ಈ ಜನ ಆತ್ಮಹತ್ಯೆಯ ನಿಶ್ಚಿತ ದಾರಿಯಲ್ಲಿ ನಡೆದಿರುವುದರ ದ್ಯೋತಕ! ಆತ್ಮಹತ್ಯೆ ಎಂಬ ಮಾತನ್ನು ನಾನು ಅಲಂಕಾರಿಕವಾಗಿ ಬಳಸುತ್ತಿಲ್ಲ. 'ವಿದ್ಯೆಯಿಲ್ಲದವನು ಪಶು ಸಮಾನನು' ಎಂಬ ಭರ್ತೃಹರಿಯ ನೀತಿವಾಕ್ಯವನ್ನು ಉನ್ನಿಕೃಷ್ಣನ್ ಕೇಸಿನಲ್ಲಿ ನಮ್ಮ ಸರ್ವೋಚ್ಚ ನ್ಯಾಯಾಲಯ ಎತ್ತಿ ಹಿಡಿದಿದೆ! ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯದವರು, ಮೆದುಳನ್ನು ಸುದ್ದಿಯ ಕಣಜವನ್ನಾಗಿ ಮಾಡಿಕೊಂಡಾರೆಯೆ ಹೊರತು, ಜ್ಞಾನದ ಭಂಡಾರವಂತೂ ಆಗಲಾರದು!!

ಇಂಗ್ಲಿಷ್ ಮಾಧ್ಯಮದ ವಿಚಾರವಾಗಿ ಉಬ್ಬುಬ್ಬಿ ಮಾತನಾಡುವ (ಪ್ರಾಥಮಿಕ ಹಂತದಲ್ಲಿ ಎಂಬುದನ್ನು ಮತ್ತೊಮ್ಮೆ ಒತ್ತಿ ಹೇಳುತ್ತೇನೆ) ಜನರನ್ನು ಕುರಿತು ಜಿ. ಬಿ. ಮಲ್ಲಾರಾಧ್ಯರೆಂಬ ಶಿಕ್ಷಣವೇತ್ತರು, ಅವರು ಡಿಪಿಐ ಆಗಿದ್ದಾಗ; 'ನಾನು ಓದ್ರೊ ಅಯ್ಯಗಳ ಕಟ್ಟೆ ಮೇಲೆ ಕೂತು ಕಲಿತೆ. ನಾನು ಕೆಟ್ಟು ಹೋಗಿದ್ದೇನೆಯೇ?' ಎಂದು ಕೇಳುತ್ತಿದ್ದರು. ನನ್ನ ವಯಸ್ಸಿನವರೆಲ್ಲ ಹಳ್ಳಿಯ ಓದ್ರೊ ಅಯ್ಯಗಳ ಶಾಲೆಯಲ್ಲೇ ಓದಿದವರು. ಕನ್ನಡದಲ್ಲೇ ಓದಿದವರು. ನಾವು ಮುಂದಕ್ಕೆ ಬಂದಿಲ್ಲವೆ? ನಮಗೆ ಇಂಗ್ಲಿಷ್ ಬರುವುದಿಲ್ಲವೆ? ಇಂಗ್ಲಿಷ್ ಮಾಧ್ಯಮದಲ್ಲೇ ಪ್ರಾಥಮಿಕ ಶಿಕ್ಷಣದಿಂದ ಸ್ನಾತಕೋತ್ತರ ಪದವಿಯವರೆಗೆ ಕಲಿತವರು ಇಂಗ್ಲಿಷ್ ಭಾಷಾ ಶುದ್ಧಿ ಪ್ರೌಢಿಮೆಯಲ್ಲಿ ನಮ್ಮೊಡನೆ ಸ್ಪರ್ಧಿಸಿ ಜಯಶಾಲಿಯಾಗಲಿ!

ಕರ್ನಾಟಕ ಸರ್ಕಾರ ಪ್ರಾಥಮಿಕ ಹಂತದಲ್ಲಿ ಕನ್ನಡವೆ ಶಿಕ್ಷಣ ಮಾಧ್ಯಮವಾಗಿರಬೇಕೆಂದು ಒಪ್ಪಿಕೊಂಡಿದೆ. ಆ ನೀತಿಗೆ ಸರ್ವೋಚ್ಚ ನ್ಯಾಯಾಲಯವೂ ಶಾಸನದ ಮುದ್ರೆ ಒತ್ತಿದೆ. ಆದರೂ ಜನ ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ನುಗ್ಗುತ್ತಿದ್ದಾರೆ? ಯಾಕೆ ಎಂಬುದನ್ನು ಸರ್ಕಾರವೂ ಜನರೂ ಯೋಚಿಸಬೇಕು. ಮೊದಲನೆಯದಾಗಿ ಜನರಿಗೆ ಶಿಕ್ಷಣ ಮಾಧ್ಯಮದ ವಿಚಾರ ಸರಿಯಾಗಿ ತಿಳಿದಿಲ್ಲ. ಮಾತೃಭಾಷೆಯ ಬಗೆಗೇ ಅಸಡ್ಡೆ. ಇದು ಅಲ್ಲಗಳೆಯದ ಸತ್ಯ. ತಮಿಳುನಾಡಿನಲ್ಲಿ, ವಿದೇಶಗಳಲ್ಲಿರುವ ತಮಿಳರಿಗೆ ತಮ್ಮ ಮಾತೃಭಾಷೆಯ ಬಗ್ಗೆ ಇರುವ ಕಡು ಅಭಿಮಾನ-ಒಮ್ಮೊಮ್ಮೆ ದುರಭಿಮಾನ ಎಂಬಂತೆ ಕಾಣುವ ಅವರ ಅಭಿಮಾನವೆ ಅವರ ಭಾಷೆಯನ್ನು ಉಳಿಸಿದೆ. ಅದಕ್ಕೆ ಒಂದೆರಡು ಸ್ವಾನುಭವದ ಉದಾಹರಣೆ ಕೊಡುತ್ತೇನೆ. ಟೆಕ್ಸಸ್ ವಿಶ್ವವಿದ್ಯಾಲಯದಲ್ಲಿ ಭೌತಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ಜಾರ್ಜ್ ಸುದರ್ಶನ್ ಮತ್ತು ಅವರ ಮಡದಿಯನ್ನು ಡಾ. ಸ್ಟೀಫನ್ಸ್ ಫಿಲಿಪ್ಸ್ ಅವರ ಮನೆಯಲ್ಲಿ ಕಂಡಿದ್ದೆ. ಡಾ. ಜಾರ್ಜ್ ಸುದರ್ಶನ ದಂಪತಿ ಅಲ್ಲಿ ತಮಿಳು ಸಂಘದಲ್ಲಿ ಸಕ್ರಿಯ ಪಾತ್ರ ವಹಿಸಿದ್ದಾರೆ. ನಿಮಗೆ ಆಶ್ಚರ್ಯವಾಗ ಬಹುದು - ಅಲ್ಲಿ ತಮಿಳು ಕಲಿಸುವ ತರಗತಿ ನಡೆಸುತ್ತಿದ್ದಾರೆ. ಭರತನಾಟ್ಯ, ಕರ್ನಾಟಕ ಸಂಗೀತ ಕಾರ್ಯಕ್ರಮ ಏರ್ಪಡಿಸುತ್ತಿದ್ದಾರೆ.

# ರಾಜ್ಯೋತ್ಸವ ವಿಶೇಷ

ಆಸ್ಟಿನ್ನಿನಲ್ಲಿ ಇನ್ನೊಂದು ತಮಿಳು ಕುಟುಂಬ ನೋಡಿದೆ. ಮದ್ರಾಸ್ ಉಚ್ಚ ನ್ಯಾಯಾಲಯದ ಮಾಜಿ ನ್ಯಾ.ಮೂ.ದಿ.ನಟರಾಜನ್ ಅವರ ಮೊಮ್ಮಗಳು ದೀಪಾ ರಮಣಿ ಪತಿಯೊಡನೆ ಇದ್ದಾಳೆ. ಅವರ ತಂದೆತಾಯಿಗಳೂ ಅಲ್ಲಿಗೆ ಬಂದಿದ್ದರು. ಅವರ ಮನೆಗೆ ಹೋಗಿದ್ದೆ. ಅವರು ಮನೆಯಲ್ಲಿ ಮಾತನಾಡುವಾಗ ತಪ್ಪದೇ ತಮಿಳಿನಲ್ಲೇ ಮಾತನಾಡುತ್ತಾರೆ! ಸಿಟ್ಟು ಬಂದಾಗಲೂ ಇಂಗ್ಲಿಷಿನಲ್ಲಿ ಮಾತನಾಡುವುದಿಲ್ಲ. ಪ್ರಪಂಚದಲ್ಲಿ ತಮಿಳು ಯಾಕೆ ಉಳಿದಿದೆ ಎಂಬುದಕ್ಕೆ ಇಲ್ಲಿ ಕಾರಣ ಸಿಕ್ಕುತ್ತದೆ.

ಏಕೀಕರಣಕ್ಕಿಂತ ಮುಂಚೆ ಕನ್ನಡಿಗರಿಗೆ ಕನ್ನಡದ ಬಗ್ಗೆ ಇದ್ದ ಆಸಕ್ತಿ ಏಕೀಕರಣವಾದ ಮೇಲೆ ಉಳಿಯಲಿಲ್ಲ. ಹೊರನಾಡ ಕನ್ನಡಿಗರಿಗೆ ಈಗಲೂ ಇರುವ ಕನ್ನಡಾಭಿಮಾನ ಕರ್ನಾಟಕದಲ್ಲಿರುವವರಿಗೆ ಇಲ್ಲ. ಸೊಲ್ಲಾಪುರ, ಆದವಾನಿ, ಅಕ್ಕಲಕೋಟೆ, ಕಾಸರಗೋಡಿನಲ್ಲಿ ಈಗಲೂ ಅನೇಕ ಅಡಚಣೆಗಳಿದ್ದರೂ ಕನ್ನಡ ದೀಪ ಆರದಂತೆ ಕಾಪಾಡಿಕೊಂಡಿದ್ದಾರೆ. ಇಲ್ಲಿಯವರಿಗೆ ಇಲ್ಲದ ಆಸಕ್ತಿ ಅವರಿಗೇಕೆ? ಅವರು ದಿನವೂ ಅನ್ಯಭಾಷಾ ತೊಂದರೆಯಿಂದ ಉಸಿರುಕಟ್ಟಿ ಏಗುತ್ತಿದ್ದಾರೆ. ಅವರಿಗೆ ಮಾತೃಭಾಷೆಯ ಮಹತ್ವ ಗೊತ್ತಿದೆ. ಯಾವುದು ಇಲ್ಲವೋ ಅದು ಬಹು ಬೆಲೆಯುಳ್ಳದ್ದು. ಅಷ್ಟೇಕೆ ವಿದೇಶದಲ್ಲಿರುವ ಕನ್ನಡಿಗರಿಗೆ ಇಲ್ಲಿರುವ ಕನ್ನಡಿಗರಿಗಿಂತ ಕನ್ನಡದ ಬಗ್ಗೆ ಅಭಿಮಾನವಿದೆ ಎಂಬುದನ್ನು ನಾನು ಕಣ್ಣಾರೆ ಕಂಡೆ. ಇಲ್ಲಿಯ ಕನ್ನಡ ಮಕ್ಕಳು 'ಡ್ಯಾಡಿ , ಮಮ್ಮಿ' ಎನ್ನುವಂತೆ ಅಲ್ಲಿ ಹೆತ್ತವರನ್ನು ಕರೆದದ್ದು ನಾನು ಕೇಳಲಿಲ್ಲ. 'ಪಪ್ಪ' ಮಾಮ್' ' ಅಮ್ಮ' ಎಂದು ಮಕ್ಕಳು ಕರೆಯುತ್ತಾರೆ. ಇಲ್ಲೇಕೆ ಹೀಗೆ? ಕಾರಣ ಮೇಲೆಯೇ ಇದೆ. ನಮ್ಮಂಥ ಅವಿವೇಕಿಗಳು ನಾವೇ. ನಮಗೆ ಸಾಟಿಯಿಲ್ಲ!

ಶಿಕ್ಷಣ ಮಾಧ್ಯಮ ಮಾತೃಭಾಷೆಯಲ್ಲೇ ಆಗಬೇಕೆಂಬ ವಿಚಾರವನ್ನು ನಾನು ಚಿಂತನೆ ಮಾಡುತ್ತಿರುವಾಗ, ಇಂಗ್ಲಿಷಿನ ವ್ಯಾಮೋಹ ಬೆಳೆಯುತ್ತಿರುವುದನ್ನು ಕಂಡಾಗ ಅಮೆರಿಕೆಯ ಭಾಷಾ ವಿಜ್ಞಾನಿ, ಸಮಾಜಶಾಸ್ತ್ರ ನಿಪುಣ, ಕಂಪ್ಯೂಟರ್ ವಿಜ್ಞಾನಿಯ ಅಭಿಪ್ರಾಯವನ್ನು ಗಮನಿಸಿದೆ. ಅವನ ಅಭಿಪ್ರಾಯದ ಪ್ರಕಾರ ಇಪ್ಪತ್ತೊಂದನೆಯ ಶತಮಾನದ ಅಂತ್ಯಕ್ಕೆ ಈ ಜಗತ್ತಿನಲ್ಲಿ ಇಂಗ್ಲಿಷೇ ಅತ್ಯಧಿಕ ಜನರ ಬಳಕೆಯ ಭಾಷೆಯಾಗುವುದಂತೆ! ಏಳೆಂಟು ಭಾಷೆಗಳು ಮಾತ್ರ ತಕ್ಕಮಟ್ಟಿಗೆ ಪ್ರಚಾರದಲ್ಲಿರುತ್ತವೆಯಂತೆ! ಅನೇಕ ಭಾಷೆಗಳು ಪ್ರಚಾರದಲ್ಲಿ ಇಲ್ಲದೆ ಕೇವಲ ಗ್ರಂಥಗಳಲ್ಲೇ ಉಳಿಯುತ್ತವೆಯಂತೆ!! ಈ ಮಾತು ಭಾರತೀಯ ಬಹು ಭಾಷೆಗಳಿಗೂ ಅನ್ವಯಿಸುತ್ತದೆ.ಇಂಥ ಪರಿಸ್ಥಿತಿ ಬರುವುದಕ್ಕೆ ಕಂಪ್ಯೂಟರ್ ಇಂಟರ್‌ನೆಟ್ ಬಹುಮಟ್ಟಿಗೆ ಕಾರಣ ಎನ್ನುತ್ತಾನೆ ಆ ವಿಜ್ಞಾನಿ. ಹಾಗಾದರೆ ಕನ್ನಡದ ಈ ಗೀಳಿಗೆ ಏನರ್ಥ?

ಈ ಮಾತು ನಿಜವಾದರೂ ಆಗಬಹುದೆಂಬ ಸಂದೇಹ ಮೂಡುತ್ತದೆ. ಅಮೆರಿಕೆಯ ಮೂಲ ನಿವಾಸಿಗಳ ಭಾಷೆಯ ಗತಿ ಏನಾಯಿತು? ಅಷ್ಟೇಕೆ ಸಂಸ್ಕೃತ ಜನರ ನಾಲಗೆಯಿಂದ ಲುಪ್ತವಾಗಿ ಹೋಗಲು ಕಾರಣ ಏನಿದ್ದಿರಬಹುದು? ಸಂಸ್ಕೃತವನ್ನು ಹಿಂದಕ್ಕೆ ತಳ್ಳಿದ ಪಾಲಿ ಮತ್ತು ಅರ್ಧಮಾಗದಿ ಈಗ ಏನಾಗಿದೆ? ಅಷ್ಟೇಕೆ ತುಳು, ಕೊಂಕಣಿ ಭಾಷೆಗಳ ಲಿಪಿ ಎಲ್ಲಿ ಹೋಯಿತು? ಈಗ ಸಂಸ್ಕೃತವನ್ನು ಕಡ್ಡಾಯವಾಗಿ ಕಲಿಸಬೇಕೆಂಬ ಸಂಘ ಪರಿವಾರದ ಪ್ರಯತ್ನಕ್ಕೆ ಶಿಕ್ಷಣ ಸಚಿವರ ಸಮ್ಮೇಳನದಲ್ಲಿ ಯಾವ ಗತಿಯಾಯ್ತು? ಮುಂದೆ ಕಾಲಾನುಕಾಲಕ್ಕೆ ಈಗಿರುವ ಭಾರತೀಯ ಭಾಷೆಗಳಿಗೂ ಈಗ ಸಂಸ್ಕೃತ, ಪಾಲಿ, ಅರ್ಧಮಾಗದಿ..... ಭಾಷೆಗಳಿಗೆ ಬಂದೊದಗಿದ ಗತಿಯೆ ಬರಬಹುದೂ ಏನೊ? ಅದಕ್ಕೆ ಅನೇಕ ಕಾರಣಗಳು ಇರಬಹುದು. ಮುಂದೆ ಬರಬಹುದು. ಅವುಗಳಲ್ಲಿ ಬಹು ಮುಖ್ಯ ಕಾರಣ - ಕನ್ನಡ ಭಾಷೆಯನ್ನಾಡುವವರ ಬಾಯಿ ಕನ್ನಡವನ್ನು (ಹೊರಕ್ಕೆ) ಉಗುಳುವುದೂ ಒಂದು. 'ಉಗುಳುವುದು' ಎಂಬ ಮಾತನ್ನು ವಾಚ್ಯಾರ್ಥದಲ್ಲಿ, ಅಲಂಕಾರಿಕಾರ್ಥದಲ್ಲಿ ಅರ್ಥೈಸಬಹುದು!!

ಇನ್ನೊಂದು ಕಾರಣವೂ ಸೇರಬಹುದು. ಈ ಕಂಪ್ಯೂಟರ್ ಇಂಟರ್‌ನೆಟ್ ವಿಜ್ಞಾನ ಮುಂದುವರಿದಂತೆ ಬರೆಯುವ ಕಲೆಯೇ ಲುಪ್ತವಾಗಬಹುದು! ಇಂಗ್ಲಿಷಿನ 26 ವರ್ಣಗಳು ತಿಳಿದರೆ ಎಲ್ಲಿಗಾದರೂ ಸುದ್ದಿ ಕಳಿಸಬಹುದಾದು, ಲೋಕದ ಯಾವ ಮೂಲೆಯಿಂದಲಾದರೂ ಯಾವ ಸುದ್ದಿಯನ್ನಾದರೂ ತಿಳಿಯಬಹುದಂತೆ! ಅಷ್ಟೇಕೆ? ಅಕ್ಷರ ಜ್ಞಾನವೂ ಅಗತ್ಯವಿಲ್ಲವಂತೆ. ಈಗ ಒಂದು ಯಂತ್ರ ರಚನೆಯಾಗಿದೆ. ಆ ಯಂತ್ರದ ಮುಂದೆ ಕುಳಿತು ಮಾತನಾಡಿದರೆ ಸಾಕು, ಆ ಮಾತು ಯಾರಿಗೆ ಕೇಳಿಸಬೇಕೋ ಅವರ ಯಂತ್ರದ ಮುಂದೆ ಯಥಾವತ್ತಾಗಿ ಶಬ್ದ ರೂಪದಲ್ಲಿ ಕೇಳಿಸುತ್ತದೆ! ಈಗ ನಾವು ದೂರದರ್ಶನದಲ್ಲಿ ಕಾಣುವ ಹಾಗೆ!! ಕಂಪ್ಯೂಟರಿನಲ್ಲಿ ಟೈಪ್ ಮಾಡುವುದಾಗಲಿ, ಮಾನೀಟರ್‌ನಲ್ಲಿ ಮೂಡಿಸುವುದಾಗಲೀ ಅನಗತ್ಯ. ಈಗಾಗಲೇ ಕಂಪ್ಯೂಟರ್ ಮೂಲಕವಾಗಿಯೇ ಕಥೆ, ಕಾದಂಬರಿ, ಕವಿತೆ ಬರೆಯುವ ಕಲೆಯನ್ನು ಕೆಲವರು ಸಾಧಿಸಿದ್ದಾರಂತೆ. ನಮ್ಮಂತಹ ಬರೆಯುವವರು ವಿರಳವಾಗಬಹುದು. ಆದರೆ ಈಗಲೂ ಕೆಲವರು ಕೈ ಬರಹದ ಬಗ್ಗೆ ಆಸಕ್ತಿ ವಹಿಸುತ್ತಿರುವುದನ್ನು ಕಾಣಬಹುದು. ಈ ಬಗ್ಗೆ ಇತ್ತೀಚೆಗೆ ಸೆಪ್ಟಂಬರ್ ತಿಂಗಳಲ್ಲಿ ಅಮೆರಿಕೆಯಲ್ಲಿ ಒಂದು ಗ್ರಂಥವೆ ಬಂದಿದೆ.

ಇಷ್ಟೆಲ್ಲ ಚಿಂತನೆ ಮಾಡಿದರೂ, ಆ ಕಾಲ ಬರುವವರೆಗೆ, ಶಿಕ್ಷಣ ಮಾತೃಭಾಷೆಯಲ್ಲೇ ನಡೆಯಬೇಕೆಂಬ ವಿಚಾರದಲ್ಲಿ ಸಂದೇಹ ಇರಲೇಬಾರದು. ಶಿಕ್ಷಣ ಸಾರ್ವತ್ರಿಕವೂ, ಕಡ್ಡಾಯವೂ, ಉಚಿತವೂ ಆಗಬೇಕೆಂದು ಸಂವಿಧಾನದಲ್ಲೇ ಲಿಖಿಸಿದ್ದರೂ ಇಂದಿಗೂ ನಮ್ಮ ದೇಶದ ಶೇ. 52ರಷ್ಟು ಜನ ಅನಕ್ಷರಸ್ಥರು. ಲೋಕದ ಅನಕ್ಷರಸ್ಥರ ಸಂಖ್ಯೆಯಲ್ಲಿ ಭಾರತೀಯರೆ ಅತ್ಯಧಿಕ. ಇದಕ್ಕೆ ಆಳುವವರ ಅಸಡ್ಡೆ, ಅಯೋಗ್ಯತನ (ಅಂದರೆ ಯೋಗ್ಯತೆಯಿಲ್ಲದ ಮೂಢರು, ಭಂಡರು, ಪಿಂಡಾರಿಗಳು, ಅಧಿಕಾರದಲ್ಲಿರುವುದು ಎಂದು) ಕಾರಣ. ಭಾರತ ಸ್ವತಂತ್ರವಾದ ನಂತರ ವಸಾಹತುಶಾಹಿಯಿಂದ ಬಿಡುಗಡೆ ಹೊಂದಿದ ದೂರ ಪ್ರಾಚ್ಯ ರಾಷ್ಟ್ರಗಳು - ಬರ್ಮಾ, ಮಲೇಷಿಯಾ, ಇಂಡೋನೇಷ್ಯಾ, ಕೊರಿಯಾ - ಶೇ. 70 ರಷ್ಟು - ಹೌದು ಶೇ. 70 ರಷ್ಟು ಸಾಕ್ಷರತೆಯನ್ನು ಸಾಧಿಸಿವೆ! ಆಫ್ರಿಕಾ ಖಂಡದಲ್ಲೂ ಅದ್ಭುತ ಶಿಕ್ಷಣ ಪ್ರಗತಿಯಾಗಿದೆ! ಆದರೆ ಈ ಬ್ರಹ್ಮಾಂಡದಲ್ಲೇ ಅತ್ಯಂತ ಪ್ರಾಚೀನವಾದ ಭಾರತದಲ್ಲಿ ಇಂದಿಗೂ ಅಕ್ಷರವಿದ್ಯೆಯಿಂದ ವಂಚಿತರಾದವರು - ಅ,ಆ, ಇ,ಈ ಬಾರದವರು ಬ್ರಹ್ಮಾಂಡದಷ್ಟು ಇದ್ದಾರೆಂದರೆ ಈ ದೇಶವನ್ನು ಇದುವರೆಗೆ ಆಳಿದವರ ಅಯೋಗ್ಯತೆಗೆ ಇದಕ್ಕಿಂತ ಉತ್ತಮ ನಿದರ್ಶನ ಸಿಕ್ಕಲಾರದು!

ಸರ್ಕಾರದ ಅಸಾಮರ್ಥ್ಯವನ್ನು ಸಾರ್ವಜನಿಕರು ನೀಗಿಸಬಹುದಾಗಿತ್ತಲ್ಲವೆ? ಹಿಂದೆ ಸರ್ಕಾರಿ ಶಾಲೆಗಳಿಗಿಂತ ಖಾಸಗೀ ಶಾಲೆಗಳೇ ಹೆಚ್ಚಾಗಿದ್ದವು. ವಿದ್ಯಾವರ್ಧಕ ಸಂಘಗಳು ಸ್ಥಾಪಿಸಿದ ಶಾಲೆಗಳಲ್ಲಿ ಕಲಿತವರೆ ಹೆಚ್ಚು ಜನ. ಈಗ ಈ ಸಾರ್ವಜನಿಕ ಸಂಘಗಳು ಶೋಷಣೆಯ ಸಂಘಗಳಾಗಿವೆ! ಆಗ ಉಳ್ಳವರು ಬೆಳ್ಳಿ, ಬಂಗಾರ, ಭೂಮಿ, ನಗದು ಹಣ ಕೊಟ್ಟು ವಿದ್ಯಾಸಂಸ್ಥೆಗಳನ್ನು ಕಟ್ಟಿದ್ದರೆ, ಈಗ ಸಾರ್ವಜನಿಕ ಸಂಘಗಳು ವಿದ್ಯಾಸಕ್ತರ ಕಿಸೆಯನ್ನು ಕತ್ತರಿಸಿ ಶ್ರೀಮಂತರಾಗುತ್ತಿವೆ! ಇಂಥ ಪರಿಸ್ಥಿತಿಯಲ್ಲಿ ಉದಾರ ದಾನಿಗಳೂ ಮುಂದೆ ಬರುತ್ತಿಲ್ಲ. ಸರ್ಕಾರದ ಕೈಲಿ ನೀಗದ ಈ ಸಮಸ್ಯೆಯನ್ನು ಸಾರ್ವಜನಿಕರು ನೀಗಿಸಬಹುದೆಂಬ ನಿರೀಕ್ಷೆಯೂ ಹುಸಿಯಾಗುತ್ತಿದೆ!

ಮತ್ತೆ ಅದೇ ಬೃಹತ್ ಪ್ರಶ್ನೆ ಎದುರಾಗುತ್ತದೆ. ಇದಕ್ಕೆ ಪರಿಹಾರ ಏನು? ಜನರು ಶಿಕ್ಷಣದ ಮಹತ್ವ ಅಗತ್ಯವನ್ನು ಗ್ರಹಿಸಬೇಕು. ಈಗಿರುವ ಅಯೋಗ್ಯ ವ್ಯವಸ್ಥೆಯನ್ನು ಕಿತ್ತೆಸೆದು ಯೋಗ್ಯರ ಕೈಗೆ ಆಡಳಿತೆ ಕೊಡಬೇಕು. ಆ ಬದಲಾವಣೆ ಆಗದೆ ಸಾರ್ವತ್ರಿಕ ಉಚಿತ ಶಿಕ್ಷಣ ಕನಸು! ಬರೀ ಕನಸು!

■

ರಾಜ್ಯೋತ್ಸವ ವಿಶೇಷ



ಸಂಗೀತ ಕ್ಷೇತ್ರದಲ್ಲಿ ಅನೇಕ ಘರಾಣೆಗಳಿವೆ. ಅನೇಕ ಸಂಗೀತ ದಿಗ್ಗಜರು ತಮ್ಮ ಪರಂಪರೆಯನ್ನು ಉಳಿಸಿ; ಬೆಳೆಸುವ ದೃಷ್ಟಿಯಿಂದ ಶಿಷ್ಯ, ಪ್ರಶಿಷ್ಯ ಪರಂಪರೆಯನ್ನು ಮುಂದುವರಿಸಿಕೊಂಡು ಬರುತ್ತಾರೆ. ಪತ್ರಿಕಾ ಕ್ಷೇತ್ರದಲ್ಲಿ 'ಪ್ರಪಂಚ' ಘರಾಣೆ ಸುಪ್ರಸಿದ್ಧವೆಂದೇ ಹೇಳಬೇಕು. ಅಂತಹ ಘರಾಣೆಯನ್ನು ಹುಟ್ಟು ಹಾಕಿದವರು ಅಸಾಧಾರಣ ಪತ್ರಕರ್ತ ಡಾ.ಪಾಟೀಲ ಪುಟ್ಟಪ್ಪನವರು. ಕನ್ನಡ ಪತ್ರಿಕೋದ್ಯಮದ ಸವ್ಯಸಾಚಿ ಅವರು. ಕಥೆಗಾರರಾಗಿ, ಪ್ರಗತಿಶೀಲ ಲೇಖಕರಾಗಿ ಹೆಸರು ಪಡೆದವರು. ಕನ್ನಡ ಕಾವಲು ಸಮಿತಿ ಅಧ್ಯಕ್ಷರಾಗಿ ಸಂಪುಟ ದರ್ಜೆಯ ಸಚಿವ ಸ್ಥಾನ ಪಡೆದರೂ ಬೆಂಗಳೂರಿನ ಬಂಗಲೆಯಲ್ಲಿ ವಾಸಿಸಲಿಲ್ಲ. ಜನರಲ್ ಹಾಸ್ಟೆಲ್‌ನ ಚಿಕ್ಕ ಕೋಣೆಯೊಂದರಲ್ಲಿಯೇ ವಾಸವಾಗಿದ್ದು ಕಾರ್ಯನಿರ್ವಹಿಸಿದರು. ಎಪ್ಪತ್ತೆಂಟರ ಈ ವಯೋಮಾನದಲ್ಲಿಯೂ ದಿನಕ್ಕೆ ಹತ್ತು ಗಂಟೆಗಳ ಕಾಲ ಬರವಣಿಗೆ ಮಾಡುತ್ತಾರೆ. ದಣಿಯದಂತೆ ನೂರಾರು ಮೈಲುಗಳ ಪ್ರವಾಸ ಮಾಡುತ್ತಾರೆ. ರಾಜ್ಯೋತ್ಸವ ಸಂದರ್ಭದಲ್ಲಿ ಅವರ ಅನಿಸಿಕೆಗಳನ್ನು ಇಲ್ಲಿ ದಾಖಲಿಸಲಾಗಿದೆ.

# 'ಎಂಥಾ ನಾಡು ಎಂಥಾ ಕಾಡಾಯಿತು!'

**ಕರ್ನಾಟಕದ ಪ್ರಥಮ ಮುಖ್ಯಮಂತ್ರಿ ಯಾರು?**

ಮೈಸೂರು ಹೆಸರಿನ ನೂತನ ಕನ್ನಡ ರಾಜ್ಯ ನವೆಂಬರ್ 1, 1956ರಂದು ಅಸ್ತಿತ್ವದಲ್ಲಿ ಬಂದಿತು. ಕರ್ನಾಟಕಕ್ಕಾಗಿ ಅಹರ್ನಿಸಿ ದುಡಿದ ನಿಜಲಿಂಗಪ್ಪ ಅವರು ಪ್ರಥಮ ಮುಖ್ಯಮಂತ್ರಿ ಆಗಿದ್ದ ಹೊಸ ರಾಜ್ಯವನ್ನು ಅಂದಿನ ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದರು ಉದ್ಘಾಟಿಸಿದರು.

**ಕನ್ನಡಿಗರ ಶಾಂತಿ, ಸಂಯಮ, ಸದ್ಭಾವನೆಯ ಗುಣಗಳೇ ಅವರಿಗೆ ಮಾರಕವಾಗಿವೆಯೇ?**

ನಮ್ಮ ನೆರೆ ರಾಜ್ಯಗಳ ಆರ್ಭಟ, ಅಟ್ಟಹಾಸಗಳನ್ನು ನೋಡಿದಾಗ ಕನ್ನಡಿಗರ ಸದ್ಭಾವನೆಗಳನ್ನು ದುರುಪಯೋಗ ಪಡಿಸಿಕೊಳ್ಳಲಾಗುತ್ತದೆಂದು ಅನಿಸುತ್ತದೆ. ಕನ್ನಡಿಗರ ಸಜ್ಜನಿಕೆ, ಪರಧರ್ಮ ಸಹಿಷ್ಣುತೆಗಳಿಗೆ ಇತಿಹಾಸವೇ ಸಾಕ್ಷಿಯಾಗಿದೆ. ಪರರ ಬಗೆಗೆ ಅಸೂಯೆ, ದ್ವೇಷಗಳು ನಮಗೆ ಖಂಡಿತ ಬೇಡ. ಆದರೆ ನಮ್ಮದನ್ನು ನಾವು ಉಳಿಸಿಕೊಳ್ಳಬೇಕು. ನಮ್ಮ ನೆಲ ಜಲ ಸಂಸ್ಕೃತಿಯನ್ನು ನಾವು ರಕ್ಷಿಸಿಕೊಂಡು ಹೋಗಬೇಕು. ಅದಕ್ಕಾಗಿ ನಾವು 'ಗಟ್ಟಿಗರು' ಆಗಬೇಕು. ದುಷ್ಟರಾಗುವುದು ಬೇಡ.

**ಕನ್ನಡ ಭಾಷಾ ಬೆಳವಣಿಗೆ ದೃಷ್ಟಿಯಿಂದ ಏನು ಮಾಡಬೇಕು?**

ತಮಿಳು, ಬಂಗಾಲಿ, ಹಿಂದಿ ಭಾಷೆಗಳ ಬೆಳವಣಿಗೆಯನ್ನು ನೋಡಿದರೆ, ನಮ್ಮ ಸಾಧನೆ ಇನ್ನೂ ಹೆಚ್ಚಾಗಬೇಕು. ಸಂತೋಷ, ಅಭಿಮಾನದ ಸಂಗತಿಯೆಂದರೆ ನಮಗೆ ಆರು ಜ್ಞಾನಪೀಠ ಪ್ರಶಸ್ತಿಗಳು ಬಂದಿವೆ. ಎಲ್ಲ ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಪೀಠಗಳು, ಅಕಾಡೆಮಿಗಳು, ಸಂಸ್ಕೃತಿ ಇಲಾಖೆ ಹಾಗೂ ಆಸಕ್ತ ಕನ್ನಡ ಪಂಡಿತರ ಒಂದು ಚಕ್ರಗೋಷ್ಠಿಯನ್ನು (Round Table Conference) ಸಂಘಟಿಸಿ; ವ್ಯವಸ್ಥಿತವಾದ ಕಾಲ ಮಿತಿಯ ಯೋಜನೆಗಳನ್ನು ರೂಪಿಸಬೇಕು. ಪರಸ್ಪರರಿಗೆ ಕನ್ನಡ ಕಾರ್ಯಗಳ ಅರಿವು ಇರಬೇಕು. ವೈಜ್ಞಾನಿಕ, ವೈಚಾರಿಕ ಸಾಹಿತ್ಯ ನಿರ್ಮಾಣವಾಗಬೇಕು.

**ನೀವು ಎರಡು ಕರ್ನಾಟಕದ ಪರವಾಗಿದ್ದೀರಾ?**

(ಈ ಪ್ರಶ್ನೆಗೆ ಡಾ. ಪಾಪು ಶಾಂತವಾಗಿ, ಗಂಭೀರವಾಗಿ, ತೂಕಮಾಡಿ ಶಬ್ದಗಳನ್ನಿಡುತ್ತ ಮಾತನಾಡಿದರು) ರಾಜ್ಯವನ್ನು ಬಿಡಿಯಾಗಿ ನೋಡುವ ದೃಷ್ಟಿ ಬೆಳೆದಿದೆ. ಇಡಿಯಾಗಿ ನೋಡುವ ದೃಷ್ಟಿ ಬರಲಿಲ್ಲ. ಎಂಥ ನಾಡಿದ್ದು, ಎಂಥ ಕಾಡಾಯಿತೋ ಎಂದು ವ್ಯಥೆ ಪಡಬೇಕಾಗಿದೆ. ಈ ಅಸಮಾನತೆ ಉಳಿದುಕೊಂಡರೆ, ವಿಭಜನೆಯ ಧ್ವನಿಗೆ ಬಲ ಬರುವುದೆಂದು ಎಚ್ಚರಿಸುವ ಧ್ವನಿ ಎತ್ತಿದರೆ, ಕೆಲವರಿಗೆ ಅದು ಎರಡು ಕರ್ನಾಟಕಗಳ ಕೂಗು ಎಂಬಂತೆ ಕೇಳಿಸಿದೆ. ವಿಭಜನೆಯ ಕೂಗನ್ನು ನಿರರ್ಥಕಗೊಳಿಸಲು ಅಸಮಾನತೆಯನ್ನು ನಿವಾರಿಸುವ ಕೆಲಸ ತ್ವರಿತ ಗತಿಯಿಂದ ನಡೆಯಬೇಕು. ಆ ಕೆಲಸ ನಡೆಯುವ ಬಗೆಗೆ ಒತ್ತಾಯ ಮಾಡದೇ ಇದ್ದವರು ಈ ರಾಜ್ಯಕ್ಕೆ ಬಹುದೊಡ್ಡ ಅನ್ಯಾಯವನ್ನು ಬಗೆಯುತ್ತಿದ್ದಾರೆ. ಒಂದೇ ಕರ್ನಾಟಕ ಎಂಬ ಕೂಗಿನಿಂದ ಕರ್ನಾಟಕ ಒಂದಾಗಿ ಉಳಿಯುವುದಿಲ್ಲ. ಅದನ್ನು ಒಂದಾಗಿ ಇರಿಸಿಕೊಂಡರೆ ಮಾತ್ರ ಅದು ಒಂದಾಗಿ ಉಳಿಯುತ್ತದೆ. ಆ ಕಾರ್ಯವನ್ನು ಪ್ರತಿಯೊಬ್ಬ ಕನ್ನಡಿಗನೂ ಮಾಡಬೇಕು. ಅರ್ಧಶತಮಾನದ ಹಿಂದೆಯೇ ಸಮಗ್ರ ಕನ್ನಡ ನಾಡಿನ ಕನಸು ಕಂಡವರು ನಾವು. ಚೆಲುವ ಕನ್ನಡ ನಾಡು ಇನ್ನೂ ಕನಸಾಗಿಯೇ ಉಳಿದಿದೆ! (ಈ ಮಾತುಗಳನ್ನು ಹೇಳುವಾಗ ಡಾ. ಪಾಪು ಧ್ವನಿಯಲ್ಲಿ ದುಗುಡವಿತ್ತು).

**ಇಂದಿನ ಪರಿಸ್ಥಿತಿಯಲ್ಲಿ ನಿಮ್ಮ ಸಂದೇಶವೇನು?**

ನಾನು ಯಾವಾಗಲೂ ಆಶಾವಾದಿ. ರಾಜ್ಯೋತ್ಸವದ ಇಂದಿನ ಸುಸಂದರ್ಭದಲ್ಲಿ ನಾವೆಲ್ಲರೂ ಆತ್ಮಾವಲೋಕನ ಮಾಡಿಕೊಳ್ಳಬೇಕು. ನಾಲ್ಕು ದಶಕಗಳಿಗೆ ಮಿಕ್ಕಿದ ಈ ಕಾಲಾವಧಿಯಲ್ಲಿ ನಾವು ಅನೇಕ ಉತ್ತಮ ಕಾರ್ಯಗಳನ್ನು ಮಾಡಿದ್ದೇವೆ. ಅವುಗಳನ್ನು ಮುಂದುವರಿಸಿಕೊಂಡು ಹೋಗಬೇಕು. ಲೋಪ ದೋಷಗಳನ್ನು ಸರಿಪಡಿಸಿಕೊಳ್ಳಬೇಕು. ಸ್ಪಷ್ಟತೆ, ಸ್ವವಿಮರ್ಶೆಗೆ ನಮ್ಮನ್ನು ನಾವು ಒಳಪಡಿಸಿಕೊಳ್ಳಬೇಕು. ಸುವಿಚಾರಗಳು ಯಾವುದೇ ದಿಕ್ಕಿನಿಂದ ಬರಲಿ ಅವುಗಳನ್ನು ಸ್ವೀಕರಿಸಬೇಕು. ನಾಡನ್ನು ಪ್ರೀತಿಸಿ, ಗೌರವಿಸಿ, ದೇಶದ ಬಗೆಗೂ ಅಭಿಮಾನವನ್ನು ಬೆಳೆಸಿಕೊಳ್ಳಬೇಕು. ಕನ್ನಡ, ಕಾರ್ಯವನ್ನು ಎಲ್ಲರೂ ಪಾದ್ರಿಯ ಶ್ರದ್ಧೆಯಿಂದ ಮಾಡಬೇಕು.

**■ ನಿರಂಜನ ವಾಲಿಶೆಟ್ಟರ**



# ಅಮರ್ತ್ಯ ಸೇನ್: ಹಸಿವು ಹರಣ ವಿಶ್ಲೇಷಕನಿಗೆ ನೊಬೆಲ್ ಪುರಸ್ಕಾರ

**ಬ್ರಿಟನ್ನಿನಲ್ಲಿ ಮೂವತ್ತು ವರ್ಷ ಇದ್ದರೂ ಅಮರ್ತ್ಯ ಸೇನ್ ಇನ್ನೂ ಭಾರತದ ಪೌರತ್ವ ಉಳಿಸಿಕೊಂಡಿದ್ದಾರೆ. ಹಾಗಾಗಿಯೇ ಮಕ್ಕಳಿಗೂ ಭಾರತ ಪೌರತ್ವ ಲಭ್ಯವಾಗುವಂತಾಗಲು ಮಡದಿ ನವನೀತಾರನ್ನು ಪ್ರತಿ ಹೆರಿಗೆಗೂ ಭಾರತಕ್ಕೆ ಕಳಿಸಿದ್ದರು.**

■ ಎಂ. ಎಚ್. ರವಿಶಂಕರ್

ಕ್ಷಾಮಕ್ಕೆ ಕೇವಲ ಕೃಷಿ ಉತ್ಪನ್ನಗಳ ಕೊರತೆ ಕಾರಣವಲ್ಲ. ದೇಶದ ಆರ್ಥಿಕ ಸ್ಥಿತಿಯ ಕುಸಿತವೇ ಇದಕ್ಕೆ ಮೂಲ ಕಾರಣ ಎಂದು ವಿಶ್ಲೇಷಿಸಿದ ಅಮರ್ತ್ಯ ಸೇನ್ ಅವರಿಗೆ ಈ ಬಾರಿ ಆರ್ಥಿಕ ಕ್ಷೇತ್ರಕ್ಕೆ ನೀಡಲಾಗುವ ನೊಬೆಲ್ ಪ್ರಶಸ್ತಿ ದೊರೆತಿದೆ. ಭಾರತಕ್ಕೆ 6ನೇ ಬಾರಿ ನೊಬೆಲ್ ಪ್ರಶಸ್ತಿ ಗರಿಯನ್ನು ಮೂಡಿಸಿದ್ದೇ ಅಲ್ಲದೆ ಸ್ವೀಡನ್ನಿನ ವಿಜ್ಞಾನ ಅಕಾಡೆಮಿ ಏಷ್ಯಾದ ಅರ್ಥಶಾಸ್ತ್ರಜ್ಞನಿಗೆ ನೀಡಿದ ಮೊದಲ ಬಹುಮಾನ ಇದು ಎನ್ನುವುದು ವಿಶೇಷ.

ಕ್ಷೇಮಾಭಿವೃದ್ಧಿ ಅರ್ಥಶಾಸ್ತ್ರದ ಪರಿಕಲ್ಪನೆಯನ್ನು ವಿಶ್ವಕ್ಕೆ ನೀಡಿದ, ಬಡತನ, ಹಸಿವು, ಕ್ಷಾಮಗಳಿಗೆ ಕಾರಣವಾಗುವ ಸಾಮಾಜಿಕ ಸಂದರ್ಭಗಳನ್ನು ಸ್ವತಂತ್ರವಾಗಿ ವಿಶ್ಲೇಷಣೆ ಮಾಡಿ ಜಗತ್ತಿನ ಪ್ರಮುಖ ಅರ್ಥಶಾಸ್ತ್ರಜ್ಞರಾದ ಅಮರ್ತ್ಯಸೇನ್ ಅವರಿಗೆ ಇದು ಅರ್ಹ ಪ್ರಶಸ್ತಿ.

ಬಂಗಾಳದಲ್ಲಿ ಜನಿಸಿ ಶಾಂತಿನಿಕೇತನದಲ್ಲಿ ಪ್ರಾಥಮಿಕ ಶಿಕ್ಷಣ ಪಡೆದು ಕಲ್ಕತ್ತದ ಪ್ರೆಸಿಡೆನ್ಸಿ ಕಾಲೇಜಿನಿಂದ ಅರ್ಥಶಾಸ್ತ್ರದ ಪದವಿ ಪಡೆದ ಅಮರ್ತ್ಯ ಸೇನ್ ಹುಟ್ಟಿದ್ದು ಶಾಂತಿನಿಕೇತನ ಬಳಿಯ ಗುರುಪಲ್ಲಿ ಸೇನ್ ಎಂಬಲ್ಲಿ, 1933ರ ಮೇ 3 ರಂದು. ಪ್ರಾಥಮಿಕ ಶಿಕ್ಷಣ ಪಡೆಯುವಾಗಿನಿಂದಲೂ ಅಮರ್ತ್ಯ ಸರಳ ಜೀವಿ. ಈ ಸರಳತನವನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಬ್ರಿಟನ್ನಿನಲ್ಲಿ ನೆಲೆಸಿದ್ದರೂ ತಾಯಿ ಅಮಿತಾ ಸೇನ್ ಅವರನ್ನು ನೋಡಲು ಆಗಾಗ ಬರುತ್ತಾರೆ. ಆಗ ಹಳೆಯ ಸೈಕಲ್ ಮೇಲೆ ಸವಾರಿ ಮಾಡಿ ಹಳೆಯ ಸಹಪಾಠಿಗಳನ್ನು ಕಂಡು ಪಟ್ಟಾಂಗ ಹೊಡೆದು ತಾವೊಬ್ಬ ಖ್ಯಾತ ಅರ್ಥಶಾಸ್ತ್ರಜ್ಞ ಎಂಬ ಹಮ್ಮನ್ನು ಮರೆತು ಎಲ್ಲರೊಡನೆ ಒಂದಾಗುತ್ತಾರೆ.

ಶಾಂತಿನಿಕೇತನದಲ್ಲಿ ಆರಂಭಿಕ ಶಿಕ್ಷಣ ಪಡೆದ ಅಮರ್ತ್ಯ ಸೇನ್ ಕಲ್ಕತ್ತದ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅರ್ಥಶಾಸ್ತ್ರದಲ್ಲಿ ಪದವಿ ಪಡೆದರು. ನಂತರ ಲಂಡನ್ನಿನ ಟ್ರಿನಿಟಿ ಕಾಲೇಜಿನಿಂದ ಸ್ನಾತಕೋತ್ತರ ಪದವಿ ಗಳಿಸಿ ಕಲ್ಕತ್ತಕ್ಕೆ ವಾಪಸಾಗಿ ಜಾಧವಪುರ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ ವೃತ್ತಿ ಆರಂಭಿಸಿದರು. ಅಲ್ಲಿದ್ದಾಗಲೇ ನವನೀತಾ ಎಂಬಾಕೆಯನ್ನು ಪ್ರೀತಿಸಿದರು. ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪದವಿ ಗಳಿಸಿದ್ದ ನವನೀತಾ ಚರ್ಚಾ ಸ್ಪರ್ಧೆಗೆಂದು ಬಂದವಳು ಅಮರ್ತ್ಯರ ಮನಸ್ಸನ್ನು ಕದ್ದರು. ಜಾಧವಪುರ ವಿಶ್ವವಿದ್ಯಾಲಯ ತ್ಯಜಿಸಿ ಕೆಲಕಾಲ ದೆಹಲಿಯ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಅಧ್ಯಾಪಕರಾಗಿದ್ದ ಅಮರ್ತ್ಯ ಕೇಂಬ್ರಿಜ್ ವಿಶ್ವವಿದ್ಯಾಲಯದ ಟ್ರಿನಿಟಿ ಕಾಲೇಜು

## ಅಮರ್ತ್ಯಸೇನರ ಕೃತಿಗಳು

1. POVERTY AND FAMINES : AN ESSAY ON ENTITLEMENT AND DEPRIVATION
2. INDIA : ECONOMIC DEVELOPMENT AND SOCIAL OPPORTUNITY
3. STANDARD OF LIVING
4. THE POLITICAL ECONOMY OF HUNGER
5. GROWTH ECONOMICS
6. ಜೀಬನ್ ಜಾತ್ರ ಓ ಅರ್ಥ ನೀತಿ (ಬಂಗಾಳಿ)

**ನನ್ನ ದೃಷ್ಟಿಯಲ್ಲಿ ಬಡತನವೆಂದರೆ ವ್ಯಾಪಕ ಅನಕ್ಷರತೆ, ಕಳಪೆ ಆರೋಗ್ಯ ರಕ್ಷಣಾ ವ್ಯವಸ್ಥೆ, ಅಪೂರ್ಣ ಭೂಸುಧಾರಣೆಗಳು ಹಾಗೂ ಮಕ್ಕಳನ್ನು ಕುರಿತ ನಿರ್ಲಕ್ಷ್ಯ ಮುಂತಾದವುಗಳೇ ಆಗಿವೆ.**



ಸೇರಿದರು. ಇಂಗ್ಲೆಂಡಿಗೆ ಬಂದ ನವನೀತಾ ಅವರಿಗೆ ಅಮರ್ತ್ಯ ಇನ್ನಷ್ಟು ಹತ್ತಿರವಾದರು. 1960ರಲ್ಲಿ ಇಬ್ಬರೂ ಭಾರತಕ್ಕೆ ಬಂದು ಹಿರಿಯರ ಆಶೀರ್ವಾದದೊಂದಿಗೆ ವಿವಾಹವಾದರು.

ಅಮರ್ತ್ಯ ನವನೀತಾ ಅವರ ಸಂಸಾರ ಕೇಂಬ್ರಿಜ್‌ನಲ್ಲಿ ಆರಂಭವಾದರೂ ಮೆಸಾಚುಸೆಟ್ಸ್, ಸ್ಟ್ಯಾನ್‌ಫೋರ್ಡ್, ಬರ್ಕ್‌ಲೀ, ಹಾರ್ವರ್ಡ್, ದೆಹಲಿಯಲ್ಲಿ ಮುಂದುವರಿಯಿತು. ಆ ವೇಳೆಗ ನವನೀತಾ ಡಾಕ್ಟರೇಟ್ ಪಡೆದಿದ್ದೇ ಅಲ್ಲದೆ ಇಬ್ಬರು ಹೆಣ್ಣು ಮಕ್ಕಳಿಗೆ ಜನ್ಮ ನೀಡಿದರು.

ಬ್ರಿಟನ್ನಿನಲ್ಲಿ ಮೂವತ್ತು ವರ್ಷ ಇದ್ದರೂ ಅಮರ್ತ್ಯ ಸೇನ್ ಇನ್ನೂ ಭಾರತದ ಪೌರತ್ವ ಉಳಿಸಿಕೊಂಡಿದ್ದಾರೆ. ಹಾಗಾಗಿಯೇ ಮಕ್ಕಳಿಗೂ ಭಾರತ ಪೌರತ್ವ ಲಭ್ಯವಾಗುವಂತಾಗಲು ಮಡದಿ ನವನೀತಾರನ್ನು ಪ್ರತಿ ಹೆರಿಗೆಗೂ ಭಾರತಕ್ಕೆ ಕಳಿಸಿದ್ದರು.

ಹಿರಿಯ ಮಗಳು ಅಂತರಾ ರಾಯಿಟರ್ ಪ್ರತಿಷ್ಠಾನದ ಫೆಲೋಶಿಪ್ ಪಡೆದು ಆಕ್ಸ್‌ಫರ್ಡ್‌ನಲ್ಲಿದ್ದಾಳೆ. ಎರಡನೇ ಮಗಳು ನಂದನಾ ಭಾರತ-ಕೆನಡಾ ಸಹಯೋಗದ ಯೋಜನೆಯಲ್ಲಿ ಕೆಲಸ ಮಾಡುತ್ತಾ ಮಾಂಟ್ರಿಯಲ್‌ನಲ್ಲಿದ್ದಾಳೆ. ಮಕ್ಕಳು ಬೆಳೆದು ಸ್ವತಂತ್ರರಾದ ಮೇಲೆ ನವನೀತಾ ಭಾರತಕ್ಕೆ ಬಂದು ನೆಲೆಸಿದ್ದಾರೆ.

ಅಮರ್ತ್ಯ ಸೇನ್ ಅವರು ಕೇಂಬ್ರಿಜ್‌ನಲ್ಲಿಯ ಕಿಂಗ್ಸ್ ಕಾಲೇಜಿನ ಇತಿಹಾಸ ಮತ್ತು ಅರ್ಥಶಾಸ್ತ್ರ ಕೇಂದ್ರದ ನಿರ್ದೇಶಕಿ ಎಮ್ಮಾ ರಶೀದ್ ಅವರನ್ನು ಮರು ಮದುವೆಯಾಗಿ ಅವರಿಂದ ಇಂದ್ರಾಣಿ, ಕಬೀರ್ ಎಂಬ ಇಬ್ಬರು ಮಕ್ಕಳನ್ನು ಪಡೆದಿದ್ದಾರೆ.

1943ರಲ್ಲಿ ಬಂಗಾಳದಲ್ಲಿ ಭೀಕರ ಕ್ಷಾಮ ತಲೆ ದೋರಿದಾಗ ಅಮರ್ತ್ಯ ಇನ್ನು ಒಂಭತ್ತು ವರ್ಷದ ಬಾಲಕ. ಕ್ಷಾಮದ ಕಾವನ್ನು ಕಂಡು ಬೆರಗುಗೊಂಡ ಆ ಬಾಲಕ ಈಗ ಕ್ಷಾಮಕ್ಕೆ ಕ್ಷೇಮದ ಭಾಷ್ಯವನ್ನು ಬರೆದ. ಎರಡನೇ ಮಹಾಯುದ್ಧದ ಭೀಕರ ಪರಿಣಾಮ, ಜಪಾನಿಯರ ಆಕ್ರಮಣ, ಬ್ರಿಟಿಷರ ದಬ್ಬಾಳಿಕೆ, ಆಫ್ರಿಕಾಖಂಡದ ದೇಶಗಳ ಬಡತನ ಅಮರ್ತ್ಯರ ಅಂತರಂಗವನ್ನು ಕಲಕಿದವು. 1974ರಲ್ಲಿ ಬಾಂಗ್ಲಾದಲ್ಲಿ ನೆರೆಹಾವಳಿಯಿಂದ ದೇಶ ದಿವಾಳಿಯಾದ ಪರಿಸ್ಥಿತಿಯನ್ನು ಅಮರ್ತ್ಯ ಸೂಕ್ಷ್ಮವಾಗಿ ಅಧ್ಯಯನ ಮಾಡಿದರು.

ಅರ್ಥಶಾಸ್ತ್ರವೆಂಬ ಲೆಕ್ಕಾಚಾರದ ವಿದ್ಯೆಗೆ ಮಾನವೀಯತೆ, ಅನುಕಂಪದ ದೃಷ್ಟಿಕೋನವನ್ನು ನೀಡಿದ ಅಮರ್ತ್ಯ ವಿಶ್ವಸಂಸ್ಥೆಯ ಸಲಹೆಗಾರರೂ ಹೌದು. ಬರುವ ಡಿಸೆಂಬರ್‌ನಲ್ಲಿ ಅಮರ್ತ್ಯ ಭಾರತಕ್ಕೆ ಬರಲಿದ್ದಾರೆ. ಅವರನ್ನು ಅಭಿನಂದಿಸಲು ಪಶ್ಚಿಮ ಬಂಗಾಲದಲ್ಲಿ ಸಿದ್ಧತೆಗಳು ನಡೆದಿವೆ. ಕರ್ನಾಟಕದ ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಕೂಡಾ ಅಮರ್ತ್ಯರನ್ನು ರಾಜ್ಯಕ್ಕೆ ಆಹ್ವಾನಿಸಿದ್ದಾರೆ. ಅಮರ್ತ್ಯ ಸೇನ್ ಇಡೀ ಭಾರತಕ್ಕೆ ಹೆಮ್ಮೆ ತಂದಿದ್ದಾರೆ ಎನ್ನುವುದಕ್ಕೆ ಇದು ಉದಾಹರಣೆ.

ಅಮರ್ತ್ಯರಿಗೆ ನೊಬೆಲ್ ಪ್ರಶಸ್ತಿ ಎಂದರೆ ಅರ್ಥಶಾಸ್ತ್ರಕ್ಕೆ ಮಾನವೀಯ ಅಂತಃಕರಣ ಮುಖ ತೋರಿಸಿದ ಭಾರತದ ಭೌದ್ಧಿಕ ಪರಂಪರೆಗೆ ಸಿಕ್ಕ ಪುರಸ್ಕಾರ ಎನ್ನಬಹುದು. ■

### ಠಾಗೋರ್ ಅವರಿಂದ ನಾಮಕರಣ

ಅಮರ್ತ್ಯ ಸೇನ್ ಹುಟ್ಟಿದ್ದು ರವೀಂದ್ರನಾಥ ಠಾಗೋರರ ಶಾಂತಿನಿಕೇತನದ ಸಮೀಪ ಇರುವ ಗುರುಪಲ್ಲಿ ಸೇನ್ ಎಂಬ ಸ್ಥಳದಲ್ಲಿ. ಅಮರ್ತ್ಯ ಅವರ ಅಜ್ಜ ಕ್ಷಿತಿ ಮೋಹನ್ ಅವರು ಠಾಗೋರರ ಸ್ನೇಹಿತರು. 1933ರ ಮೇ 3 ರಂದು ಜನಿಸಿದ ಮಗುವನ್ನು ನೋಡಲು ರವೀಂದ್ರನಾಥ ಠಾಗೋರರು ಕ್ಷಿತಿ ಮೋಹನ್ ಅವರ ಮನೆಗೆ ಬಂದಿದ್ದರು. ಪುಟ್ಟ ಶಿಶುವಿನ ವರ್ಚಸ್ಸನ್ನು ಕಂಡು ಸ್ವತಃ ಠಾಗೋರ್ ಅವರೇ ಮಗುವಿಗೆ 'ಅಮರ್ತ್ಯ' ಎಂದು ನಾಮಕರಣ ಮಾಡಿದರು. ಭಾರತಕ್ಕೆ ಮೊಟ್ಟ ಮೊದಲ ನೊಬೆಲ್ ಪ್ರಶಸ್ತಿಯ ಗರಿಯನ್ನು ಮೂಡಿಸಿದ ರವೀಂದ್ರನಾಥ ಠಾಗೋರ್ (1913) ಅವರಿಂದ ನಾಮಕರಣ ಮಾಡಿಸಿಕೊಂಡ ಹಸುಳೆ ಮತ್ತೊಮ್ಮೆ ಭಾರತಕ್ಕೆ ನೊಬೆಲ್ ಪ್ರಶಸ್ತಿಯ ಕೋಡು ಮೂಡಿಸಿದ್ದಾರೆ.

ಬಡತನಕ್ಕೆ ಮರುಗಿ ಸಾಹಿತ್ಯ ರಚಿಸಿ ಠಾಗೋರರು ನೊಬೆಲ್ ಪ್ರಶಸ್ತಿ ಪಡೆದರೆ, ಅಮರ್ತ್ಯ ಹಸಿವಿಗೆ ಕಾರಣ ಹುಡುಕಿ ಠಾಗೋರ್ ಪ್ರಶಸ್ತಿ ಪಡೆದ 85 ವರ್ಷಗಳ ನಂತರ ಇಡಿ ಏಷ್ಯಾಕ್ಕೇ ಹೆಮ್ಮೆ ಎನಿಸಿದರು.

# ನೊಬೆಲ್ ಪ್ರಶಸ್ತಿಯ ಹಿನ್ನೆಲೆ

ನೊಬೆಲ್‌ಪುರಸ್ಕಾರ ಜಗತ್ತಿನ ಪ್ರತಿಷ್ಠಿತ ಪ್ರಶಸ್ತಿಯಾಗಿದೆ. ಈ ಪ್ರಶಸ್ತಿಯ ಸಂಸ್ಥಾಪಕ ಸ್ವೀಡನ್ನಿನ ಆಲ್‌ಫ್ರೆಡ್ ಬೆರ್ನ್ ಹಾರ್ಡ್ ನೊಬೆಲ್. ಅಂತರರಾಷ್ಟ್ರೀಯ ಮಟ್ಟದಲ್ಲಿ ಆರು ಕ್ಷೇತ್ರಗಳಲ್ಲಿ ವಿಶೇಷ ಸಾಧನೆಗೈದ ವ್ಯಕ್ತಿಗಳಿಗೆ ಪ್ರತಿವರ್ಷ ಇವರ ಹೆಸರಿನಲ್ಲಿ ಪ್ರಶಸ್ತಿ ನೀಡಲಾಗುತ್ತದೆ. ಈ ಪ್ರತಿಷ್ಠಿತ ಪ್ರಶಸ್ತಿಯನ್ನು ಭೌತಶಾಸ್ತ್ರ, ರಸಾಯನ ಶಾಸ್ತ್ರ, ಸಾಹಿತ್ಯ, ವೈದ್ಯಕೀಯ, ಶಾಂತಿ ಹಾಗೂ ಅರ್ಥಶಾಸ್ತ್ರ- ಈ ಕ್ಷೇತ್ರಗಳಲ್ಲಿ ಅಗಣಿತ ಸೇವೆ ಸಲ್ಲಿಸಿದ ವ್ಯಕ್ತಿಗಳಿಗೆ ನೀಡಲಾಗುತ್ತದೆ.

1901ರಲ್ಲಿ ಆರಂಭವಾದ ಈ ಪ್ರಶಸ್ತಿ ನೀಡಿಕೆ, ಅಂದಿನಿಂದ ಇಂದಿನವರೆಗೆ ನಿರಂತರವಾಗಿ ನಡೆದುಕೊಂಡು ಬರುತ್ತಿದೆ. ವಿಶ್ವದ ಯಾವುದೇ ಭಾಗದವರಾಗಲಿ, ಭಾಷೆಯವರಾಗಲಿ, ಜನಾಂಗವಾಗಲಿ, ಮಾನವ ಕಲ್ಯಾಣಕ್ಕೆ ಪ್ರಯೋಜನಕಾರಿ ಹಾಗೂ ಅಸಾಮಾನ್ಯ ಸೇವೆ ಸಲ್ಲಿಸಿದವರನ್ನು ಗುರುತಿಸಿ ಗೌರವಿಸುವ ಕಾರ್ಯ ನಡೆಯುತ್ತಾ ಬಂದಿದೆ.

ಪ್ರಾರಂಭದಲ್ಲಿ ಐದು ಕ್ಷೇತ್ರಗಳಿಗೆ ನೀಡುತ್ತಿದ್ದ ಈ ಪ್ರಶಸ್ತಿ ಪಟ್ಟಿಯಲ್ಲಿ ನಂತರ 1969ರಿಂದ ಅರ್ಥಶಾಸ್ತ್ರವು ಸೇರಿತು. ಅರ್ಥಶಾಸ್ತ್ರಕ್ಕೆ ನೊಬೆಲ್ ಪ್ರಶಸ್ತಿ ನೀಡುವ ಬಗ್ಗೆ ಹಿಂದೆ ವಾದ ವಿವಾದಗಳು ಏನೇ ನಡೆದಿದ್ದರೂ ಈ ಬಾರಿಯ ಆರ್ಥಿಕ ಕ್ಷೇತ್ರದ ನೊಬೆಲ್ ಪ್ರಶಸ್ತಿ ಭಾರತೀಯರಿಗೆ ದೊರೆತಿರುವುದು ಅತ್ಯಂತ ಸಂತಸದ ಸಂಗತಿ.

ಪ್ರಶಸ್ತಿಯು ಆರಂಭವಾದಾಗ 23,000 ಅಮೆರಿಕನ್ ಡಾಲರ್ ಇದ್ದ ಬಹುಮಾನದ ಮೊತ್ತವು ಈಗ 960000 ಡಾಲರ್‌ಗಳಿಗೆ ಏರಿದೆ.

## ನೊಬೆಲ್ ಪ್ರಶಸ್ತಿ ವಿಜೇತ ಭಾರತೀಯರು

### ರವೀಂದ್ರನಾಥ ಟ್ಯಾಗೋರ್ : (1861-1941)

ಇವರ ಖ್ಯಾತ ಗೀತಾಂಜಲಿ ಕೃತಿಗೆ 1913ರಲ್ಲಿ ಸಾಹಿತ್ಯ ಕ್ಷೇತ್ರದ ನೊಬೆಲ್ ಪ್ರಶಸ್ತಿ ದೊರೆಯಿತು. 1901ರಲ್ಲಿ ಇವರು ಸ್ಥಾಪಿಸಿದ 'ಶಾಂತಿನಿಕೇತನ'

# ಆಲ್‌ಫ್ರೆಡ್ ನೊಬೆಲ್

ಆಲ್‌ಫ್ರೆಡ್ ನೊಬೆಲ್ ಅಕ್ಟೋಬರ್ 21, 1833ರಲ್ಲಿ ಸ್ವೀಡನ್ನಿನ ರಾಜಧಾನಿ ಸ್ಟಾಕ್ ಹೋಂ ನಲ್ಲಿ ಜನಿಸಿದರು. ತಂದೆ ಇಮ್ಯುನಿಯಲ್ ನೊಬೆಲ್ ತಾಯಿ ಆಂಡ್ರಿಯಟ್. ಮೂಲತಃ ಗುತ್ತಿಗೆದಾರರಾದ ತಂದೆ ಪ್ರಾರಂಭದಲ್ಲಿ ಒಳ್ಳೆಯ ಹೆಸರು ಹಾಗೂ ಹಣವನ್ನು ಸಂಪಾದಿಸಿದರೂ, ತನ್ನ ವ್ಯಾಪ್ತಿಯನ್ನು ವಿಸ್ತರಿಸಲು ಪುನಃ ಬಂಡವಾಳ ತೊಡಗಿಸಿದರು. ಅದು ಹಿಂತಿರುಗಿ ಬಾರದಿದ್ದಾಗ ಆರ್ಥಿಕ ಪರಿಸ್ಥಿತಿ ಉಲ್ಬಣಗೊಂಡಿತು. ಇದರಿಂದ ಜುಗುಪ್ಸೆಗೊಂಡು ಆಲ್‌ಫ್ರೆಡ್ ಜನಿಸಿದ ವಾರದಲ್ಲೇ ರಷ್ಯ ಸೇರಿದರು.

ಸ್ಟಾಕ್ ಹೋಂನಲ್ಲಿ ತಾಯಿಯ ಆಸರೆಯಲ್ಲಿ ಬೆಳೆದ ನೊಬೆಲ್ ಕಷ್ಟದಲ್ಲಿಯೇ ಅಕ್ಷರದ ಅರಿವನ್ನು ಪಡೆದರು. ಏಳು ವರ್ಷಗಳ ನಂತರ ತಂದೆಯನ್ನು ಸೇರಿಕೊಂಡ ನೊಬೆಲ್ ರಷ್ಯಾ ಸೇರಿದರು. ಅಲ್ಲಿ ತಂದೆಯ ಶಸ್ತ್ರಾಸ್ತ್ರ ವೃತ್ತಿ ವೀಕ್ಷಣೆಯೊಂದಿಗೆ ಹಲವಾರು ಭಾಷೆಗಳನ್ನು ಕಲಿತರು. ರಸಾಯನಶಾಸ್ತ್ರದಲ್ಲಿ ಅಪಾರ ಜ್ಞಾನವನ್ನು ಪಡೆದರು.

1850ರಲ್ಲಿ ಪ್ಯಾರಿಸ್‌ಗೆ ಹೋದ ಆಲ್‌ಫ್ರೆಡ್ ಅಲ್ಲಿ ಒಂದು ವರ್ಷ ಹೆಚ್ಚಿನ ಅಧ್ಯಯನ ಮಾಡಿದರು. 1855ರಲ್ಲಿ ಶಸ್ತ್ರಾಸ್ತ್ರಗಳ ನಿರ್ಮಾಣಕ್ಕೆಂದು ಹೊಸ ಉದ್ಯಮ ಸ್ಥಾಪಿಸಿದರು. ಆದರೆ, ಅದು ತೀವ್ರ ನಷ್ಟಕ್ಕೊಳಗಾಯಿತು. ವೃತ್ತಿಯಲ್ಲಿ ಹಿನ್ನಡೆ ಉಂಟಾದರೂ ಸುಮ್ಮನೆ ಇರಲಿಲ್ಲ. ದೃಢ ಸಂಕಲ್ಪ ತೊಟ್ಟು ಸ್ಫೋಟಕ ವಸ್ತು ನಿರ್ಮಾಣಕ್ಕೆ ಬೇಕಾದ ನೈಟ್ರೋಗ್ಲಿಸರಿನ್ ತಯಾರಿಕೆಯಲ್ಲಿ ತೊಡಗಿದರು. ಕಾರ್ಖಾನೆಯಲ್ಲಿ ದೊಡ್ಡ ಪ್ರಮಾಣದ ಸ್ಫೋಟ ಸಂಭವಿಸಿತು. ಇದರಲ್ಲಿ ಆಲ್‌ಫ್ರೆಡರ ತಮ್ಮ ಹಾಗೂ ನಾಲ್ಕು ಜನ ಕೆಲಸಗಾರರು ಇನ್ನಿಲ್ಲವಾದರು. ಗುರಿ ಸಾಧನೆಯಲ್ಲಿ ತೊಡಗಿದ್ದ ಆಲ್‌ಫ್ರೆಡ್ ನೈಟ್ರೋಗ್ಲಿಸರಿನ್ ಸೆಲ್ಯೂಲೋಸ್‌ನಂತಹ ವಸ್ತುವಿನಿಂದ ಸ್ಫೋಟಕ ವಸ್ತು ಸಿದ್ಧ ಪಡಿಸಿದರು. ಮುಂದೆ ಇದು ' ಡೈನಮೈಟ್' ಎಂದು ಪ್ರಪಂಚದಲ್ಲಿ ಹೆಸರಾಗಿ ಅಪಾರ ಹಣ ಸಂಪಾದಿಸಿಕೊಟ್ಟಿತು.

ಇಪ್ಪತ್ತು ದೇಶಗಳಲ್ಲಿ ಎಂಭತ್ತಕ್ಕೂ ಅಧಿಕ ಉದ್ಯಮಗಳನ್ನು ಸ್ಥಾಪಿಸಿ ನೂರಾರು ಕೋಟಿ ಸಂಪಾದಿಸಿದರೂ ಆತನಿಗೆ ಅಗತ್ಯವಾಗಿ ಬೇಕಾಗಿದ್ದ ಮಾನಸಿಕ ನೆಮ್ಮದಿ ಇರಲಿಲ್ಲ. ಅಸ್ವಸ್ಥಗೊಂಡ ಮನಸ್ಸನ್ನು ಸ್ವಸ್ಥತೆಗೆ ತರಲು ಪ್ರೇಮದ ಆಶ್ರಯ ಪಡೆಯಲಿಚ್ಛಿಸಿದನು. ಆಗ ಅವರ ವಯಸ್ಸು ನಲವತ್ತು. ಇಪ್ಪತ್ತು ವರ್ಷದ ಯುವತಿಯ ಪ್ರೇಮದ ಬಲೆಯಲ್ಲಿ ಬಿದ್ದನು. ಅವಳಿಗಾಗಿ ಪ್ಯಾರಿಸ್‌ನಲ್ಲಿ ಪ್ರೇಮ ಸೌಧವನ್ನೇ ಕಟ್ಟಿಸಿದನು. ಆದರೆ ಅವಳು ಕೆಲವೇ ದಿನಗಳಲ್ಲಿ ಆಲ್‌ಫ್ರೆಡ್‌ನಿಂದ ದೂರವಾದಳು. ನಂತರ ತನ್ನ ಕಾರ್ಯದರ್ಶಿ ಬೆರ್ತಾವಾನ್ ಸಟ್ನರ್‌ರನ್ನು ಪ್ರೀತಿಸಿದನು. ಅವಳೂ ದೂರವಾದಳು. ಇಂತಹ ಸಮಯದಲ್ಲಿ ಮನಸ್ಸು ಛಿದ್ರಗೊಂಡಂತಾಗಿ ಶಾಂತಿಗಾಗಿ ಹಾತೊರೆಯುತ್ತಿತ್ತು. ಆಗ ಆಲ್‌ಫ್ರೆಡ್ ಮನುಕುಲದ ಏಳಿಗೆಗಾಗಿ ತನ್ನ ಸಂಪತ್ತನ್ನೆಲ್ಲಾ ವಿನಿಯೋಗಿಸಲು ನಿರ್ಧಾರ ಕೈಗೊಂಡರು. ಪ್ರಪಂಚಕ್ಕೆ ಉಪಯುಕ್ತ ಕೊಡುಗೆ ನೀಡುವ ಮೇಧಾವಿಗಳು, ವಿಜ್ಞಾನಿಗಳು, ಯೋಧರಿಗೆ ಪ್ರಶಸ್ತಿ ನೀಡಿ ಗೌರವಿಸಲು ಒಂದು ದತ್ತಿ ಸಂಸ್ಥೆ ಮಾಡಿ ಉಯಿಲನ್ನು ಬರೆದಿಟ್ಟನು. ಇದು ಕಾರ್ಯ ರೂಪಕ್ಕೆ ಬರುವ ಮೊದಲೇ 1896ರಲ್ಲಿ ಆತ ತೀರಿಕೊಂಡ.

ಆತನ ಬಂಧಗಳು ಆಸ್ತಿಗಾಗಿ ನ್ಯಾಯಾಲಯದ ಮೆಟ್ಟಿಲು ಹತ್ತಿದರು. ನ್ಯಾಯಾಲಯ ಆಲ್‌ಫ್ರೆಡ್‌ನ ಉಯಿಲಿನಂತೆಯೇ ನಡೆಯಬೇಕೆಂದು ತೀರ್ಪು ನೀಡಿತು. 1901ರಿಂದ ಇದು ಕಾರ್ಯ ರೂಪಕ್ಕೆ ಬಂದಿತು. ಅಂದಿನಿಂದ ಪ್ರತಿವರ್ಷ ಆತನ ಮರಣದ ದಿನವಾದ ಡಿಸೆಂಬರ್ 10 ರಂದು ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ.

■ಎ.ಎಂ. ಸುರೇಶ್

ಸಂಸ್ಥೆ ಮುಂದೆ ವಿಶ್ವ ಭಾರತಿ ವಿಶ್ವವಿದ್ಯಾಲಯವಾಗಿ ಪರಿವರ್ತನೆಯಾಯಿತು. ಸಾಹಿತಿ, ಲೇಖಕ, ಶಿಕ್ಷಣತಜ್ಞರಾಗಿದ್ದ ಇವರು ರಾಷ್ಟ್ರಗೀತೆಯನ್ನು ರಚಿಸಿದರು.

### ಸಿ.ವಿ. ರಾಮನ್ (1888-1970) :

ಭೌತಶಾಸ್ತ್ರಕ್ಕೆ ನೀಡುವ ನೊಬೆಲ್ ಪ್ರಶಸ್ತಿಯನ್ನು 1930ರಲ್ಲಿ ಪಡೆದುಕೊಂಡರು. ಇವರು ಪ್ರತಿಪಾದಿಸಿದ ಸಿದ್ಧಾಂತ 'ರಾಮನ್ ಪರಿಣಾಮ' ಎಂದೇ ಪ್ರಸಿದ್ಧವಾಗಿದೆ.

### ಹರಗೋವಿಂದ ಖುರಾನ (1922) :

ಪ್ರಸ್ತುತ ಅಮೆರಿಕದ ಪೌರರಾಗಿರುವ ಇವರು 1968ರಲ್ಲಿ ವೈದ್ಯಕೀಯ ಕ್ಷೇತ್ರದ ನೊಬೆಲ್ ಪ್ರಶಸ್ತಿಯನ್ನು ತಮ್ಮದಾಗಿಸಿಕೊಂಡರು.

### ಮದರ್ ಥೆರೆಸಾ (1910-1997) :

ಮೂಲತಃ ಆಲ್ಬೆನಿಯಾದವರಾದ ಇವರು ತಮ್ಮ 18ನೇ ವಯಸ್ಸಿನಲ್ಲಿಯೇ ಭಾರತಕ್ಕೆ ಬಂದರು. 1950ರಲ್ಲಿ 'ಮಿಷಿನರಿ ಆಫ್ ಚಾರಿಟಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. 1948ರಲ್ಲಿ ಭಾರತದ ಪೌರತ್ವವನ್ನು ಹೊಂದಿದರು. 1979ರಲ್ಲಿ ಶಾಂತಿಗಾಗಿ ನೊಬೆಲ್ ಪ್ರಶಸ್ತಿಯನ್ನು ಪಡೆದರು.

### ಸುಬ್ರಹ್ಮಣ್ಯಂ ಚಂದ್ರಶೇಖರ್ : (1910-1995) :

ಇವರು 1983ರಲ್ಲಿ ಭೌತಶಾಸ್ತ್ರಕ್ಕೆ ನೀಡುವ ನೊಬೆಲ್ ಪ್ರಶಸ್ತಿಯನ್ನು ಪಡೆದರು. ಈಗಿನ ಪಾಕಿಸ್ತಾನದಲ್ಲಿ ಜನಿಸಿದ ಇವರು ನಂತರ ಅಮೆರಿಕದ ಪೌರರಾಗಿದ್ದರು.

### ಅಮರ್ತ್ಯ ಸೇನ್ (1933):

ಅರ್ಥಶಾಸ್ತ್ರಕ್ಕೆ ನೀಡುವ ನೊಬೆಲ್ ಪ್ರಶಸ್ತಿಯನ್ನು ಈ ಬಾರಿ ಪಡೆದುಕೊಂಡಿದ್ದಾರೆ. ಕೆಂಬ್ರಿಡ್ಜ್ ವಿಶ್ವ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ಸೇನ್‌ರವರು ಮೂಲತಃ ಬಂಗಾಳದವರು. ಇವರ ಕ್ಷೇಮಾಭಿವೃದ್ಧಿ ಅರ್ಥಶಾಸ್ತ್ರಕ್ಕೆ ಈ ಪ್ರಶಸ್ತಿ ಸಂದಿದೆ.

## ನೊಬಲ್ ಕುಟುಂಬ

ಒಂದೇ ಕುಟುಂಬದ ಐವರು ಸದಸ್ಯರಿಗೆ ನೊಬಲ್ ಪ್ರಶಸ್ತಿ ಬಂದಿರುವುದು ಇಂದಿಗೂ ಒಂದು ದಾಖಲೆಯಾಗಿದೆ! ಕ್ಯೂರಿ ಕುಟುಂಬವು ಇಂತಹ ದೊಡ್ಡ ಸಾಧನೆಯನ್ನು ಮಾಡಿದ ಕೀರ್ತಿಗೆ ಪಾತ್ರವಾಗಿದೆ. ಕ್ಯೂರಿ ಕುಟುಂಬವನ್ನು "ನೊಬಲ್ ಕುಟುಂಬ"ವೆಂದು ಕರೆಯಬಹುದಾಗಿದೆ.

ಮೇಡಂ ಮೇರಿ ಕ್ಯೂರಿ ಮತ್ತು ಗಂಡ ಪಿಯರಿ ಕ್ಯೂರಿ ಅವರಿಬ್ಬರೂ ಕೂಡಿ "ರೇಡಿಯಂ" ಎಂಬ ಮೂಲ ವಸ್ತುವನ್ನು ಕಂಡುಹಿಡಿದುದಕ್ಕೆ 1903ರ ಭೌತಶಾಸ್ತ್ರದ ನೊಬಲ್ ಬಹುಮಾನ ದೊರೆಯಿತು.

ಮೇಡಂ ಮೇರಿ ಕ್ಯೂರಿ ಅವರಿಗೆ 'ರೇಡಿಯಂ' ಮತ್ತು 'ಪೊಲೋನಿಯಂ'ಗಳನ್ನು ಪರಸ್ಪರ ಪ್ರತ್ಯೇಕಗೊಳಿಸಿದ್ದಕ್ಕಾಗಿ 1911ರ ರಸಾಯನಶಾಸ್ತ್ರದ ನೊಬಲ್ ಬಹುಮಾನ ದೊರೆಯಿತು. ಒಟ್ಟಿಗೆ ಮೇಡಂ ಕ್ಯೂರಿ ಅವರಿಗೆ ಎರಡು ನೊಬಲ್ ಬಹುಮಾನ ದೊರೆತಂತಾಯಿತು. ವಿಶೇಷವೆಂದರೆ ಮೇಡಂ ಮೇರಿ - ಕ್ಯೂರಿ ಅವರಿಗೆ ಭೌತಶಾಸ್ತ್ರದ ಮತ್ತು ರಸಾಯನಶಾಸ್ತ್ರದ ನೊಬಲ್ ಪ್ರಶಸ್ತಿಗಳು ಬಂದಿವೆ.

ಮೇಡಂ ಮೇರಿ ಕ್ಯೂರಿ ಮತ್ತು ಪಿಯರಿ ಕ್ಯೂರಿ ಅವರ ಮಗಳು ಐರ್ರನಿ ಕ್ಯೂರಿ ಮತ್ತು ಅವಳ ಗಂಡ ಫ್ರೆಡರಿಕ್ ಜೂಲಿಯಟ್ ಅವರುಗಳಿಗೆ ರೇಡಿಯೋ ವಿಕಿರಣವನ್ನು ಕೃತಕವಾಗಿ ಸಂಸ್ಕರಿಸಿದ್ದಕ್ಕಾಗಿ 1935ರ ರಸಾಯನಶಾಸ್ತ್ರದ ನೊಬಲ್ ಬಹುಮಾನ ಪ್ರಾಪ್ತವಾಯಿತು.

ಅತಿ ಹೆಚ್ಚಿನ ಸಂಖ್ಯೆಯಲ್ಲಿ ನೊಬಲ್ ಬಹುಮಾನಗಳನ್ನು ಪಡೆದ ಕುಟುಂಬವೆಂಬ ಖ್ಯಾತಿಗೆ ಮೇಡಂ ಮೇರಿಕ್ಯೂರಿ ಕುಟುಂಬ ಪಾತ್ರವಾಗಿದೆ. ಈ ಕುಟುಂಬದ ಸಾಧನೆಯನ್ನು ಸರಿಗಟ್ಟಲು ಮತ್ತಾವ ಕುಟುಂಬಕ್ಕೂ ಸಾಧ್ಯವಾಗಿಲ್ಲ.

■ ಆಲೋಕ




ಕರ್ನಾಟಕದಲ್ಲಿದ್ದುಕೊಂಡು ಕನ್ನಡದಲ್ಲಿ ಮಾತನಾಡಬೇಕೆಂದು ಗೊತ್ತಿಲ್ವೇನೋ ರ್‍ಯಾಸ್ಕಲ್, ಸ್ಕೌಂಡ್ರಲ್!

## ಈ ಬಾರಿಯ ನೊಬೆಲ್ ವಿಜೇತರು

ಪ್ರಸಕ್ತ ಸಾಲಿನ ಪ್ರತಿಷ್ಠಿತ ನೊಬೆಲ್ ಪ್ರಶಸ್ತಿಯನ್ನು ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಈ ಕೆಳಕಂಡ ವ್ಯಕ್ತಿಗಳಿಗೆ ನೀಡಲಾಗಿದೆ.

**ಭೌತಶಾಸ್ತ್ರ** : ಈ ಸಾಲಿನ ಭೌತಶಾಸ್ತ್ರದ ನೊಬೆಲ್ ಪ್ರಶಸ್ತಿಯನ್ನು ಮೂರು ಜನರು ಹಂಚಿಕೊಂಡಿದ್ದಾರೆ. ಅವರೆಂದರೆ ಅಮೆರಿಕದ ರಾಬರ್ಟ್ ಲಾಫೆಲಿನ್, ಡ್ಯಾನಿಯಲ್ ಸುಯಿ ಹಾಗೂ ಜರ್ಮನಿಯ ಹಾರ್ಸ್ಟ್ ಸ್ಟೋಫ್ಮರ್.

**ರಸಾಯನ ಶಾಸ್ತ್ರ** : ಆಸ್ಟ್ರೇಲಿಯಾ ಸಂಜಾತ ವಾಲ್ಟರ್ ರೋಹ್ನ ಹಾಗೂ ಬ್ರಿಟನ್‌ನ ಜಾನ್ ಪೊಪೊಲ್ ಈ ಬಾರಿಯ ನೊಬೆಲ್ ಪ್ರಶಸ್ತಿಗೆ ಆಯ್ಕೆಯಾಗಿದ್ದಾರೆ.

**ಸಾಹಿತ್ಯ** : ಪೋರ್ಚ್‌ಗೀಸ್ ಕಾದಂಬರಿಕಾರ ಯೇನ್ ಸರಮ್ಯಾಗೋ ಅವರಿಗೆ 1998ರ ನೊಬೆಲ್ ಸಾಹಿತ್ಯ ಪ್ರಶಸ್ತಿ ಸಂದಿದೆ. 1982ರಲ್ಲಿ ಅವರು ಬರೆದ 'ಬಾಲ್ತಸಾರ್ ಮತ್ತು ಬ್ಲಿಮುಂಡಾ' ಕೃತಿಗೆ ಈ ಪ್ರಶಸ್ತಿ ದೊರೆತಿದೆ.

**ವೈದ್ಯಕೀಯ** : ಪುರುಷತ್ವ ವರ್ಧಕ 'ವಯಾಗ್ರ'ದ ಸೃಷ್ಟಿಗೆ ಕಾರಣರಾದ ಅಮೆರಿಕದ ಮೂರು ಜನ ವಿಜ್ಞಾನಿಗಳಿಗೆ ನೊಬೆಲ್ ಪ್ರಶಸ್ತಿ ದೊರೆತಿದೆ. ನೈಟ್ರಿಕ್ ಆಕ್ಸೈಡ್ ಅನಿಲ ಕಣಗಳು ಹೃದಯ ಮತ್ತು ಧಮನಿಮಂಡಲದ ಏರುಪೇರುಗಳ ಸೂಚನೆ ನೀಡುತ್ತದೆ ಎಂದು ಪ್ರತಿಪಾದಿಸಿದ್ದ ರಾಬರ್ಟ್ ಎಫ್. ಫರ್ಚ್‌ಗಾಟ್, ಲೂಯಿಸ್ ಜೆ. ಇಗ್ನಾರೊ ಮತ್ತು ಫೆರಿಡ್ ಮುರಾಡ್ ಅವರು ವೈದ್ಯಕೀಯ ಕ್ಷೇತ್ರದ ನೊಬೆಲ್ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

**ಅರ್ಥಶಾಸ್ತ್ರ** : ಖ್ಯಾತ ಭಾರತೀಯ ಅರ್ಥಶಾಸ್ತ್ರಜ್ಞ ಅಮರ್ತ್ಯ ಸೇನ್ ಅವರು ಅರ್ಥಶಾಸ್ತ್ರಕ್ಕೆ ನೀಡುವ ನೊಬೆಲ್ ಪ್ರಶಸ್ತಿಯನ್ನು ಪಡೆದುಕೊಂಡಿದ್ದಾರೆ. ಅವರ ಕ್ಷೇಮಾಭಿವೃದ್ಧಿ ಅರ್ಥಶಾಸ್ತ್ರಕ್ಕೆ ಈ ಪ್ರಶಸ್ತಿ ಸಂದಿದೆ. ನೊಬೆಲ್ ಪ್ರಶಸ್ತಿ ಪಡೆದ 6ನೇ ಭಾರತೀಯ ಎಂಬ ಖ್ಯಾತಿ ಇವರದು. ■

## ಸುರಿಗಿ ಸುವ್ವಾಲೆ

(ಜನಪದ ಮುಕ್ತಕಗಳು)

ಲೇ: **ಸುಜಾತ ಅಕ್ಕಿ**
ಪ್ರ: ರಚನಾ ಪ್ರಕಾಶನ
C/o ರಚನಾ ಕನ್ಸಲ್ಟಂಟ್ಸ್,
ರಾಮನಗರ, ಹಗರಿಬೊಮ್ಮನಹಳ್ಳಿ ತಾಲ್ಲೂಕು,
ಬಳ್ಳಾರಿ ಜಿಲ್ಲೆ - 583 212
ಮುದ್ರಣ: 1998,
ಪುಟ: 224, ಬೆಲೆ: ರೂ. 75/-




ಜಾನಪದ ತಜ್ಞೆ ಶ್ರೀಮತಿ ಸುಜಾತ ಅಕ್ಕಿಯವರ 'ಸುರಿಗಿ ಸುವ್ವಾಲೆ' ನಿಜಕ್ಕೂ ಒಂದು ಕರ್ನಾಟಕ ವಿವಾಹ ಪದ್ಧತಿಯ ಸಂಹಿತೆ; ಅರ್ಥಾತ್ ಮದುವೆಯ ಜಾನಪದ ಕೈಪಿಡಿ. ಇದರಲ್ಲಿನ ವಿಧಿ ವಿಧಾನಗಳನ್ನು ಯಾರೂ ಹೇಳಿ ಮಾಡಿಸಬೇಕಾಗಿಲ್ಲ. ಹಾಡು ಹರಿಯುತ್ತಲೇ ಕ್ರಿಯೆಯನ್ನು ಸೂಚಿಸುತ್ತಾ ಹೋಗುತ್ತದೆ. ಇಲ್ಲಿ ಪುರೋಹಿತನ ಮಧ್ಯಸ್ತಿಕೆಯೇ ಇಲ್ಲ; ಸಕಲವನ್ನೂ ಮುತ್ತೈದೆಯರೇ ಮಾಡಿ ಮುಗಿಸುತ್ತಾರೆ. ಮದುವೆ ಶಾಸ್ತ್ರದ ಪ್ರತಿ ಹಂತವನ್ನೂ ಬಲ್ಲ ಯಜಮಾನರು ಅಥವಾ ಹಿರಿಯ ಅನುಭವೀ ಹೆಣ್ಣು ಮಕ್ಕಳು ಆಚರಣೆಗಳನ್ನು ನಿರ್ದೇಶಿಸುತ್ತಾ ಹೋಗುತ್ತಾರೆ.

■ **ಸಾ. ಶಿ. ಮರುಳಯ್ಯ**

---

## ಗರ್ಭಿಣಿಯರ ಕೈಪಿಡಿ

ಲೇ: **ಡಾ. ಸುನಂದಾ ಕುಲಕರ್ಣಿ**
ಪ್ರ: ಅಂಕುರ ಪ್ರಕಾಶನ
473, ಬಸವೇಶ್ವರ ನಗರ ಮುಖ್ಯರಸ್ತೆ,
ವಾಟರ್‌ಟ್ಯಾಂಕ್ ಬಸ್‌ಸ್ಟಾಪ್ ಬಳಿ,
ಬಸವೇಶ್ವರನಗರ, ಬೆಂಗಳೂರು - 79.
ಮುದ್ರಣ: 1998,
ಪುಟ: 84, ಬೆಲೆ: ರೂ. 40/-




ಡಾ. ಸುನಂದಾ ಕುಲಕರ್ಣಿಯವರು ತಮ್ಮ ವೈದ್ಯಕೀಯ ಲೇಖನಗಳ ಮೂಲಕ ಕನ್ನಡ ಓದುಗರಿಗೆ ಚಿರಪರಿಚಿತರಾಗಿದ್ದಾರೆ. ಸಾಮಾನ್ಯ ಓದುಗರ ಮನ ಮುಟ್ಟುವಂತೆ ಆರೋಗ್ಯ ವಿಷಯ ನಿರೂಪಿಸುವಲ್ಲಿ ಅವರು ನಿಷ್ಣಾತರು. ಪ್ರಸ್ತುತ ಬೆಂಗಳೂರು ವೈದ್ಯಕೀಯ ಕಾಲೇಜಿನ ವಾಣಿವಿಲಾಸ ಆಸ್ಪತ್ರೆಯಲ್ಲಿ ಸ್ತ್ರೀರೋಗ ಹಾಗೂ ಪ್ರಸೂತಿ ತಜ್ಞರಾಗಿದ್ದಾರೆ. ಮೈಸೂರು ವಿಶ್ವವಿದ್ಯಾಲಯದಿಂದ ವೈದ್ಯಕೀಯ ಪದವಿಯನ್ನು ಬಂಗಾರದ ಪದಕದೊಂದಿಗೆ ಪಡೆದಿರುವ ಡಾ. ಸುನಂದಾ ಕುಲಕರ್ಣಿಯವರು ಸಹಾಯಕ ಪ್ರಾಧ್ಯಾಪಕರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

ಬಿಸಿಲ ಬದುಕು ಮಾಸ ಪತ್ರಿಕೆಯಲ್ಲಿ ಪ್ರಕಟಗೊಂಡ ಡಾ. ಸುನಂದಾ ಕುಲಕರ್ಣಿ ಅವರ ವೈದ್ಯಕೀಯ ಲೇಖನಗಳು ಮಹಿಳಾ ಓದುಗರ ಅಪಾರ ಮೆಚ್ಚುಗೆ ಗಳಿಸುವಲ್ಲಿ ಸಫಲವಾಗಿವೆ. ಮಹಿಳೆ ಇರುವ ಪ್ರತಿಯೊಂದು ಮನೆಯನ್ನು ತಲುಪಲೇಬೇಕಾದ ಪ್ರಸ್ತುತ 'ಗರ್ಭಿಣಿಯರ ಕೈಪಿಡಿ' ಪುಸ್ತಕದಲ್ಲಿ ಗರ್ಭಿಣಿಯರಿಗೆ ಸಂಬಂಧಿಸಿದ ಸಂಪೂರ್ಣ ಮಾಹಿತಿ ಹಾಗೂ ಮಾರ್ಗದರ್ಶನ ಇದೆ.

---

## ಮೋಜಿನ ಗಣಿತ

ಲೇ: **ಪಿ. ಎನ್. ವೆಂಕಟಾಚಲ ಶೆಟ್ಟಿ**
ಪ್ರ: ಅಂಕುರ ಪ್ರಕಾಶನ
473, ಬಸವೇಶ್ವರ ನಗರ ಮುಖ್ಯರಸ್ತೆ,
ವಾಟರ್‌ಟ್ಯಾಂಕ್ ಬಸ್‌ಸ್ಟಾಪ್ ಬಳಿ,
ಬಸವೇಶ್ವರನಗರ, ಬೆಂಗಳೂರು - 79.
ಮುದ್ರಣ: 1998,
ಪುಟ: 56, ಬೆಲೆ: ರೂ. 25/-




ಗಣಿತವನ್ನು ಕಬ್ಬಿಣದ ಕಡಲೆ ಎಂದು ಭಾವಿಸಿ ಮಾರು ದೂರ ಸರಿಯುವವರೇ ಹೆಚ್ಚು. ಆದರೆ ಈ ಪುಸ್ತಕದಲ್ಲಿನ ಗಣಿತದ ಮೋಜು ಎಲ್ಲರನ್ನೂ ಮೋಡಿ ಮಾಡಬಲ್ಲದು. ಸರಳ ಸಂಭಾಷಣೆಯಲ್ಲಿ ಸಹಜವಾಗಿ ನಿರೂಪಿಸಿದ ಇಲ್ಲಿನ ಗಣಿತದ ಪ್ರಸಂಗಗಳು ಎಲ್ಲ ವಯೋಮಾನದವರಿಗೂ ಪ್ರಿಯವಾಗುತ್ತವೆ.

'ಮೋಜಿನ ಗಣಿತ'ವನ್ನು ಸಂಗ್ರಹಿಸಿದ ಪಿ. ಎನ್. ವೆಂಕಟಾಚಲಶೆಟ್ಟಿಯವರು ಮೂಲತಃ ಹಾಸನ ಜಿಲ್ಲೆಯ ಅರಕಲಗೂಡಿನವರು. ರಾಸಾಯನ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಗಳಿಸಿರುವ ಈ ಲೇಖಕರು ಮಡಿಕೇರಿಯ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ನಿವೃತ್ತರಾಗಿದ್ದಾರೆ. ಈಗ ಬೆಂಗಳೂರಿನಲ್ಲಿ ವಿಶ್ರಾಂತಿ ಜೀವನ ಕಳೆಯುತ್ತಿದ್ದಾರೆ.

---

## ಜಿನ ಪ್ರಭಾವನೆ

(ಜಿನ ಭಕ್ತಿ ಗೀತೆಗಳು)

ಲೇ: **ವಿ. ಟಿ. ಸ್ವಾಮಿ**
ಪ್ರ: ರತ್ನತ್ರಯ ಪ್ರಕಾಶನ
ಗಾಂಧಿಬಜಾರ್, ಶಿವಮೊಗ್ಗ
ಮುದ್ರಣ: 1998,
ಪುಟ: VIII+20,
ಬೆಲೆ: ರೂ. 10/-

ಇನ್ನೂ ಎಳಸು ಎನ್ನುವ ಮುಖ ಭಾವದ ಶ್ರೀಯುತ ವಿ. ಟಿ. ಸ್ವಾಮಿ ಅಂಬೆಗಾಲು ಇಡುತ್ತ ಕವಿಯಾಗಿ ಅರಳುತ್ತಿರುವ ಕುರುಹು "ಜಿನ ಭಕ್ತಿ ಗೀತೆಗಳ" ಈ ಪುಟ್ಟ ಗೊಂಚಲಿನಲ್ಲಿ ಮಿಂಚುತ್ತಿದ್ದಾರೆ. ಮುಗ್ಧವಾಗಿ ಮುಗುಳುನಗೆಯ ಮುಂಗಾರಿನ ಹೊಂಬಿಸಿಲಿನಲ್ಲಿ!



ವೃತ್ತಿಯಲ್ಲಿ ಅಧ್ಯಾಪಕ - ವ್ರತದಲ್ಲಿ ಧರ್ಮಬೀರು! ಭರತ ಖಂಡದ ಋಗ್ವೇದ ಪೂರ್ವದ ಮುನಿ ಧರ್ಮವೇ ಜೈನ ಧರ್ಮ. ಆತ್ಮಚಿಂತನೆಯ ತ್ಯಾಗಮೂಲದ ಪರಂಪರೆಯೇ ಇಲ್ಲಿ ಎದ್ದುಕಾಣುವ ವೈಭವ! ಋಷಿ ಮೂಲದ ಭೋಗಕ್ಕೆ ಬೆನ್ನು ಮಾಡಿ ಶಾಖಾಹಾರ, ಮೊದಲ ದೇವಾಲಯ - ಪೂಜಾಕ್ರಮ ಬಳಕೆಗೆ ತಂದ ಹಿರಿಮೆ ಜಿನ ಧರ್ಮದ್ದು!

**■ ಮೇಘರಾಜ**

## ಜನಪದ ಸಿರಿಗಂಧ

(ತ್ರಿಪದಿ ಸಂಗ್ರಹ)

ಲೇ: **ಶಿವಾನಂದ ಶೆಲ್ಲಿಕೇರಿ**
ಪ್ರ: ಗೌರಿ ಪ್ರಕಾಶನ,
ಯಂಡಿಗೇರಿ, ತಾ. ಬದಾಮಿ
ಜಿ. ವಿಜಾಪುರ
ಮುದ್ರಣ: 1997,
ಪುಟ: X+50, ಬೆಲೆ: ರೂ. 20/-




ಇದರಲ್ಲಿ ಸುಮಾರು ತ್ರಿಪದಿಗಳು ಸಂಗ್ರಹವಾಗಿವೆ. ಇವೆಲ್ಲ ಬೀಸುವ ಕಲ್ಲಿನ ಹಾಡುಗಳೆಂದು ಪ್ರಸಿದ್ದವಾಗಿವೆ. ಇವುಗಳನ್ನು ದೈವಭಕ್ತಿ, ಪತಿಭಕ್ತಿ, ನೀತಿ ಮುಕ್ತಕಗಳು, ಹೆತ್ತವರ ಗುಣಗಾನ, ತವರಿನ ಸಿರಿ ಸೊಬಗು, ಗೆಳತಿಯ ಪ್ರೀತಿ, ಅಣ್ಣ ತಮ್ಮರ ಪ್ರಶಂಸೆ, ಕಂದನ ನೋಡಿ, ಇತರೆ, ಸಂವಾದ ರೂಪೆ ಎಂಬ ವಸ್ತುವಿನ ಹಿನ್ನೆಲೆಯಲ್ಲಿ ವಿಭಜಿಸಿರುವುದು ಉಚಿತವಾಗಿದೆ. ಇವುಗಳನ್ನು ವಿಜಾಪೂರ ಜಿಲ್ಲೆಯ ಬದಾಮಿ ಹಾಗೂ ಗಲಗಲಿ ಕೆಲವು ಹಳ್ಳಿಗಳಲ್ಲಿ ಸಂಗ್ರಹಿಸಲಾಗಿದೆ. ಇದುವರೆಗೆ ಗರತಿಯರ ಹಾಡುಗಳಿಗೆ ಸಂಬಂಧಿಸಿದಂತೆ ಅನೇಕ ಸಂಗ್ರಹಗಳು ಬಂದಿವೆ. ಅವುಗಳಲ್ಲಿ ''ಹಲಸಂಗಿ ಗೆಳೆಯರ'' ''ಗರತಿಯರ ಹಾಡುಗಳು'' ಎಂಬ ತ್ರಿಪದಿ ಸಂಗ್ರಹ ಅಪೂರ್ವವೆನಿಸಿ ಮುಂದೆ ಬಂದ ಸಂಗ್ರಹಗಳಿಗೆಲ್ಲ ಮಾದರಿಯಾಗಿದೆ. ಆ ಜಾಡಿನಲ್ಲಿ ಮುಂದುವರಿದು ಇದುವರೆಗೆ ಪ್ರಕಟವಾಗದ ಹೊಸ ಹಾಡುಗಳನ್ನು ಒಳಗೊಂಡು, ವೈವಿಧ್ಯಮಯ ವಸ್ತು, ಭಾಷೆ, ಭಾವಶ್ರೀಮಂತಿಕೆಯನ್ನು ತುಂಬಿಕೊಂಡು ನಿಂತ ಈ ಸಂಗ್ರಹ ಜಾನಪದ ಕ್ಷೇತ್ರಕ್ಕೆ ಒಂದು ಹೊಸ ಸೇರ್ಪಡೆ ಎನಿಸಿದೆ.

**■ ಡಾ. ವೀರಣ್ಣ ರಾಜೂರ**

## ಗ್ರಂಥ ಹಾಗೂ ಗ್ರಂಥಾಲಯ

(ಸೂಕ್ತಿ ಸಂಗ್ರಹ)

ಲೇ : **ಟಿ. ವಿ. ವೆಂಕಟರಮಣಯ್ಯ**
ಪ್ರ: ಇಡಬ್ಲ್ಯುಎಸ್ 218,
ಕೆ. ಹೆಚ್. ಬಿ. ಕಾಲೋನಿ, 2ನೇ ಹಂತ
5ನೇ ಕ್ರಾಸ್, ಬಸವೇಶ್ವರನಗರ
ಬೆಂಗಳೂರು - 560 079.
ಮುದ್ರಣ: 1998,
ಪುಟ: VI+58, ಬೆಲೆ: ರೂ. 20/-




ಯಾವುದೇ ಒಂದು ಗ್ರಂಥ ಜನತೆಯ ಮೇಲೆ ಎಲ್ಲಾ ಕಾಲಕ್ಕೂ ಒಂದೇ ರೀತಿಯ ಪ್ರಭಾವವನ್ನು ಬೀರುತ್ತದೆಯೆಂದು ಹೇಳಲಾಗದು, ಕಾಲಧರ್ಮಕ್ಕನುಸಾರ ಜನತೆಯ ಅಭಿರುಚಿಯ ಸ್ವರೂಪವೂ ಬದಲಾಗುತ್ತಿರುತ್ತದೆ. ಆದರೆ ಒಂದೊಂದು ಯುಗದಲ್ಲಿ ಅಥವಾ ಅನೇಕ ಶತಮಾನಗಳ ಕಾಲ ಕೆಲವು ಗ್ರಂಥಗಳು ಜನತೆಯ ಹಾಗೂ ಸಮಾಜದ ಮೇಲೆ ಬೀರಿದ ಪ್ರಭಾವವನ್ನೂ ಮರೆಯಲಾಗದು.

ವ್ಯಕ್ತಿತ್ವದ ಬೆಳವಣಿಗೆಗೆ ಚಿಂತನ ಹಾಗೂ ವ್ಯಾಸಂಗ ಅತ್ಯವಶ್ಯ. ವ್ಯಾಸಂಗದಿಂದ ವ್ಯಕ್ತಿಯ ಜ್ಞಾನದ ಕ್ಷಿತಿಜ ವಿಸ್ತಾರವಾಗುತ್ತದೆ; ಹೊಸ ಆಲೋಚನೆಗಳು ಉತ್ಪತ್ತಿಯಾಗುತ್ತವೆ; ಅನುಭವ ಸಮೃದ್ಧವಾಗುತ್ತದೆ. ಕೆಲವೊಮ್ಮೆ ಮನರಂಜನೆಯೂ ಲಭ್ಯವಾಗುತ್ತದೆ. ಓದಿನ ಮೂಲಕ ಗತಕಾಲದ ಗರ್ಭವನ್ನು ಹೊಕ್ಕಿ ನೋಡಬಹುದು; ಭವಿಷ್ಯತ್ತನ್ನು ರೂಪಿಸಿಕೊಳ್ಳಲು ವಾಚನ ನೆರವಾಗುತ್ತದೆ.

## ಏಡ್ಸ್

(ಕವನ ಸಂಕಲನ)

ಲೇ: **ಬಿ. ಎಸ್. ಬಿರಾದಾರ**
ಪ್ರ: ವಿಶ್ವಭಾರತಿ ಪ್ರಕಾಶನ
ಕರುಣೇಶ್ವರನಗರ,
ಗುಲಬರ್ಗಾ - 585 102.
ಮುದ್ರಣ: 1998,
ಪುಟ : XX+20,
ಬೆಲೆ: ರೂ. 10/-




ಗುಲಬರ್ಗಾದಲ್ಲಿ ವೈಜ್ಞಾನಿಕ ವಿಷಯಗಳ ಮೇಲೆ ಕವಿಗೋಷ್ಠಿ ನಡೆಯುವದೆಂದರೆ ಸಣ್ಣ ಮಾತೇನಲ್ಲ. ಕವಿಗೋಷ್ಠಿಯಲ್ಲಿ ಹೆಚ್ಚಿನ ಕವಿತೆಗಳು ಏಡ್ಸ್ ರೋಗದ ಮೇಲೆ ಎನ್ನುವುದು ಇನ್ನೂ ಮಹತ್ವದ್ದು. ಅಂಥ ಕವಿತೆಗಳ ಸಂಕಲನ ಹೊರಬರುವುದೆಂದರೆ ಅದೊಂದು ಮೈಲುಗಲ್ಲು.

ಗುಲಬರ್ಗಾದ ಸುಪ್ರಸಿದ್ಧ ಶಿಕ್ಷಕರೂ ಕ.ರಾ.ವಿ.ಪ.ದ ಕಾರ್ಯಕಾರಿ ಸದಸ್ಯರೂ ಆದ ಬಿ. ಎಸ್. ಬಿರಾದಾರ ಅವರು ಹಲವಾರು ಸಾಧನೆಗಳನ್ನು ಮಾಡಿದ್ದಾರೆ. ಈ ಪುಸ್ತಕ ಅವರ ಹೊತ್ತಿಗೆಯಲ್ಲಿ ಇನ್ನೊಂದು ಗರಿ. ವೈದ್ಯರನ್ನೆಲ್ಲ ಕೂಡಿಸಿ ಇಂಥ ಒಂದು ಸಾಹಸ ಮಾಡಿದ್ದಕ್ಕೆ ನಾನು ಅವರನ್ನೂ, ವೈದ್ಯರನ್ನೂ ಮನಸಾ ಅಭಿನಂದಿಸುವೆ.

ಇಂಥ ಪುಸ್ತಕಗಳು ಹೊರ ಬಂದರೆ ಜನಸಾಮಾನ್ಯರಲ್ಲಿ ರೋಗಗಳ ಬಗ್ಗೆ ವೈಜ್ಞಾನಿಕ ಸಂಗತಿಗಳು ತಿಳಿದು ರೋಗ ನಿಯಂತ್ರಣ ಮಾಡುವಲ್ಲಿ ಅವರೂ ತಮ್ಮ ಕಾಣಿಕೆಯನ್ನು ಸಲ್ಲಿಸಲು ಅನುಕೂಲವಾಗುತ್ತದೆ.

**■ ಡಾ. ಎಸ್. ಜಿ. ನಾಗಲೋಟಿಮಠ**

ಒಂದು ವೇಳೆ ನಿಮ್ಮಂತೆ ಇರುವ ಯಂತ್ರ ಮಾನವನನ್ನು ಮಾಡಿ ಅದರಲ್ಲಿ ಕಂಪ್ಯೂಟರ್ ಇಟ್ಟು 'ಪ್ರೊಗ್ರಾಂ' ಮಾಡಿದರೆ...

ನಿಮ್ಮದೇ ಧ್ವನಿಯಲ್ಲಿ ಅದು ಮಾತನಾಡಬಲ್ಲದು. ನಿಮ್ಮನ್ನು ಅಣಕಿಸುವಂತೆ ನಿಮ್ಮನ್ನು ಅನುಕರಿಸಬಲ್ಲದು. ನೀವು ನಡೆದಾಡುವ ರೀತಿಯಲ್ಲೇ ನಡೆದಾಡಬಲ್ಲದು.

ಈ ಕಂಪ್ಯೂಟರ್ ಇದೆಯಲ್ಲ ...... ಇದು ಥೇಟ್ ನಿಮ್ಮದೇ ಪ್ರತಿರೂಪ! ಆದರೆ.....

ನೋಡಲು ಇದು ನಿಮ್ಮ ಹಾಗಿಲ್ಲ; ನಿಮ್ಮ ಹಾಗೆ ನಡೆದಾಡಲು ಬರುವುದಿಲ್ಲ. ನಿಮಗಿರುವಂತೆ ಸ್ವಂತ ವಿಚಾರಶಕ್ತಿಯಿಲ್ಲ; ಹಾಗೂ ನಿಮ್ಮಂತೆ ಸ್ವತಂತ್ರವಾಗಿ ಏನನ್ನಾದರೂ ಕಲಿತುಕೊಳ್ಳಲು ಕಂಪ್ಯೂಟರಿಗೆ ಬರುವುದಿಲ್ಲ.

ಇವನ್ನು ಬಿಟ್ಟರೆ, ಕಂಪ್ಯೂಟರ್ ನಿಮಗಿಂತ ನೂರುಪಾಲು ಚುರುಕು. ನಿಮಗಿಂತ ಬುದ್ಧಿವಂತ ಹಾಗೂ ನಿಮಗಿಂತ ನಿಖರ. ನಿಮ್ಮಿಂದ ಸಾಧ್ಯವೇ ಇಲ್ಲದ್ದನ್ನೂ ಕಂಪ್ಯೂಟರು ಮಾಡಬಲ್ಲದು.

ಆದರೆ ಎದುರು ಮನೆಯ ಕಿಟಕಿಯಲ್ಲಿ ಹುಡುಗಿ 'ಚಾಂದ್‌ಕಾ ತುಕಡಾ' ದಂತೆ ಮುದ್ದಾಗಿ ಕಂಡರೆ ಕಂಪ್ಯೂಟರಿಗೆ ಏನೂ ಅನ್ನಿಸುವುದಿಲ್ಲ! ಯಾಕೆಂದರೆ ಕಂಪ್ಯೂಟರಿಗೆ ಸ್ವತಂತ್ರ ಬುದ್ಧಿಯಿಲ್ಲ.

ಈ ಬಗ್ಗೆ ವಿಜ್ಞಾನಿಗಳು ಪ್ರಯೋಗ ನಡೆಸಿದ್ದಾರೆ. ಅದಕ್ಕಾಗಿ 'ಆರ್ಟಿಫಿಶಿಯಲ್ ಇಂಟಲಿಜೆನ್ಸ್' ಎಂಬ ಪ್ರತ್ಯೇಕ ಸಂಶೋಧನಾ ಕ್ಷೇತ್ರವೇ ಹುಟ್ಟಿಕೊಂಡಿದೆ.

ಅಮೆರಿಕದ ವಿಜ್ಞಾನಿಗಳು ಪ್ರಾಯೋಗಿಕವಾಗಿ ಒಂದು ನಡೆದಾಡುವ ಯಾಂತ್ರಿಕ ಕೀಟವನ್ನು ರೂಪಿಸಿದ್ದಾರೆ. ಇದರಲ್ಲಿ ಕಂಪ್ಯೂಟರ್ ಅಳವಡಿಸಿದ್ದಾರೆ. ಈ ಕಂಪ್ಯೂಟರು ಕೀಟಕ್ಕೆ ನಡೆದಾಡುವ ಬಗ್ಗೆ ಸ್ವತಂತ್ರ ನಿರ್ಧಾರ ಕೈಗೊಳ್ಳಲು ನೆರವಾಗುತ್ತದೆ.

ಎದುರುಗಡೆ ಗೋಡೆ ಬಂದರೆ ಬಲಕ್ಕೆ ಹೊರಳುತ್ತದೆ. ಅಲ್ಲಿಯೂ ರಸ್ತೆಯಿಲ್ಲ, ಅಡೆತಡೆ ಇದೆ ಎಂದಾದರೆ ಎಡಕ್ಕೆ ಹೊರಳುತ್ತದೆ. ಎದುರುಗಡೆ ಏನಿದೆ ಎಂಬುದನ್ನು ಅಲ್ಟ್ರಾ ಸೋನಿಕ್ ಕಂಪನಗಳ ಸಹಾಯದಿಂದ ಆ ಕಂಪ್ಯೂಟರ್ ಅರಿತುಕೊಳ್ಳುತ್ತದೆ.

ಒಂದು ಬಾರಿ ಮನೆಯಲ್ಲೆಲ್ಲಾ ಆ ಕೀಟವನ್ನು ಓಡಾಡಿಸಿ ಬಿಟ್ಟರೆ, ಇಡೀ ಮನೆಯ ಪರಿಚಯವನ್ನು ಕಂಪ್ಯೂಟರು ತನ್ನ ನೆನಪಿನಲ್ಲಿ ಇಟ್ಟುಕೊಳ್ಳುತ್ತದೆ.

ಆ ನಂತರ ಟಿ.ವಿ. ಬಳಿ ಹೋಗು ಎಂದರೆ ಸಾಕು, ಆ ಯಾಂತ್ರಿಕ ಕೀಟ ದಾರಿ ಹುಡುಕಿಕೊಂಡು ಟಿವಿ ಬಳಿ ಹೋಗುತ್ತದೆ. ಕಾಫಿ ತಗೊಂಡು ಬಾ ಎಂದರೆ ಸಾಕು ಅಡಿಗೆ ಮನೆಗೆ ಹೋಗಿ, ಅಲ್ಲಿ ಹಾಲು ಡಿಕಾಕ್ಷನ್ ಬೆರೆಸಿ, ಕಾಫಿ ಮಾಡಿಕೊಂಡು ತಂದು ಯಜಮಾನನಿಗೆ ಕೊಡುತ್ತದೆ.

ಯಾರು ತನಗೆ ಆದೇಶ ನೀಡಿದ್ದು ಎಂಬುದನ್ನು ಅದು ಧ್ವನಿಯ ಮೇಲೆ ಗುರುತಿಸುತ್ತದೆ. ಆತ ಎಲ್ಲಿದ್ದಾನೆ ಎಂಬುದನ್ನು ಅದು ಅಲ್ಟ್ರಾಸೋನಿಕ್ ಕಂಪನದಿಂದ ಕರಾರುವಾಕ್ಕಾಗಿ ಅರಿತುಕೊಳ್ಳುತ್ತದೆ. ಇಷ್ಟರ ಮಟ್ಟಿಗೆ ಸ್ವತಂತ್ರ ನಿರ್ಧಾರ ಕೈಗೊಳ್ಳುತ್ತದೆ.

ಇದೆಲ್ಲ ಕಲ್ಪನೆಯ ಕಥೆಯಲ್ಲ. ಪ್ರಯೋಗಶಾಲೆಯಲ್ಲಿ ನಡೆಯುತ್ತಿರುವ ಸತ್ಯ.

ಇದರಲ್ಲಿ ಏನೂ ಮಾಯೆಯಿಲ್ಲ. ಕಂಪ್ಯೂಟರಿನ ಮೂಲಭೂತ ತಂತ್ರಜ್ಞಾನವನ್ನೇ ರೋಬೊಟ್‌ಗೆ ಅಳವಡಿಸಲಾಗಿದೆ ಅಷ್ಟೇ.

ಹಾಗಾದರೆ ಕಂಪ್ಯೂಟರಿನ ಮೂಲಭೂತ ತಂತ್ರಜ್ಞಾನವೇನು? ವೆರಿ ಸಿಂಪಲ್

ಕಂಪ್ಯೂಟರಿನಲ್ಲಿ ಒಂದಷ್ಟು ಮೂಲಭೂತ ಮಾಹಿತಿಯನ್ನು ತುಂಬಲಾಗಿರುತ್ತದೆ. ಇದೇ ಸಾಫ್ಟ್‌ವೇರ್.

ಆಮೇಲೆ ಒಂದು ಪ್ರಶ್ನೆ ಕೇಳುತ್ತೇವೆ. ಇದು ಇನ್‌ಪುಟ್.

ಕಂಪ್ಯೂಟರ್ ಈ ಇನ್‌ಪುಟ್ ಪ್ರಶ್ನೆಯನ್ನು ತನ್ನೊಡಲಲ್ಲಿರುವ ಮಾಹಿತಿಯೊಂದಿಗೆ ಹೋಲಿಸಿ ನೋಡುತ್ತದೆ. ಇದು ಪ್ರಾಸೆಸಿಂಗ್.

ಆಮೇಲ ತನಗೆ ತಿಳಿದ ರೀತಿಯಲ್ಲಿ ಪ್ರತಿಕ್ರಿಯಿಸುತ್ತದೆ. ಇದು ಔಟ್‌ಪುಟ್.

ಇಷ್ಟೇ ಕಂಪ್ಯೂಟರಿನ ಕೆಲಸ! ಇದೇ ಕಂಪ್ಯೂಟರಿನ ಮೂಲಭೂತ ತಂತ್ರಜ್ಞಾನ.

ನೀವು ಕೂಡ ಹಾಗೇ ತಾನೆ. ನಿಮಗೆ ಒಂದಷ್ಟು ಜ್ಞಾನವಿರುತ್ತದೆ. ಚಿಕ್ಕಂದಿನಿಂದ ಕಲಿತದ್ದು, ಅಲ್ಲಿ ಇಲ್ಲಿ ನೋಡಿದ್ದು, ಓದಿದ್ದು, ಇತ್ಯಾದಿಯೆಲ್ಲ ಸೇರಿ ನಿಮ್ಮ ಮೆದುಳಿನಲ್ಲಿ ಒಂದಷ್ಟು ಮಾಹಿತಿ ಸಂಗ್ರಹವಾಗಿರುತ್ತದೆ. ಇದು ನಿಮ್ಮ ಮೆದುಳಿನಲ್ಲಿರುವ ಸಾಫ್ಟ್‌ವೇರ್.

ನಿಮಗೆ ಒಂದು ಪ್ರಶ್ನೆ (ಇನ್‌ಪುಟ್) ಎದುರಾದಾಗ ನಿಮ್ಮ ಮೆದುಳು ಯೋಚಿಸುತ್ತದೆ. ಕ್ಷಣಾರ್ಧದಲ್ಲಿ ತನಗೆ ಗೊತ್ತಿರುವ ಜ್ಞಾನವನ್ನೆಲ್ಲ ಜಾಲಾಡಿ ಉತ್ತರ ಹುಡುಕುತ್ತದೆ. ಇದು ಪ್ರಾಸೆಸಿಂಗ್.

ನಂತರ ನಿಮ್ಮ ದೇಹ ಅಥವಾ ಬಾಯಿ, ಅಥವಾ ನೀವು ಇನ್ನಾವುದೋ ರೀತಿಯಲ್ಲಿ ಆ ಪ್ರಶ್ನೆಗೆ ಪ್ರತಿಕ್ರಿಯಿಸುತ್ತೀರಿ. ಇದು ಔಟ್‌ಪುಟ್ .

ಹೇಳಿ, ಕಂಪ್ಯೂಟರ್ ಕೆಲಸ ಮಾಡುವುದೂ ಸಹ ನಿಮ್ಮ ರೀತಿಯೇ ಅಲ್ಲವೇ?

ಕೆಲವರ ಮೆದುಳಿನಲ್ಲಿ ಗಣಿತದ ಸಾಫ್ಟ್‌ವೇರ್ ಇರುತ್ತದೆ. ಅವರು ಚುರುಕಾಗಿ ಗಣಿತ ಮಾಡಬಲ್ಲರು. ಕೆಲವರ ಮೆದುಳಿನಲ್ಲಿ ಚಿತ್ರಕಲೆಯ ಸಾಫ್ಟ್‌ವೇರ್ ಇರುತ್ತದೆ. ಅವರು ಚೆನ್ನಾಗಿ ಚಿತ್ರಬಿಡಿಸಬಲ್ಲರು. ಕೆಲವರ ಮೆದುಳಿನಲ್ಲಿ



ಕಂಪ್ಯೂಟರ್ ಕಲಿಯಿರಿ

# ನಿಮ್ಮ ಪ್ರತಿರೂಪ ಈ ಕಂಪ್ಯೂಟರ್!

**ಕಂಪ್ಯೂಟರ್ ಕೊಳ್ಳದವರು ಬೇಕಾದಷ್ಟು ಜನ ಸಿಗಬಹುದು. ಆದರೆ ಕಂಪ್ಯೂಟರ್ ಬಗ್ಗೆ ಕುತೂಹಲ ಇಟ್ಟುಕೊಳ್ಳದವರು ಸಿಗಲಾರರು. ಸಾಮಾನ್ಯ ಜನರಿಗೆ ಕಂಪ್ಯೂಟರ್ ಬಗ್ಗೆ ತಿಳಿಹೇಳಲೆಂದೇ ಈ ಅಂಕಣ ಪ್ರಾರಂಭಿಸುತ್ತಿದ್ದೇವೆ. ಇಲ್ಲಿನ ಭಿನ್ನ ಶೈಲಿಯ ಸರಳ ನಿರೂಪಣೆ ನಿಮಗೆ ಹಿಡಿಸುತ್ತದೆ ಎಂಬ ನಂಬಿಕೆ ನಮ್ಮದು.**

## ಸತ್ತವನು ಬದುಕಿ ಬಂದಾಗ?

ನಿಮ್ಮ ಮೆದುಳಿದೆಯಲ್ಲಾ... ಇದೂ ಸಹ ಒಂದು ಕಂಪ್ಯೂಟರ್. ಸೂಪರ್ ಕಂಪ್ಯೂಟರ್.

ಕಂಪ್ಯೂಟರ್ ಕೆಲಸ ಮಾಡುವ ರೀತಿ ಹಾಗೂ ನಿಮ್ಮ ಮೆದುಳು ಕೆಲಸ ಮಾಡುವ ರೀತಿ ಎರಡೂ ಒಂದೇ.

ಮೆದುಳು ಕೆಲಸ ಮಾಡಲು ಏನೆಲ್ಲಾ ಮಾಹಿತಿಗಳು ಬೇಕೊ ಅವೆಲ್ಲಾ ಕಂಪ್ಯೂಟರಿಗೂ ಬೇಕು.

ಕಂಪ್ಯೂಟರಿಗೆ ಕನಸು ಕಾಣಲು ಬರುವುದಿಲ್ಲ. ನಿಮ್ಮ ಮೆದುಳಿಗೆ ಬರುತ್ತದೆ. ಅಷ್ಟೇ ವ್ಯತ್ಯಾಸ.

ಕಂಪ್ಯೂಟರಿಗಿರುವ ಈ ಕೊರತೆಯನ್ನು ನಿವಾರಿಸುವುದೇ ವಿಜ್ಞಾನಿಗಳ ಅಂತಿಮ ಗುರಿ, ಅವರ ಸಂಶೋಧನೆಗಳ ಪರಮೋದ್ದೇಶ.

ಅವರು ಇದರಲ್ಲಿ ಸಫಲರಾದರೆ, ಕೃತಕ ಮೆದುಳು ಸಿದ್ಧವಾದಂತೇ. ಆಗ ಕೃತಕ ಹೃದಯದ ಹಾಗೆ ಕೃತಕ ಮಿದುಳನ್ನು ಜೋಡಿಸಬಹುದು.

ಅದರರ್ಥ ಸ್ವಾಭಾವಿಕವಾಗಿ ಸತ್ತಿರುವ ಮನುಷ್ಯನನ್ನು ಬದುಕಿಸಬಹುದು!

ಇದೆಲ್ಲಾ ಸಾಧ್ಯವೇ?

ಖಂಡಿತ... ಸಾಧ್ಯ. ಈ ವಿಷಯದಲ್ಲಿ ವಿಜ್ಞಾನಿಗಳು ಪ್ರತಿ ವರ್ಷವೂ ಸ್ವಲ್ಪ ಸ್ವಲ್ಪವೇ ಸಫಲರಾಗುತ್ತಿದ್ದಾರೆ.

ಯಾವಾಗ ಯಶಸ್ವಿಯಾಗುತ್ತಾರೆ?

ಬಹುಶಃ 21ನೇ ಶತಮಾನದ ಅಂತ್ಯದ ಒಳಗೆ!

## ಕಂಪ್ಯೂಟರ್ ಜೀವಿ!

ಮನುಷ್ಯ ದೇವರಾಗಲು ಹೊರಟಿದ್ದಾನೆ. ಈತ ಬ್ರಹ್ಮನ ಹಾಗೆ ಜೀವಿಗಳನ್ನು ಸೃಷ್ಟಿಸಬಲ್ಲ. ಆಶ್ಚರ್ಯವೇಕೆ? ಈಗಾಗಲೇ ಅಂಥ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾನೆ.

ಕಂಪ್ಯೂಟರ್ ವೈರಸ್ - ಅಂಥ ಒಂದು ಸೃಷ್ಟಿ.

ಒಮ್ಮೆ ಹುಟ್ಟಿದ ಮೇಲೆ ತನ್ನ ಆಯುಷ್ಯ ತೀರುವವರೆಗೂ ಅಥವಾ ಇನ್ಯಾರಾದರೂ ಕೊಲೆ ಮಾಡುವವರೆಗೂ ಇದು ನಿಸರ್ಗದ ವೈರಸ್‌ನ ಹಾಗೆ ಸ್ವತಂತ್ರವಾಗಿ ಬದುಕಬಲ್ಲದು. ಆದರೆ ಕಂಪ್ಯೂಟರ್‌ನೊಳಗೆ ಮಾತ್ರ!

ಈ ಅದ್ಭುತ ಜೀವಿಯ ಬಗ್ಗೆ ಮುಂದಿನ ಕಂತಿನಲ್ಲಿ ವಿವರವಾಗಿ ನೋಡೋಣ.

ಅಕೌಂಟಿಂಗ್ ಸಾಫ್ಟ್‌ವೇರ್ ಇರುತ್ತದೆ. ಅವರು ಚುರುಕಾಗಿ ಲೆಕ್ಕಪತ್ರ ನಿರ್ವಹಿಸುತ್ತಾರೆ.

ಹಾಗೆಯೇ ಕಂಪ್ಯೂಟರಿಗೆ ನೀವು ಯಾವ ಸಾಫ್ಟ್‌ವೇರ್ ತುಂಬುತ್ತೀರೋ, ಆ ಕೆಲಸವನ್ನು ಚುರುಕಾಗಿ ಮಾಡಬಲ್ಲದು.

### ಚಿಕ್ಕ ಮಗುವಿನ ಪಾಠ

ಪುಟ್ಟ ಮಗುವಿಗೆ ಊಟ ಮಾಡಲು ಹೇಗೆ ಕಲಿಸುತ್ತೀರಿ?

ಅಮ್ಮ ಪ್ಲೇಟಿಗೆ ಅನ್ನ ಸಾರು ಹಾಕಿ ಕೈಗೆ ಕೊಡುತ್ತಾಳೆ.

ಆಗ ಅನ್ನವನ್ನು ಸಾರನ್ನು ಬಲಗೈನ ಬೆರಳಿನಿಂದ ಕಲೆಸಬೇಕು.

ನಂತರ ಒಂದೊಂದು ತುತ್ತಾಗಿ ಮಾಡಿ ಅನ್ನ-ಸಾರಿನ ಮಿಶ್ರಣವನ್ನು ಬಾಯಿಯೊಳಗೆ ಇಡಬೇಕು.

ಅದನ್ನು ಹಲ್ಲುಗಳ ಸಹಾಯದಿಂದ ಅಗಿಯಬೇಕು.

ಅದನ್ನು ನುಂಗಬೇಕು.

ಮತ್ತೆ ಒಂದು ತುತ್ತನ್ನು ಎತ್ತಿ ಬಾಯಿಗೆ ಹಾಕಬೇಕು. ಮತ್ತೆ ಮೇಲೆ ಹೇಳಿದ ರೀತಿ ಪುನರಾವರ್ತನೆ ಮಾಡಬೇಕು.

ಪ್ಲೇಟಿನಲ್ಲಿ ಎಲ್ಲಾ ಖಾಲಿಯಾದ ಮೇಲೆ ಕೈಯಿ ಬಾಯಿ ತೊಳೆದುಕೊಳ್ಳಬೇಕು.

ಇದೇ ರೀತಿ ಕಂಪ್ಯೂಟರಿಗೂ ಹಂತ ಹಂತವಾಗಿ ಮಾಹಿತಿ ನೀಡಬೇಕು. ಈ ಮಾಹಿತಿ ನೀಡುವ ಕೆಲಸವನ್ನೇ ಪ್ರೋಗ್ರಾಮಿಂಗ್ ಎನ್ನುತ್ತಾರೆ.

ಸಾಫ್ಟ್‌ವೇರ್ ಪ್ರೋಗ್ರಾಮರ್ ಎಂದರೆ ಈ ಮಾಹಿತಿ ನೀಡುವವ.

ಒಂದೊಂದು ಹಂತವನ್ನೂ ಒಂದೊಂದು ಸಿಂಟಾಕ್ಸ್ ಎನ್ನುತ್ತಾರೆ.

ಈ ಮಾಹಿತಿ ನೀಡುವ ಕೆಲಸ ಎಷ್ಟು ಅಚ್ಚುಕಟ್ಟಾಗಿರಬೇಕು ಎಂದರೆ ಪುಟ್ಟ ಪುಟ್ಟ ಹಂತವನ್ನೂ ನಿಖರವಾಗಿ ಕಂಪ್ಯೂಟರಿಗೆ ತಿಳಿಸಬೇಕು. ಒಂದಾದ ನಂತರ ಒಂದರಂತೆ ಎಲ್ಲ ಹಂತವನ್ನೂ ತಿಳಿಸಬೇಕು. ಈ ಮಾಹಿತಿ ನೀಡುವ ಕೆಲಸ ಸರಿಯಾಗಿಲ್ಲ ಎಂದಾದರೆ ಕಂಪ್ಯೂಟರಿಗೆ ಕೆಲಸ ಮಾಡಲು ಬರುವುದಿಲ್ಲ.

ಈ ಪ್ರೋಗ್ರಾಮಿಂಗ್ ನೋಡಲು ಸುಲಭ ಎನಿಸಿದರೂ, ಒಂದು ಸಾಧಾರಣ ಕಂಪ್ಯೂಟರಿನಲ್ಲಿ ಕನಿಷ್ಟ ಎಂದರೂ 1 ಕೋಟಿ ವಿವಿಧ ಹಂತಗಳ 'ಸಿಂಟಾಕ್ಸ್' ಇರುತ್ತವೆ.

ಹಾಗಾದರೆ ಹೇಳಿ ನಿಮ್ಮ ಮೆದುಳಿನಲ್ಲಿ ಎಷ್ಟು ಸಾವಿರ ಕೋಟಿ ಸಿಂಟಾಕ್ಸ್ ಇರುವ ಸಾಫ್ಟ್‌ವೇರ್ ಇದೆ?

■ ಮುರಳೀಧರ




ಕನ್ನಡಕ್ಕಾಗಿ ಕೈ ಎತ್ತು ... ನಿನ್ನ ಕೈ (ಕಲ್ಪವೃಕ್ಷ) ಕಲ್ಲಾಗುತ್ತದೆ!?

# ಹೀರೆಕಾಯಿ ಸಿಪ್ಪೆಯ ಗೊಜ್ಜು

ಕೆಲವರು ಹೀರೆಕಾಯಿ ಪಲ್ಯ ಮಾಡಿದ ಬಳಿಕ ಅದರ ಮೇಲಿನ ಸಿಪ್ಪೆಯನ್ನು ಎಸೆಯುತ್ತಾರೆ. ಎಸೆಯುವ ಬದಲು ಗೊಜ್ಜು ಮಾಡಿ ತಿಂದರೆ.... ಹಾಂ! ಈಗಲೇ ಅಲ್ಲ. ಬೇಕಾಗುವ ಸಾಮಗ್ರಿ, ವಿಧಾನ ತಿಳಿದುಕೊಂಡ ಬಳಿಕ. ಗೊಜ್ಜು ತಯಾರಿಸಿ ರುಚಿ ನೋಡಿ ಗೊತ್ತಾಗುತ್ತೆ.

**ಬೇಕಾಗುವ ಸಾಮಗ್ರಿಗಳು:**



ನಿಮಗೆ ಬೇಕಾಗುವಷ್ಟು ಹೀರೆಕಾಯಿ ಸಿಪ್ಪೆ, ಟೊಮೊಟೊ 2, ಈರುಳ್ಳಿ 2, 1 ಟೀ ಚಮಚ ಮೆಣಸಿನ ಪುಡಿ, ರುಚಿಗೆ ತಕ್ಕಷ್ಟು ಉಪ್ಪು, ಚಿಟಿಕೆ ಕಾಟವಾ ಮಸಾಲೆ.

**ಮಾಡುವ ವಿಧಾನ :**

ಹೀರೆಕಾಯಿ ಸಿಪ್ಪೆಯನ್ನು ಚೆನ್ನಾಗಿ ತೊಳೆದುಕೊಂಡು ಬಾಣಲೆಯಲ್ಲಿ ಬೇಯಿಸಬೇಕು. ಸಿಪ್ಪೆ ಸ್ವಲ್ಪ ಬೇಯಿಸಿದ ನಂತರ ರೀಫೈನ್ಡ್ ಆಯಿಲ್ ಹಾಕಿ ಚೆನ್ನಾಗಿ ಕಂದು ಬಣ್ಣ ಬರುವವರೆಗೂ ಕರೆದು ಆಮೇಲೆ ಎರೆಚಿದ ಈರುಳ್ಳಿಯನ್ನು ಹಾಕಿ, 1 ಟೀ ಚಮಚ ಎಣ್ಣೆ ಬಿಟ್ಟು ಕರೆದು ಟೊಮೊಟೊಗಳ ಚೂರುಗಳನ್ನು ಹಾಕಿ ಕಲಕಬೇಕು ಆಮೇಲೆ ರುಚಿಗೆ ತಕ್ಕಷ್ಟು ಉಪ್ಪು, ಮೆಣಸಿನಪುಡಿ ಚಿಟಿಕೆ ಅರಿಶಿನ ಪುಡಿ ಕಾಟವಾ ಮಸಾಲೆ ಹಾಕಿ ತಿರುವಬೇಕು. ಕಲಕಿದ ಮೇಲೆ, ಸ್ವಲ್ಪ ಸಮಯದ ನಂತರ ಕೆಳಗಿಳಿಸಿ ಚಪಾತಿ, ಜೋಳದ ರೊಟ್ಟಿಯ ಜೊತೆ ತಿಂದರೆ ತುಂಬಾ ರುಚಿಯಾಗಿರುತ್ತದೆ.

**- ಅನುಸೂಯಾ ಸೊನ್ನದ, ಗುಳೇದಗುಡ್ಡ**

# ಒಂದೆಲಗದ ಚಟ್ನಿ



**ಮಾಡುವ ವಿಧಾನ :**

ಒಂದು ಹಿಡಿ ಒಂದೆಲಗವನ್ನು ಚೆನ್ನಾಗಿ ತೊಳೆದು ಇಟ್ಟುಕೊಳ್ಳಿ, ಆ ಬಳಿಕ ರುಚಿಗೆ ಐದಾರು ಮೆಣಸಿನಕಾಯಿ, ಸ್ವಲ್ಪ ಹಸಿ ಶುಂಠಿ, ಕೊತ್ತಂಬರಿ ಸೊಪ್ಪು, (ಹುಣಸೆ ಕಾಯಿ) ಇಲ್ಲವೆ ಹುಣಸೇ ಹಣ್ಣು ಒಟ್ಟಿಗೆ ಸೇರಿಸಿ ರುಬ್ಬಿರಿ. ಆ ಬಳಿಕ ನುಣ್ಣಗೆ ಆದ ಮೇಲೆ ಒಂದು ಗಡ್ಡೆ ಈರುಳ್ಳಿ ಸೇರಿಸಿ. ಅರ್ಧ ಹೋಳು ತೆಂಗಿನಕಾಯಿ, ರುಚಿಗೆ ತಕ್ಕಷ್ಟು ಕಲ್ಲುಪ್ಪು ಸೇರಿಸಿದರೆ ಒಳ್ಳೇದು. ಈ ಚಟ್ನಿ ಮಧ್ಯಾಹ್ನದ ಊಟಕ್ಕೆ ಬಹಳ ರುಚಿಯಾಗಿರುತ್ತದೆ. ತೊದಲು ಮಾತಾಡುವ ಮಕ್ಕಳಿಗೆ ರಾಮಬಾಣವಿದ್ದಂತೆ, ಜ್ಞಾಪಕಶಕ್ತಿ ಹೆಚ್ಚಿಸಿ ದೇಹದಲ್ಲಿ ಚಟುವಟಿಕೆ ಕೊಡುವುದಲ್ಲದೆ ಕಣ್ಣು ನೋವಿಗೆ ದಿವ್ಯ ಔಷಧಿ.

**- ಎಸ್.ರಮೇಶ್, ಮದ್ದೂರು.**

# ಉದ್ದಿನ ಬೇಳೆಯ ಅಂಬಡೆ

**ಬೇಕಾಗುವ ಸಾಮಗ್ರಿಗಳು :**

1/4 ಕೆ.ಜಿ. ಉದ್ದಿನ ಬೇಳೆ, 5 ದೊಡ್ಡ ಮೆಣಸಿನ ಕಾಯಿ, 1 ಚಿಟಿಕೆ ಹಿಂಗು, 1 ಟೀ ಚಮಚ ಉಪ್ಪು.

**ಮಾಡುವ ವಿಧಾನ :**



ಉದ್ದಿನ ಬೇಳೆಯನ್ನು 2 ಗಂಟೆ ನೀರಿನಲ್ಲಿ ನೆನೆ ಹಾಕಿ. ನಂತರ ಉಪ್ಪು, ಹಿಂಗು ಹಾಕಿ ರುಬ್ಬ ಬೇಕು. ರುಬ್ಬಿದ ಮಿಶ್ರಣ ಹೆಚ್ಚು ತೆಳು ವಾಗಬಾರದು, ಗಟ್ಟಿಯಾಗಲೂ ಬಾರದು. ರುಬ್ಬಿದ ಮಿಶ್ರಣಕ್ಕೆ ಮೆಣಸಿನಕಾಯಿ ಹೆಚ್ಚಿ ಹಾಕಬೇಕು. ನಂತರ ನಿಂಬೆ ಗಾತ್ರದ ಉಂಡೆಮಾಡಿ ಬಾಣಲೆಯಲ್ಲಿ ಹಾಕಿ ಕರಿಯಬೇಕು. ಇದನ್ನು ತೆಂಗಿನಕಾಯಿ ಚಟ್ನಿಯಲ್ಲಿ ಹಾಕಿ ಚಹಾ, ಕಾಫಿ ಜೊತೆ ಸವಿಯಲು ಕೂಡ ತುಂಬಾ ರುಚಿಯಾಗಿರುತ್ತದೆ.

**-ಕುಮಾರಿ ವಾಣಿ, ಬೆಳ್ತಂಗಡಿ.**

# ಚಿಕನ್ ಚಿಲ್ಲಿ

**ಬೇಕಾಗುವ ಸಾಮಗ್ರಿಗಳು :**

500 ಗ್ರಾಂ ಬ್ರಾಯಲರ್ ಕೋಳಿ (ಬೋನ್‌ಲೆಸ್ ಚಿಕನ್), 100 ಗ್ರಾಂ ಹಸಿಮೆಣಸಿನಕಾಯಿ (ಹಸಿ ಶುಂಠಿ, ಬೆಳ್ಳುಳ್ಳಿ ಅಜನೋಮೋಟ, ಕೊತ್ತಂಬರಿ ಪೇಸ್ಟ್), 2 ಚಮಚ ಚಿಲ್ಲಿ ಸಾಸ್, ಟೇಸ್ಟಿಂಗ್ ಪೌಡರ್, ರುಚಿಗೆ ತಕ್ಕಷ್ಟು ಉಪ್ಪು, ಕರಿಯಲು ಎಣ್ಣೆ.

***ಮಾಡುವ ವಿಧಾನ :***

500 ಗ್ರಾಂ ಬ್ರಾಯಲರ್ ಕೋಳಿಯನ್ನು ಸಣ್ಣ ಸಣ್ಣ ಚೂರು ಮಾಡಿ ಚೆನ್ನಾಗಿ ತೊಳೆದು ಇದಕ್ಕೆ ಹಸಿ ಶುಂಠಿ, ಬೆಳ್ಳುಳ್ಳಿ, ಕೊತ್ತಂಬರಿ, ಉಪ್ಪು, ರುಬ್ಬಿದ ಪೇಸ್ಟನ್ನು ಚಿಕನ್ ಪೀಸಿಗೆ ಮಿಕ್ಸ್ ಮಾಡಬೇಕು. ಮಾಡಿದ ನಂತರ 15 ನಿಮಿಷ ಮುಚ್ಚಿಟ್ಟು, ನಂತರ ಬಾಣಲೆಯಲ್ಲಿ ಕಾಯಿಸಿದ ಎಣ್ಣೆಯಲ್ಲಿ ಹಸಿಮೆಣಸಿನ ಕಾಯಿ ಸೀಳಿ ಚೆನ್ನಾಗಿ ಕರಿದು ಇಟ್ಟುಕೊಳ್ಳಬೇಕು. ನಂತರ ಚಿಕನ್ ಪೀಸ್‌ಗಳನ್ನು ಎಣ್ಣೆಯಲ್ಲಿ ಹಾಕಿ ಕರಿದು ತೆಗೆಯಬೇಕು. ಉಳಿದ ಸ್ವಲ್ಪ ಎಣ್ಣೆಯಲ್ಲಿ ಕರಿದ ಮೆಣಸಿನಕಾಯಿ, ಕರಿದ ಚಿಕನ್ ಪೀಸ್‌ಗಳನ್ನು ಹಾಕಿ ಚೆನ್ನಾಗಿ ಫ್ರೈಯ್ ಮಾಡಬೇಕು. ನಂತರ ಚಿಲ್ಲಿ ಸಾಸ್ ಹಾಗೂ ಟೇಸ್ಟಿಂಗ್ ಪೌಡರ್ ಹಾಕಿ 5 ನಿಮಿಷ ಬಿಟ್ಟು ಇಳಿಸಬೇಕು.

**- ಪುಷ್ಪಲತಾ ಪಿ.ಲದವಾ, ಬಾಗಲಕೋಟೆ**

# ಬ್ರೆಡ್ ಹಲ್ವ

**ಬೇಕಾಗುವ ಸಾಮಗ್ರಿಗಳು :**



1 ಪೌಂಡ್ ಬ್ರೆಡ್, 1/2 ಕಪ್ ಹಾಲು, 1 ಕಪ್ ಸಕ್ಕರೆ, 1/2 ಕಪ್ ತುಪ್ಪ, ಗೋಡಂಬಿ, ಒಣದ್ರಾಕ್ಷಿ, ಗಸಗಸೆ.

**ಮಾಡುವ ವಿಧಾನ :**

ಬ್ರೆಡ್‌ನ್ನು ಪೀಸ್ ಮಾಡಿ ತುಪ್ಪದಲ್ಲಿ ಉರಿಯಬೇಕು. ನಂತರ ಒಲೆಯ ಮೇಲೆ ಬಾಣಲೆ ಇಟ್ಟು ಅದರಲ್ಲಿ ಹಾಲು, ಸಕ್ಕರೆ, ಗೋಡಂಬಿ, ದ್ರಾಕ್ಷಿ, ಗಸಗಸೆ, ಬ್ರೆಡ್‌ನ ಪಿಸ್‌ನ್ನು ಹಾಕಿ ಮೂರು ನಿಮಿಷ ಕದಕಿ ಕೆಳಗಿಳಿಸಬೇಕು. ನಂತರ ತಿಂದರೆ ಬಹಳ ರುಚಿಯಾಗಿರುತ್ತದೆ.

**- ಸುವರ್ಣ, ಮರಬ್ಬಿಹಾಳ್**

## ಕಾಕ್ ಟೇಲ್ ಬಾತ್

**ಬೇಕಾಗುವ ಸಾಮಗ್ರಿಗಳು:**

1/2ಕೆ.ಜಿ. ಅನ್ನಕ್ಕೆ: 1/2 ಕೆ.ಜಿ. ಅಕ್ಕಿ (ಸಣ್ಣದು) ಹುರುಳಿಕಾಯಿ, ಕ್ಯಾರೆಟ್, ಸೀಮೆಬದನೆಕಾಯಿ, ಬದನೆಕಾಯಿ, ಆಲೂಗಡ್ಡೆ (ಒಂದು) ಹೂಕೋಸು, ಎಲೆಕೋಸು, ಬಟಾಣಿ, ಈರುಳ್ಳಿ 1, ಹಸಿಮೆಣಸಿನಕಾಯಿ 15-20, ಬೆಳ್ಳುಳ್ಳಿ 3-4 ಸೀಳು (ಬೇಕಿದ್ದರೆ), ಕಡಲೆಕಾಯಿಬೀಜ ಒಂದು ಹಿಡಿ, ಕೊತ್ತಂಬರಿ ಮತ್ತು ಸಬ್ಬಕ್ಕಿಸೊಪ್ಪು (ಸಣ್ಣ) ಒಂದೊಂದು ಕಟ್ಟು, ಉಪ್ಪು, ನಿಂಬೆಹಣ್ಣು 1-2, ತೆಂಗಿನತುರಿ ಕಾಲುಹೋಳು.



**ಒಗ್ಗರಣೆಗೆ:**

1 ಅಥವ 1 1/4 ಸೌಟು ಎಣ್ಣೆ, ಜೀರಿಗೆ 1/2 ಚಮಚ, ಸಾಸಿವೆ, ಒಣಮೆಣಸಿನಕಾಯಿ, ಕರಿಬೇವು, ಅರಿಸಿನಪುಡಿ 1/4 ಚಮಚ.

**ಮಾಡುವ ವಿಧಾನ :**

ಚಿತ್ರಾನ್ನಕ್ಕೆ ಮಾಡಿಕೊಳ್ಳುವಂತೆ ಅನ್ನಮಾಡಿಕೊಳ್ಳಿ. ಮೇಲೆ ಹೇಳಿದ ಎಲ್ಲ ತರಕಾರಿಗಳನ್ನು ಒಂದೊಂದು ಹಿಡಿ ಸಣ್ಣದಾಗಿ ಹೆಚ್ಚಿಕೊಳ್ಳಿ. ಎಣ್ಣೆ ಕಾಯಲು ಇಟ್ಟು ಸಾಸಿವೆ, ಜೀರಿಗೆ ಕಡಲೆಬೇಳೆ, ಒಣಮೆಣಸಿನಕಾಯಿ ಹಾಕಿ ಹೊಂಬಣ್ಣಕ್ಕೆ ಬಂದ ಮೇಲೆ ಬೆಳ್ಳುಳ್ಳಿ, ಈರುಳ್ಳಿ, ಮೆಣಸಿನಕಾಯಿ ಹಾಕಿ. ಈಗ ಎಲ್ಲ ತರಕಾರಿಯನ್ನು ಹಾಕಿ ಸಣ್ಣ ಉರಿಯಲ್ಲಿ ನೀರು ಹಾಕದೆ ಮೆತ್ತಗಾಗುವಂತೆ ತರಕಾರಿಯನ್ನು ಬೇಯಿಸಿ. ಮೆತ್ತಗಾದ ಮೇಲೆ ಸಬ್ಬಕ್ಕಿ, ಕೊತ್ತಂಬರಿ, ಉಪ್ಪು ಅರಿಸಿನಪುಡಿ ಬೆರೆಸಿ ಕೆಳಗಿಳಿಸಿ. ಅನ್ನ ಆರಿದ ನಂತರ ಮೇಲೆ ಮಾಡಿಟ್ಟುಕೊಂಡಿರುವ ಒಗ್ಗರಣೆ ಹಾಕಿ ನಿಂಬೆರಸ ಸೇರಿಸಿ ಅನ್ನವನ್ನು ಕಲೆಸಿ, ಕೊನೆಯಲ್ಲಿ ತೆಂಗಿನತುರಿ, ಗೋಡಂಬಿ ಮತ್ತು ಕಡಲೆಕಾಯಿ ಬೀಜ ಎಣ್ಣೆಯಲ್ಲಿ ಹದವಾಗಿ ಉರಿದು ಅನ್ನಕ್ಕೆ ಸೇರಿಸಿ ಮುಚ್ಚಿಡಿ. 2-3 ನಿಮಿಷದ ನಂತರ ಬಡಿಸಿ, ಇಗೋ ಇದೀಗ ಸಿದ್ದವಾಯ್ತು ಬಾಯಲ್ಲಿ ನೀರೂರಿಸುವ ಕಾಕ್‌ಟೇಲ್ ಬಾತ್.

**- ಟಿ.ಪಿ.ನಾಗರತ್ನ, ಬೆಂಗಳೂರು**

## ಅವಲಕ್ಕಿ ಕಡುಬು

**ಬೇಕಾಗುವ ಸಾಮಗ್ರಿಗಳು:**

1/4 ಕೆ.ಜಿ. ಅವಲಕ್ಕಿ, 100 ಗ್ರಾಂ ಬೆಲ್ಲ, 50ಗ್ರಾಂ ತುಪ್ಪ, 1 ಚಮಚ ಏಲಕ್ಕಿ, 1/4 ಕಪ್ ಗೋಡಂಬಿ, 1 ಕಪ್ ತೆಂಗಿನ ತುರಿ, 1/2 ಕೆ.ಜಿ. ಮೈದಾ.

**ಮಾಡುವ ವಿಧಾನ :**



ಬೆಲ್ಲವನ್ನು ಕರಗಿಸಿ ಅವಲಕ್ಕಿ ಮತ್ತು ಕಾಯಿತುರಿ, ಏಲಕ್ಕಿ ಸೇರಿಸಿ ಸ್ವಲ್ಪ ಬಿಸಿ ಮಾಡಿ. ಹೂರಣ ತಯಾರು ಮಾಡಬೇಕು. ನಂತರ ಮೈದಾದಿಂದ ಚಪಾತಿ ತಯಾರಿಸಿ ಹೂರಣವನ್ನು ಅದರ ಒಳಗೆ ಇಟ್ಟು ಮಡಚಿ ಎಣ್ಣೆಯಲ್ಲಿ ಕರಿಯಿರಿ.

**- ವೀಣಾ ಮಾಲಾಡಿ, ಬೆಳ್ತಂಗಡಿ.**

## ಪನ್ನೀರಿನ ಸಿಹಿ ತಿಂಡಿ

**ಬೇಕಾಗುವ ಸಾಮಗ್ರಿಗಳು:**

ಅರ್ಧ ಕಿಲೋ ಸಕ್ಕರೆ, ಅರ್ಧ ಕಿಲೋ ಖೋವಾ, ಅರ್ಧ ಕಿಲೋ ಪನ್ನೀರು. 125 ಗ್ರಾಂ ಮೈದಾ, ಸ್ವಲ್ಪ ತಿನ್ನುವ ಸೋಡಾ, ಉಪ್ಪು, ಏಲಕ್ಕಿ ಕರಿಯುವ ಸಲುವಾಗಿ ತುಪ್ಪ, ಗೋಡಂಬಿ, ದ್ರಾಕ್ಷಿ.

**ಮಾಡುವ ವಿಧಾನ :**

ಅರ್ಧ ಕಿಲೋ ಖೋವಾದಲ್ಲಿ ಮೈದಾ, ಸ್ವಲ್ಪ ಉಪ್ಪು, ಅರ್ಧ ಚಮಚ ತಿನ್ನುವ ಸೋಡಾ ಮತ್ತು ಅರ್ಧ ಕಿಲೋ ಪನ್ನೀರ ಬಟ್ಟಿಗೆ ಸೇರಿಸಿ ಚೆನ್ನಾಗಿ ನಾದಬೇಕು. ಈ ಮಿಶ್ರಣದ ಸಣ್ಣ ಸಣ್ಣ ಉಂಡೆಗಳನ್ನು ಮಾಡಿ ಅದರಲ್ಲಿ ಗೋಡಂಬಿ ದ್ರಾಕ್ಷಿ ಹಾಕಬೇಕು. ಈ ಉಂಡೆಗಳನ್ನು ತುಪ್ಪದಲ್ಲಿ ಕರಿಯಬೇಕು. ನಂತರ ಸಕ್ಕರೆಯ ಎಳೆಯ ಪಾಕದಲ್ಲಿ ಹಾಕಬೇಕು. ಈ ಉಂಡೆಗಳನ್ನು ಹತ್ತು ನಿಮಿಷ ಎಳೆಯ ಪಾಕದಲ್ಲಿ ಇಟ್ಟು ನಂತರ ಬದಿಗೆ ತೆಗೆದಿಡಬೇಕು. ಮತ್ತೊಮ್ಮೆ ಎರಡೆಳೆ ಪಾಕವನ್ನು ಮಾಡಿ ಅದರಲ್ಲಿ ಈ ಉಂಡೆಗಳನ್ನು ಇಡಬೇಕು.

**-ದೀಪಾ ಉ., ರಬಕವಿ**

## ಆಲೂಗಡ್ಡೆ ಡಿಲೈಟ್

**ಬೇಕಾಗುವ ಸಾಮಗ್ರಿಗಳು :**

1/4 ಕೆ.ಜಿ. ಆಲೂಗಡ್ಡೆ, ಐದು ಹಸಿಮೆಣಸಿನಕಾಯಿ, ಅರ್ಧ ಚಮಚ ಖಾರದ ಪುಡಿ, ಒಂದು ಬಟ್ಟಲು ಹುರಿದ ಕಡಲೆ ಬೇಳೆ, ಕರಿಯಲು ಎಣ್ಣೆ, ರುಚಿಗೆ ತಕ್ಕಷ್ಟು ಉಪ್ಪು.

**ಮಾಡುವ ವಿಧಾನ:**

ಮೊದಲು ಆಲೂಗಡ್ಡೆಯನ್ನು ಚೆನ್ನಾಗಿ ಬೇಯಿಸಬೇಕು. ಬೆಂದ ನಂತರ ಮೇಲಿನ ಸಿಪ್ಪೆಯನ್ನು ತೆಗೆದು ಸಣ್ಣ ಸಣ್ಣ ಹೋಳುಗಳಂತೆ ಕತ್ತರಿಸಿಕೊಳ್ಳಿ, ಕಡಲೆ ಬೇಳೆಯನ್ನು ಸಣ್ಣದಾಗಿ ಮಾಡಿ ಆಲೂಗಡ್ಡೆಯ ಹೋಳುಗಳಲ್ಲಿ ಸೇರಿಸಬೇಕು. ಮೆಣಸಿನಪುಡಿ, ಉಪ್ಪು, ಸ್ವಲ್ಪ ಅಡಿಗೆ ಸೋಡಾ ಇವೆಲ್ಲವುಗಳನ್ನು ಸೇರಿಸಿ, ಚೆನ್ನಾಗಿ ನಾದಿ ಸಣ್ಣ ಸಣ್ಣ ಉಂಡೆಗಳನ್ನಾಗಿ ಮಾಡಿಟ್ಟುಕೊಂಡು ಎಣ್ಣೆಯಲ್ಲಿ ಕಂದುಬಣ್ಣ ಬರುವವರೆಗೆ ಕರಿಯಬೇಕು. ಚಟ್ನಿಯ ಜೊತೆಗೆ ತಿನ್ನಲು ಬಲು ರುಚಿಯಾಗಿರುತ್ತದೆ.

**- ರಾಜಶ್ರೀ ವಿನಾಯಕ ಗುಮಾಸ್ತೆ, ಸಿದ್ದಾಪುರ.**

## ನೀವೂ ಬರೆಯಬಹುದು

ಇದು ಎಲ್ಲರ ಅಂಕಣ. ಅಡುಗೆಯಲ್ಲಿ ಆಸಕ್ತಿಯಿರುವವರು ತಮಗೆ ಗೊತ್ತಿರುವ ಅಡುಗೆಗಳ ಬಗ್ಗೆ ಅವುಗಳನ್ನು ತಯಾರಿಸುವ ವಿಧಾನದ ಬಗ್ಗೆ ಸಂಕ್ಷಿಪ್ತವಾಗಿ ಬರೆಯಬಹುದು. ಬರಹದ ಜತೆಗೆ ತಮ್ಮದೊಂದು ಭಾವಚಿತ್ರ ಕಳಿಸಿ.

**ವಿಳಾಸ:** ಸಂಪಾದಕರು, **ಬಿಸಿಲ ಬದುಕು,** ಅಂಕುರ ಪ್ರಕಾಶನ ಅಂಚೆ ಪೆಟ್ಟಿಗೆ: 7951 ಬಸವೇಶ್ವರನಗರ, ಬೆಂಗಳೂರು - 560 079.

# ಸಂವೇದನೆ

■ ಎಂ. ಎಸ್. ಮೂರ್ತಿ
'ವಿನ್ಯಾಸ', ನಂ. 132, 1ನೇ ಮಹಡಿ ಗಾಂಧಿ ಬಜಾರ್ ಸರ್ಕಲ್, ಬಸವನಗುಡಿ, ಬೆಂಗಳೂರು-4

## ಎಲ್ಲಿದ್ದಾರೆ ಕಸ ಗುಡಿಸುವ ಸ್ವಾಮೀಜಿ?

**ಬೆ**ಂಗಳೂರಿನ ಬಸವನಗುಡಿಯಲ್ಲಿ ಒಂದು ಆಶ್ರಮ ಇದೆ. ರಾಮಕೃಷ್ಣ ಪರಮಹಂಸರ ಹೆಸರಿನ ಶ್ರೀರಾಮಕೃಷ್ಣ ಆಶ್ರಮ ನಾನು ಚಿಕ್ಕಂದಿನಿಂದಲೂ ನೋಡಿದ್ದ, ಸಂಪರ್ಕ ವಿರಿಸಿಕೊಂಡಿದ್ದ ಆಶ್ರಮ ಆದು. ನನಗೆ 15 ವರ್ಷಕ್ಕೆ ಹತ್ತಿರದ ಸಮಯ, ಆಗಾಗ ಆಶ್ರಮಕ್ಕೆ ಹೋಗಿ ಬರುತ್ತಿದ್ದೆ. ಹಸಿರು ಗಿಡ ಮರಗಳಿಂದ ಕೂಡಿದ, ತುಂಬಾ ಪ್ರಶಾಂತ ವಾತಾವರಣ. ಈಗ ದಿನವೂ ಅದೇ ಹಾದಿಯಲ್ಲಿ ಓಡಾಡಿದರೂ ಯಾಕೋ ಒಂದು ದಿನವೂ ಅಲ್ಲಿಗೆ ಹೋಗಬೇಕೆನಿಸಿರಲಿಲ್ಲ. ನನ್ನ ಚಿಕ್ಕಂದಿನಲ್ಲಿ ಅಲ್ಲಿಗೆ ಯಾಕೆ ಹೋಗುತ್ತಿದ್ದೆನೋ, ಈಗ ಯಾಕೆ ಹೋಗುವುದಿಲ್ಲವೊ ಈ ಎರಡೂ ಪ್ರಶ್ನೆಗಳಿಗೂ ನನ್ನಲ್ಲಿ ಉತ್ತರವಿಲ್ಲ.

ಮೊನ್ನೆ ನನ್ನ ಹಿರಿಯ ಸ್ನೇಹಿತರೊಬ್ಬರು, ಆಶ್ರಮದ ಬಗ್ಗೆ ಅಲ್ಲಿನ ಚಟುವಟಿಕೆಗಳ ಬಗ್ಗೆ ನನ್ನೊಂದಿಗೆ ಮಾತನಾಡುತ್ತಿದ್ದರು. ಅಲ್ಲಿನ ಪರಿಸರದಲ್ಲಿರುವುದು ಮುಕ್ತಿಗೆ ದಾರಿ, ಅಲ್ಲಿನ ವಾತಾವರಣ ತುಂಬಾ ಒಳ್ಳೆಯದೆಂದೂ ಆಶ್ರಮದೊಳಗೆ ಹೋದರೆ ಒಂದು ಹೊಸ ಲೋಕವೇ ಇದೆ ಎನಿಸುತ್ತದೆ ಎನ್ನುತ್ತಾ ನನ್ನ ಮನಸ್ಸಿಗೆ ನೆಮ್ಮದಿ ನೀಡುವ ತಾಣ ಎಂದರೆ ಅದೊಂದೇ ಎಂದು ಮುಗಿಸಿದರು. ಜೊತೆಗೆ ನನ್ನನ್ನೂ ತಮ್ಮೊಂದಿಗೆ ಅಲ್ಲಿಗೆ ಬರುವಂತೆ ಒತ್ತಾಯಿಸಿದರು. ಅದಕ್ಕೆ ನನಗಿಷ್ಟವಿಲ್ಲ ಎಂದು ಹೇಳಿ ಸುಮ್ಮನಾದೆ. ಅವರು ಬಿಡದೆ ಒಂದು ಸಾರಿ ಅಲ್ಲಿಗೆ ಬನ್ನಿ ನಿಮಗೇ ತಿಳಿಯುತ್ತದೆ ಎಂದು ಮತ್ತೆ ಒತ್ತಾಯಿಸತೊಡಗಿದರು.

ನಾನು ಅವರಿಗೆ ನೇರವಾಗಿ ಈಗಿನ ಸಂದರ್ಭದಲ್ಲಿ ಇಂತಹ ಆಶ್ರಮಗಳಿಂದ ಏನೂ ಉಪಯೋಗವಿಲ್ಲ ಎಂದು ನನ್ನ ಅಭಿಪ್ರಾಯ ಎಂದೆ. ಅವರಿಗೆ ಬಹಳ ಬೇಸರವಾಯಿತೆಂದು ಕಾಣುತ್ತದೆ. ನಮ್ಮ ದೈನಂದಿನ ಸಮಸ್ಯೆಗಳಿಂದ ಬೇಸರವಾಗಿರುವ ಮನಸ್ಸಿಗೆ ಒಂದಷ್ಟು ನೆಮ್ಮದಿ ಸಿಗುವುದಕ್ಕೆ ಆಶ್ರಮದಿಂದ ಸಾಧ್ಯವಾಗಿದೆ. ಅದು ಹೇಗೆ ಸರಿಯಿಲ್ಲ ಎಂದರು. ನಾನು ಅದಕ್ಕೆ ನಿಮಗೆ ಈಗ 40ರ ಸಮೀಪ, ಈಗಷ್ಟೇ ನಿಮಗೆ ನೆಮ್ಮದಿ ಶಾಂತಿ, ಪ್ರಶಾಂತ ವಾತಾವರಣ, ವೈರಾಗ್ಯ ಎಲ್ಲಾ ತತ್ವಗಳು ತುಂಬಾ ಆಕರ್ಷಕವಾಗಿ ಕಾಣತೊಡಗಿದೆ. ಯಾಕೆಂದರೆ ಆಶ್ರಮದ ಹೊರಗಿನ ಜೀವನದ ಕಲ್ಮಶಗಳಿಗೆ ನಿಮ್ಮ ಕೊಡುಗೆ ನೀಡಿಯಾಗಿದೆ. ಅದರಿಂದಾಗುವ ಪರಿಣಾಮದಿಂದ ತಪ್ಪಿಸಿಕೊಳ್ಳುವ ಸ್ವಾರ್ಥದಿಂದ ಆಶ್ರಮದಂತಹ ವಾತಾವರಣದಲ್ಲಿ ಅವಿತುಕೊಳ್ಳುವ ಪ್ರವೃತ್ತಿ ನಿಮ್ಮಲ್ಲಿ ಬೆಳೆದಿದೆ. ಹಾಗಾಗಿ ಆ ವಾತಾವರಣ ಈಗ ಆಪ್ತವಾಗುತ್ತದೆ. ಹಿಂದೆಯೂ ಆಶ್ರಮ ಇತ್ತು. ಆಗ ಅದು ನಿಮಗೆ ಕಂಡಿರಲಿಲ್ಲ. ಕಾರಣ ನಿಮ್ಮ ವ್ಯವಹಾರದಲ್ಲಿ ನೀವು ತಲ್ಲೀನರಾಗಿದ್ದಿರಿ. ನಿಮ್ಮ ನಿತ್ಯ ಜೀವನದಲ್ಲಿ ನೆಮ್ಮದಿ ತರುವಂತಹುದು ಆಗಲೇ ಸಾಧ್ಯವಾಗಿದ್ದರೆ ಈಗ ನಾನು ಹೇಳಿದಂತೆಯೇ ಹೇಳುತ್ತಿದ್ದೀರಿ. ಅಲ್ಲಿ ಸಾಧ್ಯವಾಗದೇ ಹೋದುದರಿಂದಲೇ ಇವತ್ತು ಒಳ್ಳೆಯದನ್ನು ಮಾಡುವ ಭ್ರಮೆ ನಿಮ್ಮಲ್ಲಿ ಬೆಳೆದಿದೆ. ಇಲ್ಲಿ ನಾನು ಇದು ಒಳ್ಳೆಯದು. ಇದು ಒಳ್ಳೆಯದಲ್ಲ ಎಂದು ಯಾವುದರ ಬಗ್ಗೆಯೂ ಹೇಳುತ್ತಿಲ್ಲ. ಆಶ್ರಮಕ್ಕೆ ಹೋಗಿ ಒಂದೆರಡು ಗಂಟೆ ಭಜನೆ ಮಾಡುವುದು ಮಾತ್ರವೇ ಒಳ್ಳೆಯ ಕೆಲಸ ಎಂದು ನಾನು ಒಪ್ಪುವುದಿಲ್ಲ. ಯಾಕೆಂದರೆ ಅದಕ್ಕಿಂತಲೂ ಒಳ್ಳೆಯ ಕೆಲಸ ನಿಮ್ಮಿಂದ, ಆಶ್ರಮದಿಂದ ಸಾಧ್ಯ ಎಂದು ನನ್ನ ಅಭಿಪ್ರಾಯ ಎಂದೆ.



ಅವರಿಗೆ ಗೊಂದಲವಾಯಿತೆಂದು ಕಾಣುತ್ತದೆ. ಹಾಗಾಗಿ ಏನನ್ನೂ ಮಾತನಾಡದೆ ಸುಮ್ಮನಿದ್ದರು. ನಾನು ಮುಂದುವರೆದು ಹೇಳಿದೆ: ನೋಡಿ, ನಾನು ನಿಮಗಿಂತಲೂ ಸಣ್ಣವನು. ನನಗೆ ಈ ವಿಷಯ ಕುರಿತಂತೆ ಅನಿಸಿದ್ದನ್ನು ಪ್ರಾಮಾಣಿಕವಾಗಿ ನಿಮ್ಮಲ್ಲಿ ಹಂಚಿಕೊಳ್ಳಲು ಇಷ್ಟಪಡುತ್ತೇನೆ.







ನಾನೂ ಕೂಡ ಸುಮಾರು 20 ವರ್ಷಗಳ ಹಿಂದೆಯೇ ಇಂತಹ ಆಶ್ರಮಗಳ ಪ್ರಾರ್ಥನೆಗಳನ್ನು, ಭಜನೆಗಳನ್ನು ನಿಷ್ಠೆಯಿಂದ ಕೇಳಿಸಿಕೊಳ್ಳುತ್ತಿದ್ದವನು. ಕ್ರಮೇಣ ಅವುಗಳ ಸಂಪರ್ಕ ಬಿಟ್ಟುಹೋಯಿತು. ಇಂತಹ ಸಾರ್ವಜನಿಕ ಸಂಸ್ಥೆಗಳು ಸಾಮಾಜಿಕವಾದ ಜವಾಬ್ದಾರಿಯನ್ನು ಪ್ರಾಕ್ಟಿಕಲ್ಲಾಗಿ ಮಾಡುತ್ತವೆಯೋ ಎನ್ನುವುದು ನನ್ನ ಮುಖ್ಯ ಪ್ರಶ್ನೆ. ಈ ಪ್ರಶ್ನೆಗೆ ಉತ್ತರವನ್ನೂ ನೀವು ನನ್ನನ್ನೇ ಕೇಳಿದರೆ ನಿಜವಾಗಿಯೂ ಇಂತಹ ಸಂಸ್ಥೆಗಳು ಸಾಮಾಜಿಕ ಕಳಕಳಿಯಿಂದ ಮಾಡಬಹುದಾದ ಕೆಲಸವನ್ನು ಮಾಡುವುದಿಲ್ಲ ಎಂದು ನನ್ನ ಆರೋಪ. ನನ್ನ ಮಾತನ್ನು ಆಲಿಸಿದ ನನ್ನ ಮಿತ್ರರು, ಹಾಗಾದರೆ ನಿಮ್ಮ ಅಭಿಪ್ರಾಯದಲ್ಲಿ ಈ ಆಶ್ರಮ ಏನು ಮಾಡಬೇಕು? ಎಂದರು, ಸ್ವಲ್ಪ ಉದ್ವಿಗ್ನರಾಗಿ. ಆದಕ್ಕೆ ನಾನು ಬಹಳ ದಿನಗಳಿಂದಲೂ ನಾನು ಇಂತಹ ಧಾರ್ಮಿಕ ಸಂಸ್ಥೆಗಳ ಕುರಿತು ಯೋಚಿಸಿದ್ದೇನೆ. ಸಮಾಜದ ಮುಖ್ಯ ಸ್ಥಾನಗಳಲ್ಲಿರುವ ಪ್ರತಿಷ್ಠಿತರನ್ನು ಭಕ್ತರನ್ನಾಗಿ ಹೊಂದಿರುವ ಈ ಧಾರ್ಮಿಕ ಸಂಸ್ಥೆಗಳು ಒಂದು ಬೃಹತ್ ಪ್ರಮಾಣದ ಶಕ್ತಿಯನ್ನು, ಪ್ರಭಾವವನ್ನು ಹೊಂದಿರುತ್ತವೆ. ಅಂತಹ ಪ್ರಭಾವ ಮತ್ತು ಶಕ್ತಿಯನ್ನು ಬಳಸಿ ಖಂಡಿತವಾಗಿಯೂ ಉಪಯುಕ್ತವಾದ ಮುಖ್ಯ ಕೆಲಸಗಳನ್ನು ಮಾಡಬಹುದು. ಸಣ್ಣ ಉದಾಹರಣೆಗೆ ಹೇಳುವುದಾದರೆ ಈ ಆಶ್ರಮಗಳು ಮತ್ತು ಸಮಾಜಗಳು ಇರುವ ರಸ್ತೆಗಳನ್ನು ಶುಚಿಯಾಗಿರಿಸುವ ಪ್ರಾಕ್ಟಿಕಲ್ ಕೆಲಸ ಮಾಡಬಹುದು. ಆಯಾ ಸಂಸ್ಥೆಗಳ ಎಲ್ಲಾ ಮುಖ್ಯ ಕಾರ್ಯಕ್ರಮಗಳಿಗಿಂತಲೂ ಅತ್ಯಾವಶ್ಯಕವಾದ ಕೆಲಸ ಇದು. ಬೆಳಿಗ್ಗೆ ಅಥವಾ ಸಂಜೆ ಪ್ರಾರ್ಥನೆ ಇದ್ದರೆ ವಾರಕ್ಕೊಮ್ಮೆ ಅಂತಹ ಪ್ರಾರ್ಥನೆಯ ಬದಲು ಆ ಸಮಯಕ್ಕೆ ತಮ್ಮ ಪ್ರತಿಷ್ಠಿತ ಭಕ್ತರನ್ನೆಲ್ಲಾ ಸೇರಿಸಿ ಸಂಸ್ಥೆಯ ಸ್ವಾಮಿಗಳೋ, ಗುರುಗಳೊ ಮುಂದೆ ನಿಂತು ಪೊರಕೆ ಹಿಡಿದು ರಸ್ತೆ ಶುಚಿಗೊಳಿಸಿದರೆ ಅದೊಂದು ಪವಾಡದಂತೆ, ಆ ರಸ್ತೆ ಯಾವ ಸಿಂಗಪುರದ ರಸ್ತೆಯನ್ನೂ ಮೀರಿಸುವ ಸುಂದರ ರಸ್ತೆಯಾಗಬಹುದು. ಭಕ್ತರು ಮಠದೊಳಗೆ ಅಹಂನ್ನು ಕಳೆದುಕೊಂಡು ಮುಕ್ತಿ ಪಡೆಯುವ ಪ್ರಕ್ರಿಯೆಗಿಂತಲೂ ಇದು ತೀರಾ ಸಮಂಜಸವಾದುದೆಂದು ನನ್ನ ಅಭಿಪ್ರಾಯ. ಒಬ್ಬ ಪ್ರತಿಷ್ಠಿತ ವ್ಯಕ್ತಿ ಪೊರಕೆ ಹಿಡಿದು ರಸ್ತೆ ಗುಡಿಸಿದಲ್ಲಿ, ಅಲ್ಲಿ ಸಾರ್ವಜನಿಕರೆದುರು ಅವನ ಅಹಂ ಎಲ್ಲವೂ ಪರಿಪೂರ್ಣವಾಗಿ ಇಳಿದು ಬೇರೆಯವರಿಗೆ ಮಾದರಿಯಾಗಬಲ್ಲಂತಹ ಕೆಲಸ. ನೂರು ವರ್ಷಗಳ ಹಿಂದೆಯೇ ವಿವೇಕಾನಂದರು ಚಿಕಾಗೋ ಭಾಷಣ ಮಾಡಿ (ಸೆಪ್ಟೆಂಬರ್ 11, 1893) ಭಾರತಕ್ಕೆ ಹಿಂದಿರುಗಿ ಕಲಕತ್ತಾದಂತಹ ಕೊಳಚೆ ನಗರವನ್ನು ಸ್ವಯಂ ಪೊರಕೆ ಹಿಡಿದು ಗುಡಿಸಿದ್ದಾರೆ. ಇದನ್ನು ಕಂಡ ನಿವೇದಿತಾ ಮುಂತಾದ ಇತರ ಶಿಷ್ಯರು ಕೂಡಿ ಅನೇಕ ರಸ್ತೆಗಳನ್ನು ಶುಚಿಗೊಳಿಸಿದ್ದಾರೆ. ಈ ಪ್ರತ್ಯಕ್ಷ ಉದಾಹರಣೆಗಳು ನಮ್ಮ ಕಣ್ಣ ಮುಂದೆ ಇದ್ದರೂ ವಾಸ್ತವಕ್ಕೆ ತಂದಿಲ್ಲ. ಅದೇ ಕೊಳಚೆಯಲ್ಲಿ ನಮ್ಮ ತತ್ವ, ಪುರಾಣ, ಆಧ್ಯಾತ್ಮಗಳ ಗ್ರಂಥ ಪಠಣವಾಗುತ್ತದೆ.

ವಿವೇಕಾನಂದರು ಪ್ರಬುದ್ಧ ಭಾಷಣ ಮಾಡಿದರೂ ಅವರ ನಂಬಿಕೆ ಇದ್ದುದು ಪ್ರಾಕ್ಟಿಕಲ್ ಆದ ಸಾಮಾಜಿಕ ಬದಲಾವಣೆಯಲ್ಲಿ ಮಾತ್ರ. ತಾವು ಸಂತನಂತೆ ಯುವಜನತೆಯನ್ನು ಗುರಿಯಾಗಿಟ್ಟುಕೊಂಡು ನಮ್ಮ ಸಮಾಜಕ್ಕೆ ಕಾಯಕಲ್ಪ ಮಾಡಿದರು. ಅಂತಹ ಕಠಿಣ ದಿನಗಳ ಸಂದರ್ಭಕ್ಕೂ ಇಂದಿನ ವೇಗದ ಕಂಪ್ಯೂಟರ್ ವಿಜ್ಞಾನದ ಸಂದರ್ಭಕ್ಕೂ ಹೋಲಿಸಿ ನೋಡಿದರೆ ಇಂದು ನಾವು ಏನನ್ನು ಮಾಡುತ್ತಿದ್ದೇವೆ ಎಂದು ಅರಿವಾಗುತ್ತದೆ...

ನನ್ನ ಹಿರಿಯ ಮಿತ್ರರು ನನ್ನೆಲ್ಲಾ ಮಾತನ್ನೂ ಕೇಳಿದ ನಂತರ ನನ್ನ ದೃಷ್ಟಿಕೋನವನ್ನು ಒಪ್ಪಿದರು. ಹಾಗೇ ಸ್ವಾಮಿಗಳು ರಸ್ತೆಗೆ ಬಂದು ಕಸಗುಡಿಸಲು ಸಾಧ್ಯವೇ ಎಂದರು. ಅವರ ಆಶ್ರಮಕ್ಕೆ ಬರುವ ಭಕ್ತರು ನಡೆಯುವ ಆ ದಾರಿ ಶುಚಿಯಾಗಿರಬೇಕಲ್ಲವೇ? ಮತ್ತು ಈ ಕೆಲಸವನ್ನು ನಾನು ಮತ್ತು ನೀವು ಒಬ್ಬರೇ ಮಾಡಲು ಸಾಧ್ಯವಿಲ್ಲ. ಸ್ವಾಮಿಗಳಂತವರು ಮಾಡಿದರೆ ಅವರ ವರ್ಚಸ್ಸಿನ ಉಪಯೋಗವಾಗುತ್ತದೆ. ಶುಚಿಯಾದ ರಸ್ತೆಗಳ ಮೂಲಕ ನಮ್ಮ ಧಾರ್ಮಿಕ ಸಂಸ್ಥೆಗಳನ್ನು ತಲುಪುವುದು, ಗುರುತಿಸುವುದು ಸುಲಭ. ಈ ಕೆಲಸ ಕೇವಲ ಮಠ, ಸಮಾಜ, ಆಶ್ರಮಕ್ಕೆ ಸಂಬಂಧಿಸಿದ್ದಲ್ಲ, ಮಸೀದಿ ಚರ್ಚ್‌ಗಳಲ್ಲೂ ಮಾಡಬಹುದು.

ಬಹುಶಃ ಆಗ ನಮಗೆ ಮುನಿಸಿಪಾಲಿಟಿಯ ಅಗತ್ಯ ಇರುವುದಿಲ್ಲ ಅಲ್ಲವಾ ಎಂದು ನನ್ನ ದೀರ್ಘ ಮಾತನ್ನು ನಿಲ್ಲಿಸಿ ಅವರ ಮುಖ ನೋಡಿದೆ. ಅವರು ಇದು ಆಗದ ಕೆಲಸ! ಎಂದರು.

ಇದು ನಮ್ಮ ಈವತ್ತಿನ ಕಟು ವಾಸ್ತವ.

■

# ಇಂದಿನ ಮಹಿಳೆಯರಲ್ಲಿ ಹೆಚ್ಚುತ್ತಿರುವ ಏಕಾಂಗಿ ಜೀವನ



■ ಎಂ.ವಿಶ್ವನಾಥ್

**''ಆಗ ಪ್ರೀತಿಗಾಗಿ ನನ್ನ ವ್ಯಕ್ತಿತ್ವ ಜೀವನವನ್ನೇ ತ್ಯಾಗ ಮಾಡಲು ಸಿದ್ಧಳಿದ್ದೆ. ಆದರೆ ನಾನೀಗ ಪೂರ್ಣ ಬದಲಾಗಿದ್ದೇನೆ. ಯಾರಿಗೋಸ್ಕರವೂ ಏನನ್ನು ಈಗ ಕೊಡಲಾರೆ. ಏಕೆಂದರೆ ಪುರುಷ ವರ್ಗವೇ ಸ್ವಾರ್ಥಿ. ಈ ಆರು ವರ್ಷಗಳಲ್ಲಿ ಒಬ್ಬಂಟಿ ಜೀವನ ನನಗೆ ಪೂರ್ಣ ತೃಪ್ತಿ ತಂದಿದೆ''**

**ಬಾ**ಲ್ಯದಲ್ಲಿ ಮಹಿಳೆಗೆ ತಂದೆತಾಯಿಗಳು ಆಸರೆ, ಮದುವೆ ಯಾದ ಮೇಲೆ ಪತಿ ಆಸರೆ, ವೃದ್ಧಾಪ್ಯದಲ್ಲಿ ಮಕ್ಕಳೇ ಆಕೆಗೆ ಆಸರೆ ಎನ್ನುವ ಕಾಲವೊಂದಿತ್ತು. ಆದರೆ ಈ ಹೇಳಿಕೆ ಈಗ ಪೂರ್ಣ ಬದಲಾಗಿದೆ.

ಬದಲಾದ ಸಾಮಾಜಿಕ ಹಾಗೂ ವೈಜ್ಞಾನಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಬಹುತೇಕ ಮಹಿಳೆಯರು ಯಾರ ಆಸರೆಯನ್ನೂ ಬಯಸದೆ ಏಕಾಂಗಿ ಯಾಗಿರಲು ಬಯಸುತ್ತಿರುವುದು ಇಂದು ಸಾಮಾನ್ಯವಾಗಿದೆ.

ಸರಿತಾ 28ರ ತರುಣಿ. ಉದ್ಯೋಗ ದೊರೆತಾಗಿನಿಂದ ಅವರು ಪಾಲಕರ ಹಂಗಿನಿಂದ ಹೊರಬಂದು ಏಕಾಂಗಿ ಯಾಗಿಯೇ ಉಳಿದಿದ್ದಾರೆ. ''ಈ ಜೀವನ ನನಗೆ ಖುಷಿ ನೀಡಿದೆ'' ಎನ್ನುವುದು ಅವರ ಅನಿಸಿಕೆ. ''ಮನೆಯಲ್ಲಿ ನನಗೆ ಯಾರಾದರೂ ಕಾಯುವ ಅಥವಾ ನಾನು ತೆಗೆದು ಕೊಳ್ಳುವ ನಿರ್ಧಾರಕ್ಕಾಗಿ ಇನ್ನೊಬ್ಬ ರನ್ನು ಅವಲಂಬಿಸಬೇಕಾದ ಅವಶ್ಯಕತೆ ಇಲ್ಲ'' ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

ಡಾ.ಶೋಭಾ ಪಾಟೀಲರಿಗೆ 38 ವರ್ಷ. ಇವರು ಚೆನ್ನೈನ ವೈದ್ಯಕೀಯ ಕಾಲೇಜ್ ಒಂದರಲ್ಲಿ ಪ್ರಾಧ್ಯಾಪಕಿ. ಮಧ್ಯಮ ವರ್ಗದ ಕುಟುಂಬದಿಂದ ಬಂದ ಇವರು ಮದುವೆಯಾಗದೇ ಸ್ವತಂತ್ರವಾಗಿರಬೇಕೆಂಬ ನಿರ್ಧಾರ ಕೈಗೊಂಡಾಗ ಇವರ ತಂದೆ-ತಾಯಿ ಗಳಿಗೆ ಗಾಬರಿಯಾಯಿತು. ಇವರ ತಂದೆಯಂತೂ ಭವಿಷ್ಯದಲ್ಲಿ ಆಕೆಗೆ ಒದಗುವ ತೊಂದರೆಗಳು ಹಾಗೂ ಈ ನಿರ್ಧಾರದಿಂದ ಆಕೆಗಿಂತ ಚಿಕ್ಕವರಾದ ಇಬ್ಬರು ಸೋದರಿಯರ ಮುಂದಿನ ಭವಿಷ್ಯಕ್ಕೆ ಆಗುವ ಪರಿಣಾಮಗಳ ಕುರಿತು ವಿವರಿಸಿ ನಿರ್ಧಾರವನ್ನು ಬದಲಿಸಲು ಪರಿಪರಿಯಾಗಿ ವಿನಂತಿಸಿದರು. ಆದರೆ ಡಾ.ಶೋಭಾ ಅದನ್ನು ನಯವಾಗಿಯೇ ತಿರಸ್ಕರಿಸಿ ತಾನು ಮದುವೆಯಾಗದೇ ಉಳಿಯುವ ನಿರ್ಧಾರ ಕುಟುಂಬದ ಮೇಲೆ ಯಾವ ರೀತಿಯ ಪರಿಣಾಮವನ್ನೂ ಬೀರುವುದಿಲ್ಲ ಎಂದು ತಂದೆಗೆ ಮನದಟ್ಟು ಮಾಡಿದರು. ಇಂದು ಶೋಭಾ ಅವರ ಇಬ್ಬರೂ ಸೋದರಿಯರಿಗೆ ವಿವಾಹವಾಗಿದೆ. ಇವರು ಮಾತ್ರ ಏಕಾಂಗಿ ಜೀವನವನ್ನು ಕಳೆಯುತ್ತಿದ್ದಾರೆ.

''ನನಗೆ ವಿವಾಹ ಅವಶ್ಯಕ ಎಂದು ಅನ್ನಿಸಿಯೇ ಇಲ್ಲ'' ಎನ್ನುವ ಅವರು ''ನಾನೀಗ ಸ್ವಚ್ಛಂದ ಪಕ್ಷಿಯ ಹಾಗಿದ್ದೇನೆ'' ಎಂದು ಹೇಳುವಾಗ ಅವರ ಕಣ್ಣಲ್ಲಿ ಒಂದು ಬಗೆಯ ಹೊಳಪಿದೆ.

ಈಚೆಗೆ ಇಂಥ ಸ್ವಚ್ಛಂದ ಪಕ್ಷಿಗಳ ಸಂಖ್ಯೆ ಹೆಚ್ಚುತ್ತಿದೆ. ಇಂಥವರಲ್ಲಿ ಬಹುಪಾಲು ಮಹಿಳೆ ಯರು ಮುಂಬೈನಂಥ ಮಹಾನಗರಗಳಲ್ಲೇ ಕಾಣಸಿಗುತ್ತಾರೆ. ಇವರಲ್ಲಿ ಸುಶಿಕ್ಷಿತ ಉಚ್ಚ ಮಧ್ಯಮ ವರ್ಗದಿಂದ ಬಂದವರೇ ಹೆಚ್ಚು. ಸ್ವತಂತ್ರ ಕೆಲಸದಲ್ಲಿರುವ ಇವರಿಗೆ ವೈವಾಹಿಕ ಜೀವನದಲ್ಲಿ ನಂಬಿಕೆಯಿಲ್ಲ. ಹಾಗೆಯೇ ತಾವು ಏಕಾಂಗಿ ಜೀವನ ಆಯ್ದುಕೊಂಡಿರುವುದಕ್ಕಾಗಿ ವ್ಯಥೆಯೂ ಇಲ್ಲ. ಪುರುಷ ಅಥವಾ ವಿವಾಹ, ಓರ್ವ ಮಹಿಳೆಯ ಸಾಧನೆಗೆ ತೀರಾ ಅವಶ್ಯಕ ಎಂಬ ವಾದವನ್ನು ಈ ಮಹಿಳೆಯರು ಸುತಾರಾಂ ಒಪ್ಪುವುದಿಲ್ಲ. ವೈಜ್ಞಾನಿಕ ಸಂಶೋಧನೆಯೊಂದರಲ್ಲಿ ತೊಡಗಿರುವ ವಸುಂಧರಾ (45) ಏಕಾಂಗಿ ಜೀವನ ತನಗೆ ತುಂಬಾ ಖುಷಿ ನೀಡಿದೆ ಎನ್ನುತ್ತಾರೆ. ''ನಾನು ಕೈಗೆತ್ತಿಕೊಂಡಿರುವ ಸಂಶೋಧನೆಯನ್ನು ಪೂರ್ಣಗೊಳಿಸಬೇಕು. ಇದಕ್ಕೆ ಸಾಕಷ್ಟು ಅಧ್ಯಯನದ ಅಗತ್ಯ ಇದೆ. ಈ ಕಾರಣಕ್ಕಾಗಿಯೇ ನನಗೆ ಏಕಾಂಗಿ ಜೀವನ ಅನಿವಾರ್ಯವಾಯ್ತು'' ಎನ್ನುವುದು ಅವರ ವಿವರಣೆ.

## ಜೀವನ ಶೈಲಿ

ಏಕಾಂಗಿಯಾಗಿರುವುದರ ಮೂಲಕ ಇಂಥ ಸ್ವತಂತ್ರ ಜೀವನದೆಡೆಗೆ ಅನೇಕ ಮಹಿಳೆಯರು ಮಾರುಹೋಗುತ್ತಿದ್ದಾರೆ. ''ನಾನು ಒಬ್ಬಂಟಿ ಯಾಗಿದ್ದರೆ ಯಾರಿಗೂ ವಿವರಣೆ ನೀಡುವ ಅಗತ್ಯವೇ ಇಲ್ಲ'' ಎನ್ನುತ್ತಾರೆ ನೃತ್ಯಶಿಕ್ಷಕಿ ಸಂಗೀತಾ ಪವಾರ್. ನನ್ನ ಕೆಲಸದ ನಿಮಿತ್ತ ತಿಂಗಳುಗಟ್ಟಲೆ ಎಲ್ಲಿಗಾದರೂ ತೆರಳಬಹುದು. ವಿವಾಹವಾದರೆ ಪತಿ, ಮಕ್ಕಳನ್ನು ಬಿಟ್ಟು ಇಷ್ಟು ದೀರ್ಘ ಅವಧಿ ಯವರೆಗೆ ಬೇರೆಡೆ ಹೋಗಲು ಆಗುತ್ತದೆಯೇ ಎಂದು ಅವರು ಪ್ರಶ್ನಿಸುತ್ತಾರೆ.

ಕ್ರಿಸ್ಸಿ (30) ಅವರಿಗೆ 24ರ ಪ್ರಾಯದಲ್ಲೇ ವಿವಾಹವಾಗಿತ್ತು. ಕೆಲವೇ ದಿನಗಳಲ್ಲಿ ವಿಚ್ಛೇದ ನವೂ ಆಯ್ತು. ''ಆಗ ಪ್ರೀತಿಗಾಗಿ ನನ್ನ ವ್ಯಕ್ತಿತ್ವ ಜೀವನವನ್ನೇ ತ್ಯಾಗ ಮಾಡಲು ಸಿದ್ಧಳಿದ್ದೆ. ಆದರೆ ನಾನೀಗ ಪೂರ್ಣ ಬದಲಾಗಿದ್ದೇನೆ. ಯಾರಿ ಗೋಸ್ಕರವೂ ಏನನ್ನು ಈಗ ಕೊಡಲಾರೆ. ಏಕೆಂದರೆ ಪುರುಷ ವರ್ಗವೇ ಸ್ವಾರ್ಥಿ. ಈ ಆರು ವರ್ಷಗಳಲ್ಲಿ



ಈ ಮಹಿಳೆಯರು ತಮ್ಮನ್ನು 'ಏಕಾಂಗಿ' ಎಂದು ಗುರುತಿಸಿ ಕೊಳ್ಳುತ್ತಾರೆಯೇ ವಿನಾ ಅವಿವಾಹಿತೆ ಎಂದಲ್ಲ. ಹೀಗಿರುವುದರಿಂದ ಅವರು ಯಾವುದೇ ನಿರ್ಭಂದವಿಲ್ಲದೆ ಪುರುಷರ ಸಂಪರ್ಕ ಹೊಂದಬಹುದು

ಒಬ್ಬಂಟ ಜೀವನ ನನಗೆ ಪೂರ್ಣ ತೃಪ್ತಿ ತಂದಿದೆ'' ಎಂದು ಅವರು ಭಾವುಕರಾಗಿ ನುಡಿಯುತ್ತಾರೆ.

## ಔದ್ಯೋಗಿಕ ಕ್ರಾಂತಿ

ಇಂದಿನ ಔದ್ಯೋಗಿಕ ಕ್ರಾಂತಿ ವಿಶಾಲ ಮನೋಭಾವದ ಮಹಿಳೆಯರಿಗೆ ಕೇವಲ ಉದ್ಯೋಗದ ಆಯ್ಕೆಯನ್ನು ಮಾತ್ರ ನೀಡಿಲ್ಲ. ಇದರ ಜೊತೆಗೆ ಅನೇಕ ಆಯ್ಕೆಗಳನ್ನು ನೀಡಿದೆ.

ಇದರಲ್ಲಿ ಏಕಾಂಗಿಯಾಗಿರುವುದೂ ಒಂದು. ವಿವಾಹದಿಂದ ಆರ್ಥಿಕ ಭದ್ರತೆ ಉಳಿಯುವುದಿಲ್ಲ

''ಏಕಾಂಗಿಯಾಗಿರುವುದು ಸುಖದ ಸುಪ್ಪತ್ತಿಗೆಯೇನಲ್ಲ ಇಂಥ ಹಲವಾರು ಮಹಿಳೆಯರು ದೈಹಿಕ ಹಾಗೂ ಮಾನಸಿಕ ಒತ್ತಡಗಳಿಂದ ನರಳುತ್ತಾರೆ. ಇವರಲ್ಲಿ ಒಂದು ರೀತಿಯ ಅನಾಥ ಪ್ರಜ್ಞೆ ಕಾಡುತ್ತಿರುತ್ತದೆ''



ಎಂಬ ಮನೋಭಾವ ಹಲವರದು. ಇಂಥ ಮನೋಭಾವದ ಮಹಿಳೆಯರು ತಮ್ಮ ಜೀವನ ಸಂಗಾತಿಗಳಿಂದ ಪ್ರೀತಿ ಪ್ರೇಮದ ಸಂಬಂಧಕ್ಕಿಂತಲೂ ಮಿಗಿಲಾಗಿ ಉತ್ತಮ ಜೀವನಮಟ್ಟ ಹಾಗೂ ಪರಸ್ಪರ ಹೊಂದಾಣಿಕೆಯನ್ನು ಬಯಸುತ್ತಾರೆ. ''ಇಂದಿನ ಬಹುಪಾಲು ಮಹಿಳೆಯರಲ್ಲಿ ಆತ್ಮಗೌರವ ಇದೆ'' ಎನ್ನುತ್ತಾರೆ 38ರ ಪ್ರಾಯದ ಪತ್ರಕರ್ತೆ ರಮಾ ಚಂದ್ರನ್.

ಹೆಂಡತಿ ಎಂಬ ವಸ್ತುವನ್ನು ಗಂಡಸರು ಕೇವಲ ಲೈಂಗಿಕ ತೃಷೆಗಾಗಿ ಬಳಸುವುದನ್ನು ಅವರು ಒಪ್ಪುವುದಿಲ್ಲ.

ಮಹಿಳೆಯರು ಒಂದು ಹಂತದವರೆಗೆ ವಿವಾಹವಾಗಲು ಮನೆಯವರಿಂದ ಭಾರಿ ಒತ್ತಡವನ್ನು ಎದುರಿಸುತ್ತಾರೆ. ಆದರೆ ತಮ್ಮ ಕೆಲಸದಲ್ಲಿ ಅವರು ಯಶಸ್ವಿಯಾದರೆ ಈ ಒತ್ತಡವನ್ನು ನಿವಾರಿಸಿಕೊಳ್ಳಬಹುದು. ಬಹುಪಾಲು ಪಾಲಕರು ತಮ್ಮ ಮಗಳು ಮದುವೆಯಾಗದೆ ಇದ್ದರೆ ಭವಿಷ್ಯ ತುಂಬಾ ಕಷ್ಟಕರವಾಗುತ್ತದೆ ಎಂದು ಭಾವಿಸುತ್ತಾರೆ. ಆದರೆ ಮದುವೆಯಾದ ಮಹಿಳೆಯರೆಷ್ಟು ಜನ ದಾಂಪತ್ಯದಲ್ಲಿ ತಲೆದೋರಿದ ಸಮಸ್ಯೆಗಳಿಂದ ಏಕಾಂಗಿಯಾಗಿಲ್ಲ ಎಂದು ಪ್ರಶ್ನಿಸುತ್ತಾರೆ ರಮಾ.

## ತಜ್ಞರ ಅಭಿಪ್ರಾಯ

ಏಕಾಂಗಿತನ ಇಂದಿನ ಮಹಿಳೆಯರಲ್ಲಿ ಒಂದು ಪ್ರತಿಷ್ಠೆಯ ಪ್ರಶ್ನೆಯಾಗಿ ಬೆಳೆಯುತ್ತಿದೆ. ಇಂಥ ಬೆಳವಣಿಗೆ ಬೆಂಗಳೂರು. ಚೆನ್ನೈ, ಮುಂಬೈನಂಥ ಮಹಾನಗರಗಳಲ್ಲಿನ ಸುಶಿಕ್ಷಿತ ಮಧ್ಯಮ ವರ್ಗದ ಮಹಿಳೆಯರಲ್ಲೇ ಹೆಚ್ಚುತ್ತಿದೆ.

''ತನ್ನ ಸ್ವಾತಂತ್ರ್ಯ ಹಾಗೂ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳುವುದು ಏಕಾಂಗಿಯಾಗಿ ಉಳಿಯಲು ಪ್ರಮುಖ ಕಾರಣ'' ಎನ್ನುತ್ತಾರೆ ಸಮಾಜ ವಿಜ್ಞಾನಿ ಪ್ರೊ. ನೀರಾ ದೇಸಾಯಿ.

ಇಲ್ಲಿ ಬಳಸುವ ಪದ ಮುಖ್ಯ ಅನ್ನುವ ದೇಸಾಯಿ, ಈ ಮಹಿಳೆಯರು ತಮ್ಮನ್ನು 'ಏಕಾಂಗಿ' ಎಂದು ಗುರುತಿಸಿಕೊಳ್ಳುತ್ತಾರೆಯೇ ವಿನಾ ಅವಿವಾಹಿತೆ ಎಂದಲ್ಲ. ಹೀಗಿರುವುದರಿಂದ ಅವರು ಯಾವುದೇ ನಿರ್ಭಂದವಿಲ್ಲದೆ ಪುರುಷರ ಸಂಪರ್ಕ ಹೊಂದಬಹುದು ಎನ್ನುತ್ತಾರೆ.

ಉದಾರ ಮನೋಭಾವದ ಕುಟುಂಬ, ಉನ್ನತ ಶಿಕ್ಷಣ ಹಾಗೂ ಉತ್ತಮ ಆರ್ಥಿಕ ಹಿನ್ನೆಲೆ ಇರುವವರಿಗೆ ಏಕಾಂಗಿಯಾಗಿ ಉಳಿಯುವುದೇನೂ ಸಮಸ್ಯೆ ಅಲ್ಲ. ಆದರೆ ಇಂಥ ಪರಿಸರ ಇಲ್ಲದವರಿಗೆ ಏಕಾಂಗಿ ಜೀವನ ಕಷ್ಟಸಾಧ್ಯ ಎನ್ನುವುದು ದೇಸಾಯಿ ಅವರ ಅಭಿಪ್ರಾಯ.

ಇನ್ನೋರ್ವ ಮನೋವಿಜ್ಞಾನಿ ಹರೀಶ್ ಶೆಟ್ಟಿ ಅವರು ಏಕಾಂಗಿ ಮಹಿಳೆಯರನ್ನು ನಾಲ್ಕು ಬಗೆಯಾಗಿ ವಿಂಗಡಿಸುತ್ತಾರೆ.

1. ಸೂಕ್ತ ಸಂಬಂಧ ಸಿಗದೆ ಅನಿವಾರ್ಯವಾಗಿ ಏಕಾಂಗಿಯಾದವರು. 2. ಅಪಾರ ಆತ್ಮವಿಶ್ವಾಸದ ತನ್ನ ಮಟ್ಟಕ್ಕೆ ಯಾವ ಪುರುಷನೂ ಸಮ ಅಲ್ಲ ಎಂದು ಭಾವಿಸುವವರು. 3. ತಮ್ಮ ಆಪ್ತರು ಹಾಗೂ ಸ್ನೇಹಿತೆ ವೈವಾಹಿಕ ಜೀವನದಲ್ಲಿ ಅನುಭವಿಸಿದ ನೋವು ಹಾಗೂ ಶೋಷಣೆಯಿಂದ ಬೇಸತ್ತ ಮಹಿಳೆಯರು. 4. ಪುರುಷರೊಡನೆ ದೈಹಿಕ ಸಂಪರ್ಕ ಬೆಳೆಸಲು ಬಯಸದ ಮಹಿಳೆಯರು.

ಕೊನೆಯ ಮೂರು ವರ್ಗಗಳು ಮೊದಲಿನಿಂದಲೂ ಅಸ್ತಿತ್ವದಲ್ಲಿವೆ. ಈಚೆಗೆ ಮೊದಲನೆ ವರ್ಗದ ಸಂಖ್ಯೆ ಗಮನಾರ್ಹವಾಗಿ ಹೆಚ್ಚುತ್ತಿದೆ ಎನ್ನುತ್ತಾರೆ ಹರೀಶ್. ''ಏಕಾಂಗಿಯಾಗಿರುವುದು ಸುಖದ ಸುಪ್ಪತ್ತಿಗೆಯೇನಲ್ಲ ಇಂಥ ಹಲವಾರು ಮಹಿಳೆಯರು ದೈಹಿಕ ಹಾಗೂ ಮಾನಸಿಕ ಒತ್ತಡಗಳಿಂದ ನರಳುತ್ತಾರೆ. ಇವರಲ್ಲಿ ಒಂದು ರೀತಿಯ ಅನಾಥ ಪ್ರಜ್ಞೆ ಕಾಡುತ್ತಿರುತ್ತದೆ. 40ರ ಆಸುಪಾಸಿನಲ್ಲಿರುವ ಓರ್ವ ಮಹಿಳೆಯನ್ನು ನೀವು ಗಮನಿಸಿದರೆ ಆಕೆ ಹಗಲಿಡೀ ಕೆಲಸ ಮಾಡಿ ಉಲ್ಲಸಿತಳಾಗಿದ್ದರೂ ರಾತ್ರಿ ಹೊತ್ತು ಮಾತ್ರ ಅವಳಲ್ಲಿ ಖಿನ್ನತೆ ಮನೆಮಾಡಿರುತ್ತದೆ. ತಮ್ಮ ಸುಖ ದುಃಖಗಳಿಗೆ ಸ್ಪಂದಿಸುವ ಸಮಾನ ಮನಸ್ಕರ ಅವಶ್ಯಕತೆ ಅವರಿಗೆ ತುಂಬಾ ಇರುತ್ತದೆ. ಈ ಹಂತದಲ್ಲಿರುವವರಿಗೆ ಅವರ ಕುಟುಂಬ ವರ್ಗದವರು ಹಾಗೂ ಸ್ನೇಹಿತರ ಪಾತ್ರ ತುಂಬಾ ಮಹತ್ತರವಾದುದು'' ಎನ್ನುವುದು ಗಿರೀಶ್ ಅವರ ಅಭಿಮತ. ■




# ಚಾಕೊಲೇಟ್:

## ಮಕ್ಕಳ ಆರೋಗ್ಯಕ್ಕೆ ಹಾನಿಕಾರಕವೇ?

■ಡಾ. ಆರತಿ ವೆಂಕಟೇಶ್

**ಚಾ**ಕೊಲೇಟ್! ಓಹ್, ಈ ಪದದಲ್ಲಿ ಅದೇನು ಮೋಡಿ ತುಂಬಿದೆಯೊ! ಅಳುವ ವರ್ಷದ ಹಸಿಗೂಸಿನಿಂದ ಹಿಡಿದು ಆಟವಾಡುವ ಹತ್ತು ವರ್ಷದ ಎಳೆಮಕ್ಕಳವರೆಗೂ ಚಾಕೊಲೇಟ್ ಎಂಬುದು ಅಮೂಲ್ಯ ನಿಧಿ. ಅದರ ಬಳಕೆಯಿಲ್ಲದೇ ತಂದೆ, ತಾಯಿಯರಿಗೆ ಮಕ್ಕಳ ಹಠ ಸುಧಾರಿಸುವುದು ಎಂಥ ಕಷ್ಟಕರ! ಏನಿದರ ಗುಟ್ಟು? ಏನಿದೆ ಇದರಲ್ಲಿ ಅಂಥ ಆಕರ್ಷಣೆ? ತಿಳಿಯುವ ಕುತೂಹಲವಿದೆಯಲ್ಲವೇ?

ಮನೆಗೆ ಯಾರಾದರೂ ಅತಿಥಿಗಳು ಬಂದಾಗ ಮಕ್ಕಳಿಗಾಗಿ ತರುವ ಪದಾರ್ಥ- ಮುಖ್ಯವಾಗಿ ಚಾಕೊಲೇಟ್! ಈ ಪದ್ಧತಿಯ ಬಗ್ಗೆ ಹಲವು ತಾಯಂದಿರಿಗೆ ಅಸಮಾಧಾನವೂ ಉಂಟು. ಚಾಕೊಲೇಟ್ ಮಕ್ಕಳ ಆರೋಗ್ಯಕ್ಕೆ ಹಾನಿಕರ ವಲ್ಲವೇ? ಖಂಡಿತ ಯೋಚಿಸಬೇಕಾದ ವಿಷಯವೇ. ಚಾಕೊಲೇಟ್ ಎಂಬ ನಾಮಫಲಕ ಹೊತ್ತು ಬಣ್ಣ ಬಣ್ಣದ ಕಾಗದಗಳಿಂದ ಕಂಗೊಳಿಸುವ ಈ ಕಂದು ಬಣ್ಣದ ತಿನಿಸಿನಲ್ಲಿ ಏನಿದೆ ವೈಶಿಷ್ಟ್ಯ? ಇದರ ಹೆಸರು ಕೇಳಿದರೆ ಮಕ್ಕಳಿಗೆ ಹೇಳಲಾಗದಷ್ಟು ಖುಷಿ! ಶಾಲೆಗೆ ಹೋಗಲು ಹಠ ಮಾಡುವ ಮಕ್ಕಳಿಗೆ ಚಾಕೊಲೇಟ್‌ಗಿಂತ ಲಂಚ ಬೇಕೇ?

ತಾವು ಹೊರಗೆ ಹೋಗಬೇಕಾದಾಗ ಮಕ್ಕಳು ಹಿಂಬಾಲಿಸಿ ಬಾರದಂತೆ ತಡೆಯಲು ಚಾಕೊಲೇಟ್ ಎಂಬ ಲಂಚಕ್ಕೆ ಮೊರೆ ಹೋಗದಿದ್ದರಾದೀತೇ?

ಅಳುವ ಮಗುವಿನ ಬಾಯಿ ಮುಚ್ಚಿಸಲು ಚಾಕೊಲೇಟ್ ಲಂಚ ಬೇಕೇ ಬೇಕು!

ಜನ್ಮದಿನ ಆಚರಿಸುವಾಗ ಮಕ್ಕಳಿಗೆ ಹಂಚಲು ಸುಲಭವಾಗಿ ದೊರೆಯುವ ಪದಾರ್ಥ ಚಾಕೊಲೇಟ್

ಅಷ್ಟೇ ಅಲ್ಲ! ಹದಿಹರೆಯದವರ ಮನಸ್ಸು ಅಪಹರಿಸುವ ಸಾಮರ್ಥ್ಯವೂ ಚಾಕೊಲೇಟ್‌ಗಿದೆ ಎಂದರೆ ಉತ್ಪ್ರೇಕ್ಷೆಯ ಮಾತೇ ಅಲ್ಲ.

ಈ ಲಂಚ ಎನ್ನುವ ಚಾಕೊಲೇಟ್‌ನಲ್ಲಿ ಏನಿದೆ ಮೋಡಿ? ಇದರಲ್ಲಿರುವುದು ಸಾಮಾನ್ಯವಾಗಿ ಸಕ್ಕರೆ (ಗ್ಲೂಕೋಸ್ ಎಂಬ ಅಂಶದಲ್ಲಿ), ಹಾಲು, ಕೋಕೋ, ಗೋಧಿ (ಕೆಲವು ಚಾಕೋಲೇಟ್‌ಗಳಲ್ಲಿ)

-ಈ ನಾಲ್ಕು ಪದಾರ್ಥಗಳು ಮಕ್ಕಳ ಮನಸ್ಸನ್ನು ಹುಚ್ಚೆಬ್ಬಿಸುವ ಚೈತನ್ಯ ಹೊಂದಿವೆಯೇ ಎಂದು ಆಶ್ಚರ್ಯವಲ್ಲವೇ?

ಮಕ್ಕಳ ಬೆಳವಣಿಗೆಗಾಗಿ ವಿಶೇಷ Food drinks (ಆರೋಗ್ಯ ಪೇಯ) ಅಗತ್ಯವೆಂದು ಸಾಧಾರಣವಾಗಿ ನಾವೆಲ್ಲ ಜಾಹೀರಾತುಗಳಲ್ಲಿ ಗಮನಿಸಿರಬಹುದು. ಅಸಲು ಈ Food drinks ಗಳಲ್ಲಿ ಏನಿದೆ? ಚಾಕೊಲೇಟ್‌ನಲ್ಲಿ ಇರುವ ಹಾಲು, ಸಕ್ಕರೆ, ಕೋಕೋ ಮುಂತಾದ ಅಂಶಗಳು ಈ ಪೇಯಗಳಲ್ಲೂ ಇರುತ್ತವೆ ಎಂದು ನೀವೇ ಪರಿಶೀಲಿಸಿ ನೋಡಬಹುದು. ಚಾಕೊಲೇಟ್ ಡ್ರಿಂಕ್ ಮಕ್ಕಳಿಗೆ ಲವಲವಿಕೆ ಚೈತನ್ಯ ನೀಡುತ್ತಿರುವಾಗ ಒಂದು ಸಣ್ಣ ಚಾಕೊಲೇಟ್ ದೇಹಕ್ಕೆ ಹಾನಿಕರವೇ? ಯೋಚಿಸಿ!

ಮನುಷ್ಯನ ದೇಹಕ್ಕೆ ಆಯಾಸವಾದಾಗ ಸಹಜವಾಗಿ ರಕ್ತದ ಗ್ಲೂಕೋಸ್ ಅಂಶ ತಗ್ಗುತ್ತದೆ. ಇದರಿಂದ ಶರೀರಕ್ಕೆ ಲವಲವಿಕೆ ಕಡಿಮೆಯಾಗುತ್ತದೆ. ಗ್ಲೂಕೋಸ್ ಸುಲಭವಾಗಿ ಜೀರ್ಣವಾಗುವ ಸಕ್ಕರೆಯ ಅಂಶವಾದುದರಿಂದ ಅದರ ಸೇವನೆಯಿಂದ ತ್ವರಿತ ಚೈತನ್ಯ ಸಿಗುತ್ತದೆ. 'ಗ್ಲೂಕೋಸ್ ಡಿ ಫಾರ್ ಇನ್‌ಸ್ಟೆಂಟ್ ಎನರ್ಜಿ!' ಜಾಹೀರಾತು ನಿಮಗೆಲ್ಲಾ ಚಿರಪರಿಚಿತವಲ್ಲವೇ? ಈ ಇನ್‌ಸ್ಟೆಂಟ್ ಎನರ್ಜಿ ಕೊಡುವ ಗ್ಲೂಕೋಸ್ ಚಾಕೊಲೇಟ್‌ನಲ್ಲೂ ಇರುತ್ತದೆ. ಇದರ ಸೇವನೆಯಿಂದ ಮಕ್ಕಳ ದೇಹದಲ್ಲೂ ಗ್ಲೂಕೋಸ್ ಅಂಶ ಹೆಚ್ಚಿಸಿ ಮಾನಸಿಕವಾಗಿ ಅವರಿಗೆ ಆಹ್ಲಾದ, ಚೈತನ್ಯ ನೀಡುತ್ತದೆ! ಇದೇ ಚಾಕೊಲೇಟ್‌ನಲ್ಲಿರುವ ಗುಟ್ಟು.

ಮಕ್ಕಳ ಆರೋಗ್ಯ ಕೆಡಿಸುವಂತಹ ಗುಣ ಚಾಕೊಲೇಟ್‌ಗಿದೆಯೇ? ಎಂದೀಗ ಯೋಚಿಸಬಹುದು. ಸಾಮಾನ್ಯವಾಗಿ ಎಲ್ಲ ಬಗೆಯ ಹೊರ ಸಿಹಿ ತಿಂಡಿಗಳೂ ಮಕ್ಕಳ ಶರೀರಕ್ಕೆ ಹಾನಿ ಮಾಡುತ್ತವೆ ಎಂದು ವೈದ್ಯಕೀಯ ವಿಜ್ಞಾನವೇ ಹೇಳುತ್ತದೆ. ಆದರೆ ಒಂದು ಸಂದೇಹ! ಮಕ್ಕಳನ್ನು ಸಿಹಿ ತಿಂಡಿಗಳಿಂದ ದೂರವಿಡುವುದು ತಾಯಿಯಿಂದ ಹಸುಳೆಯನ್ನು ಬೇರ್ಪಡಿಸಿದಷ್ಟೇ ಕಠಿಣವಾದ ಹಾಗೂ ಕ್ರೂರವಾದ ಕೆಲಸ. ಒಪ್ಪುತ್ತೀರಲ್ಲವೇ? ಪ್ರೀತಿಯ ತಂದೆ,

ತಾಯಂದಿರೇ, ಮಕ್ಕಳ ಮನಸ್ಸು ಬೆಣ್ಣೆಯಂತ ಮೃದು. ಬಾಲ್ಯ ಮತ್ತೆ ಮರುಕಳಿಸುವುದಿಲ್ಲ. ಚಾಕೊಲೇಟ್ ದೇಹಕ್ಕೆ ಹಾನಿ ಮಾಡುತ್ತದೆ ಎಂಬ ನಂಬಿಕೆಯಿಂದ ನಿಮ್ಮ ಮಕ್ಕಳನ್ನು ಚಾಕೊಲೇಟ್ ಸೇವನೆಯಿಂದ ದೂರ ಮಾಡಬೇಡಿ! ಈ ಕೆಳಗಿನ ವಿವರಗಳನ್ನು ಸ್ವಲ್ಪ ಗಮನಿಸಿ ನೋಡಿದರೆ ಇಷ್ಟೆಲ್ಲ ಪೀಠಿಕೆಯೇಕೆಂದು ನಿಮಗೇ ತಿಳಿಯುತ್ತದೆ.

ಸಕ್ಕರೆ -ದೇಹಕ್ಕೆ ತಾತ್ಕಾಲಿಕವಾಗಿ ಚೈತನ್ಯ ನೀಡುತ್ತದೆ.

ಹಾಲು -ದೇಹಕ್ಕೆ ಕ್ಯಾಲ್ಸಿಯಂ ಕೊಡುತ್ತದೆ

ಕೋಕೋ - ಶರೀರಕ್ಕೆ ಉತ್ತೇಜಕವಾಗಿ ಕೆಲಸ ಮಾಡುತ್ತದೆ.

ಮಾಲ್ಟ್, ವೆಜಿಟೆಬಲ್ ಆಯಿಲ್ ಮುಂತಾದ ಅಂಶಗಳೂ ದೇಹಕ್ಕೆ ಅಗತ್ಯವಾದ ಕೊಬ್ಬಿನಾಂಶ ದೊರಕಿಸಿ ಕೊಡುತ್ತವೆ.

ಇವೆಲ್ಲಾ ಅಂಶಗಳು ಇತ್ತೀಚಿಗೆ ಮಾರುಕಟ್ಟೆಗಳಲ್ಲಿ ಬಿಡು ಗಡೆಯಾಗುವ ಕೆಲವು Food drinksಗಳಲ್ಲೂ ಲಭ್ಯ ವಾಗಿವೆ. ಮಕ್ಕಳಿಗೆ ಪ್ರಿಯವಾಗಿರುವ ಬೋರ್ನ್ ವಿಟಾ, ಮೈಲೋ, ಮಾಲ್ಟೋವಾ ಮುಂತಾದ ಪೇಯಗಳು ಮಕ್ಕಳ ದೇಹ ಬೆಳವಣಿಗೆಗೆ ಅತ್ಯವಶ್ಯಕ ಎಂದು ಪ್ರಚಾರ ಮಾಡಿರುವಾಗ ಒಂದು ಚಾಕೊಲೇಟ್ ಎಷ್ಟು ಪ್ರಮಾಣದಲ್ಲಿ ದೇಹಕ್ಕೆ ದುಷ್ಪರಿಣಾಮ ಮಾಡಲಾದೀತು?

ಈ ಲೇಖನದಲ್ಲಿ ನಾನು ಯಾವುದೇ ಪೇಯ ತಯಾರಿಸುವ ಕಂಪೆನಿಗಳನ್ನು ಆಕ್ಷೇಪಿಸುತ್ತಿಲ್ಲ ಕ್ಷಮಿಸಿ! ಆದರೆ ಜನಸಾಮಾನ್ಯರಿಗೆ ಚಾಕೊಲೇಟ್ ಎಂದರೆ ದುಷ್ಪರಿಣಾಮ ಬೀರುವ ಪದಾರ್ಥವೆಂದೇ ನಂಬಿಕೆ. ಆದರೆ ಮಕ್ಕಳ ಮನಸ್ಸಿಗೆ ಅಷ್ಟೊಂದು ಖುಷಿ ನೀಡುವ ಚಾಕೊಲೇಟ್‌ನಲ್ಲಿ ದೇಹಕ್ಕೆ ಹಾನಿ ಮಾಡುವಂತಹ ಅಂಶಗಳೇನೂ ಇಲ್ಲವೆಂದು ಸ್ಪಷ್ಟ ಪಡಿಸುವ ಉದ್ದೇಶ ಇಲ್ಲಿದೆ - ಅಷ್ಟೇ!

ಮಕ್ಕಳಲ್ಲಿ ಚಾಕೊಲೇಟ್‌ನ ಸೂಕ್ತ ಬಳಕೆಯ ಬಗ್ಗೆ ಈಗ ತಿಳಿಯೋಣವೇ? ಚಾಕೊಲೇಟ್ ಎಂಬ ಹೆಸರಿನಲ್ಲಿ ಈಗ ಹಲವು ಪ್ರತಿಷ್ಠಿತ ತಯಾರಿಕೆದಾರರು ತಮ್ಮ ಉತ್ಪನ್ನ ಬಿಡುಗಡೆ ಮಾಡಿದ್ದಾರೆ. ನಿಮ್ಮ ಮಕ್ಕಳು ತಿನ್ನುವ ಚಾಕೊಲೇಟ್ ಅಂತಹ ಪ್ರತಿಷ್ಠಿತ ತಯಾರಿಕೆಯಿಂದ ಬಿಡುಗಡೆಯಾಗಿದೆಯೇ ಎಂದು ಮೊದಲು ಖಚಿತಪಡಿಸಿಕೊಳ್ಳಿ. ಉದಾಹರಣೆಗಾಗಿ ಕ್ಯಾಡ್ ಬರೀಸ್, ನೆಸ್ಲೆ, ಅಮುಲ್, ನ್ಯೂಟ್ರಿನ್, ಪ್ಯಾರಿಸ್ ಮುಂತಾದ ಕಂಪನಿಗಳು ತಮ್ಮ ಗುಣಮಟ್ಟವನ್ನು ಈಗಲೂ ಉಳಿಸಿಕೊಂಡಿವೆ. ತಲೆಬರಹವಿಲ್ಲದ ಅಗ್ಗದ ಚಾಕೊಲೇಟ್‌ಗಳನ್ನಾಗಲೀ, ಹೊದಿಕೆ ಯಿಲ್ಲದ ಚಾಕೊಲೇಟ್‌ಗಳನ್ನಾಗಲಿ ಎಂದಿಗೂ ಮಕ್ಕಳಿಗೆ ಕೊಡಬೇಡಿ! ಮಕ್ಕಳು ಸಾಮಾನ್ಯವಾಗಿ ವಾರಕ್ಕೆ ಮೂರು ಅಥವಾ ನಾಲ್ಕು ಬಾರಿ ದಿನಕ್ಕೆ ಒಂದು ಎಂಬಂತೆ ಚಾಕೊಲೇಟ್ ತಿನ್ನಲು ಅಡ್ಡಿಯೇನಿಲ್ಲ. ಮುಖ್ಯವಾಗಿ ಚಾಕೊಲೇಟ್ ತಿಂದ ನಂತರ ಮಕ್ಕಳ ಹಲ್ಲುಗಳ ನಡುವೆ ಅದರ ತುಣುಕುಗಳು ಸಿಲುಕಿಕೊಳ್ಳುವುದರಿಂದ ಹಲ್ಲುಗಳು ಹಾಳಾಗುತ್ತವೆ. ಇದನ್ನು ತಪ್ಪಿಸಲು ಚಾಕೊಲೇಟ್ ಸೇವಿಸಿದ ಕೂಡಲೇ ಹಲ್ಲುಗಳನ್ನು ಸ್ವಚ್ಛವಾಗಿ ತೊಳೆದುಕೊಳ್ಳುವುದನ್ನು ಮಕ್ಕಳಿಗೆ ತಪ್ಪದೇ ಹೇಳಿಕೊಡಿ. ಈ ರೀತಿಯ ಚಾಕೊಲೇಟ್ ಸೇವನೆಯಿಂದ ದೇಹಕ್ಕೆ ಕೆಟ್ಟ ಪರಿಣಾಮ ಹೆಚ್ಚೇನೂ ಆಗುವುದಿಲ್ಲ.




ಮಕ್ಕಳು ಚಾಕೊಲೇಟ್ ತಿನ್ನುವುದರಿಂದ ಹೊಟ್ಟೆನೋವು, ಹೊಟ್ಟೆಯಲ್ಲಿ ಹುಳುಗಳು ಉಂಟಾಗುತ್ತವೆ ಎಂಬ ನಂಬಿಕೆ ಕೆಲವರಲ್ಲಿ ಇದೆ. ಮಕ್ಕಳು ವಾಡಿಕೆಯಂತೆ ಮಣ್ಣಲ್ಲಿ ಆಡುವುದು, ಕೈಗಳನ್ನು ಶುಭ್ರವಾಗಿ ತೊಳೆಯದೇ ತಿನ್ನುವುದ ರಿಂದಲೇ ಮುಖ್ಯವಾಗಿ ಅನಾರೋಗ್ಯಕ್ಕೆ, ಹೊಟ್ಟೆಯಲ್ಲಿ ಹುಳುಗಳಿಗೆ ಕಾರಣವಾಗುತ್ತದೆ. ಕೇವಲ ಚಾಕೊಲೇಟ್ ಬಳಕೆಯಿಂದ ಅದು ಸಾಧ್ಯವಿಲ್ಲ! ಮಕ್ಕಳು ಆಟವಾಡಿ ದಣಿದು ಬಂದಾಗ ಒಂದು ಚಾಕೊಲೇಟ್ ಸೇವಿಸುವುದೂ ಒಂದೇ, ಒಂದು ಚಮಚ ಗ್ಲೂಕೋಸ್ ಸೇವಿಸುವುದೂ ಆಗಿರುತ್ತದೆ. ಇದರಲ್ಲಿ ಕ್ಯಾಲೋರಿಗಳ ವ್ಯತ್ಯಾಸಗಳಿದ್ದರೂ ದೇಹಕ್ಕೆ ಉಂಟಾಗುವ ಉಪಯೋಗ ಮಾತ್ರ ಒಂದೇ ಎಂದು ಸ್ಪಷ್ಟವಾಗಿ ಹೇಳಬಹುದು. ಚಾಕೊಲೇಟ್ ದೇಹಕ್ಕೆ ತಾತ್ಕಾಲಿಕವಾಗಿ ತ್ವರಿತ ಚೈತನ್ಯ ನೀಡುತ್ತದೆ.

ಚಾಕೊಲೇಟ್‌ನಿಂದ ಶರೀರಕ್ಕೆ ದುಷ್ಪರಿಣಾಮ ಉಂಟಾಗಲು ಮುಖ್ಯ ಕಾರಣ, ಅದರ ದರ್ಜೆ ಹಾಗೂ ಅದರಲ್ಲಿರುವ ವರ್ಣಕಾರಕ(Colouring agent) ಮತ್ತು ಸಂರಕ್ಷಕ ಅಂಶ (preservative). ಕೆಲವು ಚಾಕೊಲೇಟ್‌ಗಳಿಂದ ಬಾಯಿ ಬಣ್ಣವಾಗುವುದನ್ನು ಗಮನಿಸಿರಬಹುದು. ಹಾನಿ ಮಾಡುವ ವರ್ಣಕಾರಕ ಚಾಕೊಲೇಟುಗಳು ಮಕ್ಕಳ ಆರೋಗ್ಯಕ್ಕೆ ಒಳ್ಳೆಯದಲ್ಲ. ನಿಮ್ಮ ಮುದ್ದು ಮಗುವಿಗೆ ಚಾಕೊಲೇಟ್ ಕೊಡುವ ಮುನ್ನ ಅದರ ತಯಾರಕರು ಹಾಗೂ ಅದರಲ್ಲಿರುವ ಅವಶ್ಯಕ ಅಂಶಗಳನ್ನು ತಪ್ಪದೇ ಗಮನಿಸಿ.

ಮಕ್ಕಳು ಸೇವಿಸುವ ಆರೋಗ್ಯ ಪೇಯದಲ್ಲೂ ಚಾಕೊಲೇಟ್ ಇರುವುದರಿಂದ( ಉದಾ- ಬೌರ್ನ್ ವಿಟಾ, ಚಾಕೊಲೇಟ್ ಕಾಂಪ್ಲಾನ್, ಚಾಕೊಲೇಟ್ ಹಾರ್ಲಿಕ್ಸ್, ಮೈಲೋ, ಮಾಲ್ಟೋವಾ) ದಿನಕ್ಕೊಂದು ಬಾರಿ ಚಾಕೊಲೇಟ್ ತಿನ್ನುವುದು, ದಿನಕ್ಕೆರಡು ಬಾರಿ ಫುಡ್ ಡ್ರಿಂಕ್ ಕುಡಿಯುವುದೂ ಒಂದೇ ಪರಿಣಾಮ. ಕ್ಯಾಲೋರಿ ಹಾಗೂ ಕೆಲವು ಪೋಷ ಕಾಂಶಗಳಲ್ಲಿ (ಕಬ್ಬಿಣ, ಅನ್ನಾಂಗ ಗಳು) ವ್ಯತ್ಯಾಸ ವಿರಬಹುದಷ್ಟೇ.

ಒಂದು ಚಾಕೊಲೇಟ್ ಗ್ಲೂಕೋಸ್‌ನಂತೆಯೇ ದೇಹಕ್ಕೆ ತ್ವರಿತ ಚೈತನ್ಯ ಲವಲವಿಕೆ ನೀಡುತ್ತದೆ.

ಅನಾವಶ್ಯಕವಾಗಿ ಮಕ್ಕಳನ್ನು ಚಾಕೊಲೇಟ್ ಸೇವನೆಯಿಂದ ವಂಚಿತಗೊಳಸುವುದರಿಂದ ದೇಹಕ್ಕೆ ಬೇಕಾಗುವ ಸಕ್ಕರೆಯಂಶ ತಗ್ಗುತ್ತದೆ. ಈ ಮುಖ್ಯಾಂಶ ಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮಕ್ಕಳಿಗೆ ಚಾಕೊಲೇಟ್ ನೀಡಲು ಹಿಂಜರಿಯಬೇಡಿ. ಕೆಲವು ನಿಯಮಗಳನ್ನು ಪಾಲಿಸುವುದರಿಂದ ಚಾಕೊಲೇಟ್ ದೇಹಕ್ಕೆ ಕೆಟ್ಟ ಪರಿಣಾಮ ಬೀರುವುದಿಲ್ಲ.

ಚಾಕೊಲೇಟ್ ಒಳ್ಳೆಯ ಕಂಪನಿಗಳಿಂದ ತಯಾರಾಗಿರಬೇಕು. ಮಕ್ಕಳು ವಾರಕ್ಕೆ ಮೂರು ಅಥವಾ ನಾಲ್ಕು ಬಾರಿ ದಿನಕ್ಕೊಂದರಂತೆ ಚಾಕೊ ಲೇಟ್ ತಿನ್ನಬಹುದು. ಇದರ ಪ್ರಮಾಣ ಮೀರ ಬಾರದು. ಚಾಕೊಲೇಟ್ ತಿಂದ ಕೂಡಲೇ ಬಾಯಿ ತೊಳೆಯುವುದನ್ನಂತೂ ಮರೆಯಲೇಬಾರದು.

ಊಟ ಅಥವಾ ತಿಂಡಿಯ ಬದಲಿಯಾಗಿ ಚಾಕೊಲೇಟ್ ಕೊಡಬಾರದು. ಚಾಕೊಲೇಟ್ ಚಪಲಕ್ಕಾಗಿ ತಿನ್ನುವ ಪದಾರ್ಥವೇ ಹೊರತು ಹೊಟ್ಟೆ ತುಂಬಿಸುವ ಸಾಧನವಾಗಬಾರದು.

ಹಾನಿ ಮಾಡುವ ವರ್ಣಕಾರಕ ಚಾಕೊಲೇಟನ್ನಾಗಲಿ, ತಲೆಬರಹವಿಲ್ಲದ ಹೊದಿಕೆರಹಿತ ಚಾಕೊಲೇಟ್‌ಗಳನ್ನಾಗಲಿ ಖಂಡಿತ

ಮಕ್ಕಳಿಗೆ ಕೊಡಬೇಡಿ.

ಚಾಕೊಲೇಟ್ ಸೇವನೆಯ ಬಗ್ಗೆ ಮಕ್ಕಳಿಗೆ ಅನಾವಶ್ಯಕವಾಗಿ ಕಟ್ಟುನಿಟ್ಟು ಮಾಡಬೇಡಿ. ಚಾಕೊಲೇಟ್, ಐಸ್‌ಕ್ರೀಂ, ಕೇಕ್ ಮುಂತಾದ ಸೇವನೆ ಬಾಲ್ಯದಲ್ಲಿ ಒಂದು ಅವಿಭಾಜ್ಯ ಅಂಗವಿದ್ದಂತೆ! ಚಾಕೊಲೇಟ್ ದೇಹಕ್ಕೆ ದುಷ್ಪರಿಣಾಮ ಬೀರುವಂತಿದ್ದರೆ ಅದನ್ನು ಅಂತರ ರಾಷ್ಟ್ರೀಯ ಮಟ್ಟದಲ್ಲಿ ತಯಾರಿಸುತ್ತಿದ್ದರೇ?

ಆಹಾರದ ದುಷ್ಪರಿಣಾಮಗಳ ಬಗ್ಗೆ ಚರ್ಚಿಸಲಾರಂಭಿಸಿದರೆ ಅನೇಕ ಆಹಾರಗಳನ್ನು ಕುರಿತು ಪುಟಗಟ್ಟಲೆ ವಿಶ್ಲೇಷಿಸಬಹುದು. ದೇಹಕ್ಕೆ ಎಣ್ಣೆಯಂಶ, ಸಿಹಿಯಂಶ ಒಳ್ಳೆಯದಲ್ಲ ಎಂದು ಜನಸಾಮಾನ್ಯರ ನಂಬಿಕೆಯೂ ಹೌದು. ಅಲ್ಲಗೆಳೆಯುವಂತಿಲ್ಲ! ಆದರೆ ಮನುಷ್ಯನ ಶರೀರಕ್ಕೆ ಸೂಕ್ತ ಕೊಬ್ಬು, ಸಕ್ಕರೆ ಬೇಕೇ ಬೇಕು. ಅದು ಸಿಹಿ ತಿಂಡಿಯ ರೀತಿಯಲ್ಲಿ ಇದ್ದರೇನು, ಚಾಕೊಲೇಟ್ ಎಂಬ ಪದಾರ್ಥದ ಬಗೆಯಲ್ಲಿದ್ದರೇನು? ವಾದ ಒಪ್ಪಿಗೆಯಲ್ಲವೇ?

ಮಧುಮೇಹದಿಂದ ನರಳುವ ರೋಗಿಗಳೂ ಆಗಾಗ ರಕ್ತದಲ್ಲಿ ಸಕ್ಕರೆಯಂಶ ಕಡಿಮೆ ಯಾದಾಗ (hypoglycaemia) ಚಾಕೊಲೇಟ್ ಅಥವಾ ಪೆಪ್ಪರ್‌ಮೆಂಟ್ ಸೇವಿಸುವುದನ್ನು ಗಮನಿಸಿರಬಹುದು. ದೇಹಕ್ಕೆ ಯಾವುದು ಅತಿಯಾದರೂ ಒಳ್ಳೆಯದಲ್ಲ. ಇತಿಮಿತಿಗಳ ಪರಿವೆ ತಿಳಿದು ಅಪರೂಪಕ್ಕೆ ಚಾಕೊಲೇಟ್ ಸೇವಿಸುವುದರಿಂದ ಹಾನಿಯೇನೂ ಇಲ್ಲ.

ಇಲ್ಲಿ ಯಾವ ಚಾಕೊಲೇಟ್ ತಯಾರಕರ ಪಕ್ಷ ವಹಿಸುವ ಉದ್ದೇಶವಿಲ್ಲ. ವೈಯಕ್ತಿಕವಾಗಿ ಟೀಕಿಸುವ ಅಗತ್ಯವೂ ಇಲ್ಲ! ಬಾಲ್ಯ ಎಂಬುದು ಮನುಷ್ಯನ ಬದುಕಿನಲ್ಲಿ ರಂಗುರಂಗಿನ ಆಸೆಗಳನ್ನು ಹೊತ್ತ ಅಮೂಲ್ಯವಾದ ಹಂತ. ಸಿಹಿತಿಂಡಿಗಳು, ಚಾಕೊಲೇಟ್ ಮಕ್ಕಳಿಗೆ ಪಂಚಪ್ರಾಣದಷ್ಟೇ ಅಪೂರ್ವವಾದುದು. ನಿಮ್ಮ ಮನೆಯ ಅತಿಥಿಗಳು ನಿಮ್ಮ ಮಗುವಿಗೆ ಚಾಕೊಲೇಟ್ ತಂದಿತ್ತರೆ ಮುಖ ಸೊಟ್ಟ ಮಾಡಿಕೊಳ್ಳಬೇಡಿ. ಮಕ್ಕಳ ಮನಸ್ಸಿಗೆ ಉತ್ತೇಜಕವಾಗಿ ಕೆಲಸ ಮಾಡುವ ಚಾಕೊಲೇಟ್ ನೀವು ತಿಳಿದಷ್ಟು ಆರೋಗ್ಯಕ್ಕೆ ಹಾನಿಕರವಲ್ಲ. ಮನಸ್ಸಿನ ಒತ್ತಡ ಹೆಚ್ಚಾದಾಗ, ದೇಹಕ್ಕೆ ಆಯಾಸವಾದಾಗ ಒಂದೇ ಒಂದು ಚಾಕೊಲೇಟ್ ಬಾಯಿಗಿಟ್ಟು ಬದಲಾವಣೆ ಗಮನಿಸಿ ನೋಡಿ! ಅದರಿಂದ ಸಿಗುವ ನಿರ್ಮಲ ಆನಂದದಿಂದ ನಿಮ್ಮ ಮಕ್ಕಳನ್ನು ವಂಚಿತರನ್ನಾಗಿ ಮಾಡಲು ನಿಮಗೇ ಮನಸ್ಸಾಗುವುದಿಲ್ಲ! ■

# ಕನ್ನಡ ಶಿಲ್ಪಿಗಳು

1. **ಕನ್ನಡದ ಕುಲ ಪುರೋಹಿತ** - ಆಲೂರುವೆಂಕಟರಾಯರು
2. **ಕರ್ನಾಟಕ ಸಂಗೀತ ಪಿತಾಮಹ** - ಪುರಂದರ ದಾಸರು
3. **ಕನ್ನಡದ ಕಣ್ವ** - ಬೆಳ್ಳೂರು ಮೈಲಾರಯ್ಯ ಶ್ರೀಕಂಠಯ್ಯ (ಬಿ.ಎಂ.ಶ್ರೀ)
4. **ಕನ್ನಡದ ವರಕವಿ** - ದತ್ತಾತ್ರೇಯ ರಾಮಚಂದ್ರ ಬೇಂದ್ರೆ
5. **ಕನ್ನಡದ ಚುಟುಕಗಳ ಬ್ರಹ್ಮ** - ದಿನಕರ ದೇಸಾಯಿ
6. **ಕನ್ನಡದ ಕಡಲ ತೀರದ ಭಾರ್ಗವ ಮತ್ತು ಚಲಿಸುವ ವಿಶ್ವಕೋಶ** - ಡಾ.ಕೆ.ಶಿವರಾಮಕಾರಂತ
7. **ಕನ್ನಡದ ರಾಷ್ಟ್ರಕವಿಗಳು** - ಗೋವಿಂದ ಪೈ ಮತ್ತು ಕುವೆಂಪು
8. **ಕನ್ನಡದ ಕಾದಂಬರಿ ಸಾರ್ವಭೌಮ** - ಅ.ನ.ಕೃಷ್ಣರಾಯರು (ಅ.ನ.ಕೃ)
9. **ಕನ್ನಡದ ಪತ್ರಿಕಾ ರಂಗದ ಭೀಷ್ಮ** - ತಿ.ತಾ. ಶರ್ಮಾ
10. **ಕನ್ನಡದ ಆಸ್ತಿ** - ಮಾಸ್ತಿ ವೆಂಕಟೇಶಅಯ್ಯಂಗಾರ್
11. **ಕನ್ನಡದ ದಾಸರು** - ಪುರಂದರ ದಾಸ ಮತ್ತು ಕನಕದಾಸ
12. **ಕರ್ನಾಟಕ ವಿದ್ಯಾವರ್ಧಕ ಸಂಘದ ಜನಕ** - ರಾ.ಹ. ದೇಶಪಾಂಡೆ
13. **ಕನ್ನಡದ ಕಬೀರ** - ಸಂತ ಶಿಶುನಾಳ ಶರೀಫ
14. **ಕನ್ನಡದ ಸಣ್ಣ ಕತೆಗಳ ಜನಕ** - ಮಾಸ್ತಿ ವೆಂಕಟೇಶ ಅಯ್ಯಂಗಾರ್
15. **ಕರ್ನಾಟಕ ಪ್ರಹಸನ ಪಿತಾಮಹ** - ಟಿ.ಪಿ. ಕೈಲಾಸಂ
16. **ಕನ್ನಡದ ಹಾಸ್ಯ ಚಕ್ರವರ್ತಿ** - ಬೀchi (ಭೀಮಸೇನರಾವ್)
17. **ಕನ್ನಡದ ಒಲವಿನ ಕವಿ** - ಕೆ.ಎಸ್. ನರಸಿಂಹಸ್ವಾಮಿ
18. **ಕನ್ನಡದ ಶಿಶುಸಾಹಿತ್ಯ ಶಿಲ್ಪಿ** - ಸಿಸು ಸಂಗಮೇಶ
19. **ಕನ್ನಡದ ಚಲಿಸುವ ನಿಘಂಟು** - ಡಿ.ಎಲ್. ನರಸಿಂಹಾಚಾರ್ಯ
20. **ಕರ್ನಾಟಕದ ಷೇಕ್ಸ್‌ಪಿಯರ್** - ಕಂದಗಲ್ ಹನುಮಂತರಾವ್
21. **ಕನ್ನಡದ ವಚನ ಶಾಸ್ತ್ರ ಪಿತಾಮಹ** - ಪ.ಗು.ಹಳಕಟ್ಟಿ
22. **ಕನ್ನಡದ ಷಟ್ಪದಿಗಳ ಬ್ರಹ್ಮ** - ರಾಘವಾಂಕ
23. **ಕನ್ನಡದ ರೂಪಕ ಸಾಮ್ರಾಜ್ಯದ ಚಕ್ರವರ್ತಿ** - ಕುಮಾರ ವ್ಯಾಸ
24. **ಕನ್ನಡದ ರಗಳೆ ಕವಿ** - ಹರಿಹರ
25. **ಕನ್ನಡದ ಉಭಯ ಕವಿ ಚಕ್ರವರ್ತಿ** - ಪೊನ್ನ
26. **ಕನ್ನಡದ ಉಪಮಾಲೋಲ ಮತ್ತು ನಾದಲೋಲ ಬಿರುದಾಂಕಿತ** - ಲಕ್ಷ್ಮೀಶ
27. **ಕರ್ನಾಟಕ ನಾಟಕ ರತ್ನ** - ಗುಬ್ಬಿ ವೀರಣ್ಣ
28. **ಕನ್ನಡದ ಹುಲಿ** - ಡೆಪ್ಯೂಟಿ ಚೆನ್ನಬಸಪ್ಪ
29. **ಹಳಗನ್ನಡ ರತ್ನತ್ರಯರು** - ಪಂಪ, ಪೊನ್ನ, ರನ್ನ.
30. **ಕನ್ನಡದ ಕವಿಚಕ್ರವರ್ತಿಗಳು** - ಪೊನ್ನ, ರನ್ನ, ಜನ್ನ.
31. **ಕನ್ನಡದ ಕಾಳಿದಾಸ** - ಬಸಪ್ಪಶಾಸ್ತ್ರಿ.
32. **ಕನ್ನಡ ಸಾಹಿತ್ಯದ ಅಶ್ವಿನಿ ದೇವತೆ** - ತಳುಕಿನ ವೆಂಕಣ್ಣಯ್ಯ.
33. **ಕನ್ನಡದ ಆದಿಕವಿ** - ಪಂಪ
34. **ಕನ್ನಡದ ಅಭಿನವ ಪಂಪ** - ನಾಗಚಂದ್ರ.

■ **ಅಶೋಕ ಜಿ.ಸಜ್ಜನ್**

## ಕ್ವಿಜ್-16 ಬಹುಮಾನ ವಿಜೇತರು

### ಪ್ರಥಮ ಬಹುಮಾನ
### ರೂ.500-00

**ಗೋಪಾಲಕೃಷ್ಣ ಶಿವರಾಮ ಭಟ್ಟ**
ಬಗನಪಾಲ, ಬರಗದ್ದೆ,
ಪೊ. ಬಿಸಗೋಡ,
ತಾ. ಯಲ್ಲಾಪುರ (ದ.ಕ.) - 581 427

### ದ್ವಿತೀಯ ಬಹುಮಾನ
### ರೂ.200-00

**ಕೆ.ಎಂ. ಸಂಪತ್ ಕುಮಾರ್**
8ನೇ ತರಗತಿ,
ಜ್ಞಾನ ದೀಪ ಕಾನ್ವೆಂಟ್ ಹೈಸ್ಕೂಲ್
ದೇವರಾಜಅರಸ್ ಲೇಔಟ್,
3ನೇ ಕ್ರಾಸ್, 'ಬಿ' ಬ್ಲಾಕ್,
ದಾವಣಗೆರೆ

### ಸಮಾಧಾನಕರ ಬಹುಮಾನ
### ತಲಾ ರೂ. 100/-

**ಶ್ರೀಮತಿ ಎ.ಎಮ್.ಬಾಳಶೆಟ್ಟಿ**
ಶಿಕ್ಷಕಿ, ಎಂ.ಪಿ.ಎಸ್.
ಗಲಗಲಿ - 587 117
ತಾ. ಬೀಳಗಿ, ಜಿ. ಬಾಗಲಕೋಟೆ

**ಉದಯ ಕೆ.ಶೆಟ್ಟಿ**
ಹೋಟೆಲ್ ಪ್ರಶಾಂತ್
ಗಾಂಧಿ ಚೌಕ್, ಯಾದಗಿರಿ- 585 201
ಜಿಲ್ಲೆ ಗುಲ್ಬರ್ಗಾ

**ಶ್ರೀನಾಥ್ ಎಚ್.ಆರ್.**
ನಂ. 36, 3ನೇ ಅಡ್ಡರಸ್ತೆ,
ಸೋಮೇಶ್ವರನಗರ,
ಯಶವಂತಪುರ,
ಬೆಂಗಳೂರು - 560 022.

## ಕ್ವಿಜ್ - 16ರ ಸರಿಯುತ್ತರ

1. 17 ಸೆಪ್ಟೆಂಬರ್ 1998
2. ಅನೈತಿಕತೆ: ಅಮೆರಿಕ ಮಾದರಿ ಭಾರತಕ್ಕೆ ದುಬಾರಿ
3. ಗುರುದತ್
4. ಭಾರತೀಯ ಜನತಾ ಪಾರ್ಟಿ
5. ಪಾಕಿಸ್ತಾನ

**ಸೂಚನೆಗಳು**

- ಕೆಳಗೆ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಮುದ್ರಿತ ಕೂಪನ್ನ್ನೇ ಬಳಸಬೇಕು. ಜೆರಾಕ್ಸ್ ಪ್ರತಿ ಪರಿಗಣಿಸುವುದಿಲ್ಲ.
- ಬಹುಮಾನ ಪಡೆದವರ ಭಾವಚಿತ್ರ ಪ್ರಕಟಿಸಲಾಗುವುದು. ಕೂಪನ್ ಜೊತೆಗೆ ಭಾವಚಿತ್ರ ಕಳಿಸಬೇಡಿ. ಬಹುಮಾನಿತರನ್ನು ಸಂಪರ್ಕಿಸಿ ಭಾವಚಿತ್ರ ತರಿಸಿಕೊಳ್ಳಲಾಗುವುದು.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು. ಐದು ಜನ ಬಹುಮಾನ ವಿಜೇತರಿಗೆ ತಲಾ 100 ರೂ. ಮೌಲ್ಯದ ಪುಸ್ತಕಗಳನ್ನು ಬಹುಮಾನವಾಗಿ ನೀಡಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ **15 - 11 - 1998**

**ವಿಜೇತರಿಗೆ 500 ರೂ. ಪ್ರಥಮ ಬಹುಮಾನ**

ಪ್ರವೇಶ ಪತ್ರ

## ಕ್ವಿಜ್ - 17

ಹೆಸರು..........................................................

ವಿಳಾಸ..........................................................

..........................................................

..........................................................

ಪಿನ್ ಕೋಡ್.......................... ದೂರವಾಣಿ..........................

1. 'ಬಿಸಿಲ ಬದುಕು' ಮಾಸಿಕದ ಅಕ್ಟೋಬರ್ 98ರ ಸಂಚಿಕೆಯ 20ನೇ ಪುಟದಲ್ಲಿ ಪ್ರಕಟವಾದ ಬರಹದ ಶೀರ್ಷಿಕೆ ಏನು?

   ..........................................................

2. ಐ.ಎ.ಎಸ್. ಮಾಡಲು ನಿಗದಿ ಪಡಿಸಿದ ಕನಿಷ್ಟ ವಯೋಮಿತಿ ಎಷ್ಟು?

   ..........................................................

3. ಕೆ.ಪಿ.ಎಸ್.ಸಿ.ಯ ಈಗಿನ ಅಧ್ಯಕ್ಷರ ಹೆಸರೇನು?

   ..........................................................

4. ದೆಹಲಿಯ ಹೊಸ ಮುಖ್ಯಮಂತ್ರಿ ಯಾರು?

   ..........................................................

5. 'ಎ' ಕನ್ನಡ ಚಿತ್ರದ ನಾಯಕ ನಟ ಯಾರು?

   ..........................................................

ಪ್ರವೇಶ ಪತ್ರವನ್ನು 15.11.98ರೊಳಗೆ ಕಳುಹಿಸಬೇಕಾದ ವಿಳಾಸ :
ಸಂಪಾದಕರು, **ಬಿಸಿಲ ಬದುಕು,** ಅಂಚೆ ಪೆಟ್ಟಿಗೆ 7951,
ಬಸವೇಶ್ವರನಗರ, ಬೆಂಗಳೂರು-79.

# ವಯಸ್ಕರಿಗಾಗಿ

■ ಡಾ. ವಸುಂಧರಾ ಭೂಪತಿ

### ಏಡ್ಸ್ ಇರಬಹುದೆ?

*ನನಗೆ ಈಗ 40 ವರ್ಷ ವಯಸ್ಸು, ವಿವಾಹಿತ. ಸಂಪೂರ್ಣ ಸಸ್ಯಾಹಾರಿ. ಯಾವುದೇ ದುರಭ್ಯಾಸಗಳು ಇಲ್ಲ. ಆದರೆ 5 ತಿಂಗಳಿನ ಹಿಂದೆ ನಮ್ಮ ಮನೆಯಲ್ಲಿ ತೊಂದರೆಯ ಕಾರಣ, ನಾನು ಒಮ್ಮೆ ಮಾತ್ರ ನಿರೋಧ್ ಉಪಯೋಗಿಸಿ ಒಬ್ಬ ವೇಶ್ಯೆಯ ಸಹವಾಸ ಮಾಡಿದೆ. ಇದಾಗಿ 20 ದಿವಸಗಳ ನಂತರ ನನ್ನ ಶಿಶ್ನದ ಮೇಲೆ ಬೆಳ್ಳಗಿನ ಪೊರೆ ಬಂದಿತು. ನಾನು ಡಾಕ್ಟರ್‌ಗೆ ತೋರಿಸಿದೆ. 50 ದಿವಸದ ನಂತರ ಪೂರ್ಣವಾಗಿ ಆರಾಮ ಆದೆ. ಆದರೆ ನನಗೆ ಏಡ್ಸ್ ವೈರಸ್ ಬಂದಿದೆಯೆನೋ ಎಂಬ ಭಯ ಕಾಡುತ್ತಿದೆ. ಆದರೆ ನನಗೆ ಏಡ್ಸ್ ಪರೀಕ್ಷೆ ಮಾಡಿಸಲು ಭಯವಾಗುತ್ತದೆ. ಕಾರಣ ನನಗೆ ಏನಾದರು ತಗುಲಿದ್ದರೆ ನನಗೆ ಆತ್ಮಹತ್ಯೆ ಒಂದೇ ದಾರಿ. ಈವರೆಗೂ ನನಗೆ ಆರೋಗ್ಯದಲ್ಲಿ ಯಾವುದೇ ಬದಲಾವಣೆ ಇಲ್ಲ. ಆರೋಗ್ಯವಾಗಿಯೇ ಇದ್ದೇನೆ. ಕಾರಣ, ಏಡ್ಸ್‌ಗೆ ಚಿಕಿತ್ಸೆ ಇದೆಯೇ, ಚಿಕಿತ್ಸೆ ಇದ್ದರೆ ಎಷ್ಟು ವರ್ಷ ಬದುಕಬಹುದು, ಏಡ್ಸ್ ಬಂದಾಗ ಆರೋಗ್ಯದಲ್ಲಿ ಯಾವ ಯಾವ ಬದಲಾವಣೆಗಳು ಆಗುತ್ತವೆ, ಅದು ಸೋಂಕಿದಾಗ ಎಷ್ಟು ದಿವಸಗಳ ನಂತರ ತೊಂದರೆಗಳು ಕಾಣುತ್ತವೆ - ದಯಮಾಡಿ ನನ್ನ ಸಮಸ್ಯೆಗೆ ಪರಿಹಾರ ಸೂಚಿಸಿ.*

**- ಹೆಸರುಬೇಡ, ದಾವಣಗೆರೆ**

**ಸಲಹೆ**

**ನೀವು ಏಡ್ಸ್ ಬಂದಿದೆಯೋ ಇಲ್ಲವೋ ಎಂದು ಯೋಚನೆಗೀಡಾಗಿ ಮಾನಸಿಕ ನೆಮ್ಮದಿ ಹಾಳು ಮಾಡಿಕೊಳ್ಳದೇ ಮೊದಲು ರಕ್ತ ಪರೀಕ್ಷೆ ಮಾಡಿಸಿ ಹೆಚ್.ಐ.ವಿ. ವೈರಸ್‌ನ ಇರುವಿಕೆಯನ್ನು ತಿಳಿದುಕೊಳ್ಳಿ, ಅದೃಷ್ಟವಶಾತ್ ಹೆಚ್.ಐ.ವಿ. ಸೋಂಕು ನಿಮಗೆ ತಗುಲಿರದಿದ್ದರೆ ಇನ್ನು ಮುಂದಾದರೂ ವೇಶ್ಯೆಯ ಸಹವಾಸಕ್ಕೆ ಹೋಗದೆ ಸುರಕ್ಷಿತ ದಾಂಪತ್ಯ ಜೀವನ ನಡೆಸಿ. ಆಕಸ್ಮಾತ್ ಹೆಚ್.ಐ.ವಿ ಸೋಂಕಿಗೊಳಗಾಗಿದ್ದರೆ ನಿಮ್ಮ ಪತ್ನಿಗೆ ಅದನ್ನು ಹರಡದಂತೆ ನೋಡಿಕೊಳ್ಳಬಹುದಲ್ಲ.**

**ಸಧ್ಯದ ಪರಿಸ್ಥಿತಿಯಲ್ಲಿ ಏಡ್ಸ್‌ಗೆ ಯಾವುದೇ ಪರಿಣಾಮಕಾರಿ ಚಿಕಿತ್ಸೆಯಿಲ್ಲ. ಏಡ್ಸ್ (AIDS-ACQUIRED IMMUNO DEFFICIENCY SYNDROME)ನಿಂದ ನಮ್ಮ ದೇಹದಲ್ಲಿ ರೋಗ ನಿರೋಧಕ ವ್ಯವಸ್ಥೆಯ ರಕ್ಷಣಾ ಕೋಟೆ ಕುಸಿಯುತ್ತದೆ. ಇದೊಂದು ಸೋಂಕು ರೋಗ. ಈ ರೋಗಕ್ಕೆ ಕಾರಣ ಒಂದು ವೈರಸ್ (HIV - HUMAN IMMUNO DEFFICIENCY VIRUS). ಈ ವೈರಸ್ ದೇಹದೊಳಕ್ಕೆ ಪ್ರವೇಶಿಸಿದ ನಂತರ ಐದರಿಂದ ಹತ್ತು ವರ್ಷಗಳಲ್ಲಿ ಏಡ್ಸ್ ರೋಗದ ಲಕ್ಷಣಗಳು ಕಂಡು ಬರುತ್ತವೆ. ಏಡ್ಸ್‌ನ ಲಕ್ಷಣಗಳೆಂದರೆ ಸುಸ್ತು, ತೂಕ ಕಡಿಮೆಯಾಗುವುದು, ಹಸಿವೆಯಾಗದಿರುವುದು, ನಿರಂತರ ಭೇದಿ, ಅತಿ ಕೆಮ್ಮು ಮುಂತಾದವು ಕಂಡು ಬರುತ್ತವೆ. ಯಾವುದೇ ಸಣ್ಣ ಪುಟ್ಟ ಕಾಯಿಲೆ ಬಂದರೂ ಅದು ಬೇಗನೇ ವಾಸಿಯಾಗುವುದಿಲ್ಲ. ಆದ್ದರಿಂದ ರೋಗ ಬಂದ ಮೇಲೆ ಚಿಂತಿಸುವುದಕ್ಕಿಂತ ಬಾರದಂತೆ ನೋಡಿಕೊಳ್ಳುವುದೇ ಒಳ್ಳೆಯದು.**

## ವಯಸ್ಕರ ಸಂದೇಹ ಸಲಹೆ



### ಶೀಘ್ರ ಸ್ಖಲನ

*ನನ್ನ ವಯಸ್ಸು 21 ವರ್ಷ. ಒಂದೆರಡು ವರ್ಷಗಳಿಂದ ಹಸ್ತ ಮೈಥುನವನ್ನು ವಾರಕ್ಕೆ ಒಂದೆರಡು ಬಾರಿ ಮಾಡಿಕೊಳ್ಳುತ್ತಿದ್ದೆ. ಆದರೆ ಈಗ ನನಗೆ ಒಂದು ಸಮಸ್ಯೆಯಾಗಿದೆ. ಏನೆಂದರೆ ಲೈಂಗಿಕವಾಗಿ ಉದ್ರೇಕಗೊಂಡಾಗ ನನಗೆ ಕೇವಲ 30 ಸೆಕೆಂಡ್‌ಗಳಲ್ಲಿ ವೀರ್ಯ ಸ್ಖಲನವಾಗುವುದು. ಇದರಿಂದ ನನಗೆ ನಿರಾಶೆಯಾಗುತ್ತಿದೆ. ಹಸ್ತ ಮೈಥುನದಿಂದ ಈ ರೀತಿಯಾಗಿದೆಯೇ?*

*ಕೆಲವೊಮ್ಮೆ ಲೈಂಗಿಕವಾಗಿ ಉದ್ರೇಕಗೊಂಡಾಗ ಆ ಕ್ಷಣದಲ್ಲಿಯೇ ವೀರ್ಯ ಸ್ಖಲನವಾಗುವುದು. ಮತ್ತು ವೀರ್ಯವು 8- 10 ಹನಿಗಳಷ್ಟು ಇರುವುದು. ನನಗೆ ಸೂಕ್ತ ಸಲಹೆ ನೀಡುವಿರೆಂದು ತಿಳಿದಿರುತ್ತೇನೆ.*

**-ಹೆಸರು ಬೇಡ, ರಬಕವಿ.**

**ಸಲಹೆ**

**ಹಸ್ತ ಮೈಥುನದಿಂದ ಯಾವುದೇ ತೊಂದರೆಯಾಗುವುದಿಲ್ಲ. ನಿಮಗೆ ಮಾನಸಿಕ ಒತ್ತಡ ಹಾಗೂ ಆತಂಕಗಳಿಂದಾಗಿ ಶೀಘ್ರ ಸ್ಖಲನವಾಗುತ್ತಿರಬೇಕು. ನಿಮ್ಮ ಮನಸ್ಸನ್ನು ಯಾವುದಾದರೊಂದು ಆರೋಗ್ಯಕರ ಹವ್ಯಾಸದಲ್ಲಿ ತೊಡಗಿಸಿಕೊಂಡು ಮಾನಸಿಕ ನೆಮ್ಮದಿಯನ್ನು ಕಾಪಾಡಿಕೊಳ್ಳಿ, ಡಾ.ಸಿ.ಆರ್.ಚಂದ್ರಶೇಖರ್ ಅವರು ಬರೆದ 'ಲೈಂಗಿಕ ಅರಿವು-106 ಪ್ರಶ್ನೆಗಳು' ಪುಸ್ತಕ ಓದಿ.**

### ವಿವಾಹಕ್ಕೆ ಮುಂಚಿನ ಸಂದೇಹ

*ನಾನು 28 ವರ್ಷದ ಅವಿವಾಹಿತ ಯುವಕ. ನಾನೋರ್ವ ಹುಡುಗಿಯನ್ನು ಪ್ರೇಮಿಸುತ್ತಿರುವೆ. ಅವಳೊಂದಿಗೆ ಯಾವುದೇ ಅನೈತಿಕ ಸಂಬಂಧ ಹೊಂದಿಲ್ಲ. ಬರುವ ಡಿಸೆಂಬರ್ ಅಂತ್ಯದಲ್ಲಿ ನಾವು ಸಂಪ್ರದಾಯಬದ್ಧವಾಗಿಯೇ ವಿವಾಹವಾಗಲಿದ್ದೇವೆ. ನನ್ನ ಮದುವೆಗೂ ಮುಂಚೆ ನನಗೊಂದು ಸಲಹೆ ನಿಮ್ಮಿಂದ ಬೇಕು. ಅದೆಂದರೆ ನನ್ನ ಶಿಶ್ನಉದ್ರೇಕವಾದಾಗ ಸುಮಾರು 9 ಸೆಂ.ಮೀ ಇರುತ್ತದೆ. ನನಗೆ ಶಿಶ್ನವನ್ನು ಪೂರ್ಣವಾಗಿ 'ಯೋನಿ'ಯೊಳಗೆ ಕಳಿಸಬೇಕೆಂಬ ಆಸೆಯಿದೆ. ಇದು ಸಾಧ್ಯವಿದೆಯೇ?*

**-ಚೆಲುವ, ಬೆಂಗಳೂರು.**

**ಸಲಹೆ**

**ಎರಡರಿಂದ ಮೂರು ಅಂಗುಲದಷ್ಟು ಯೋನಿಯ ಒಳಭಾಗ ಮಾತ್ರ ಸ್ಪರ್ಶಕ್ಕೆ ಸಂವೇದನಾಪೂರ್ಣವಾಗಿರುತ್ತದೆ. ಆದ್ದರಿಂದ ಅಷ್ಟು ಮಾತ್ರ ಶಿಶ್ನ ಪ್ರವೇಶಿಸಿದರೂ ಸಾಕು.**

### ಮುಂಜಿಯಿಂದ ತೊಂದರೆಯೇ?

*ನಾನು 26 ವರ್ಷದ ಯುವತಿ. ನನ್ನ ಕಾಲೇಜು ಜೀವನದಲ್ಲಿ ಓರ್ವ ಹುಡುಗನನ್ನು ಪ್ರೀತಿಸುತ್ತಿರುವೆ. ಆತನು ನನ್ನೊಂದಿಗೆ ಅನ್ಯೋನ್ಯವಾಗಿದ್ದಾನೆ. ಆದರೆ ಮುಂದೆ ಮದುವೆಯಾಗಿ ದಾಂಪತ್ಯ ಜೀವನ ನಡೆಸುವ ಮುನ್ನ ನನಗೊಂದು ಸಮಸ್ಯೆ ಕಾಡುತ್ತಿದೆ. ನಾನು ಪ್ರೀತಿಸಿದ ಹುಡುಗ ಮುಸ್ಲಿಂ ಮತಸ್ಥ. ಆತನಿಗೆ ಶಾಸ್ತ್ರೋಕ್ತವಾಗಿ 'ಮುಂಜಿ' ಆಗಿರುತ್ತದೆ. ಆತನ*

'ಶಿಶ್ನ' ತುಂಡಾಗಿರುವುದರಿಂದ ನಾವು ಪರಸ್ಪರ ಕೂಡುವುದು ಹೇಗೆ? ಆತನ ಶಿಶ್ನದ ಮುಂಭಾಗ ಚೂಪಾಗಿಲ್ಲದ ಕಾರಣ ಅದು ನನ್ನ 'ಯೋನಿ' ಯೊಳಗೆ ಪ್ರವೇಶಿಸುವಾಗ ತೊಂದರೆಯಾಗಬಹುದು ಎಂಬುದು ನನ್ನ ಅನಿಸಿಕೆ. ಈ ಕುರಿತಾಗಿ ನಾನು ಯಾರನ್ನೂ ವಿಚಾರಿಸದೆ ನೇರವಾಗಿ ನಿಮ್ಮನ್ನೇ ಕೇಳುತ್ತಿರುವೆ. ನಿಮ್ಮ ಉತ್ತರದ ಮೇಲೆ ನನ್ನ ನಿರ್ಧಾರ ಅವಲಂಬಿಸಿದೆ.

**-ನಿಮ್ಮ ಸ್ನೇಹಿತೆ, ಶಿವಮೊಗ್ಗ.**

**ಸಲಹೆ**

**ಮುಂಜಿ ಮಾಡುವಾಗ ಶಿಶ್ನದ ಮುಂತೊಗಲನ್ನು ಕತ್ತರಿಸುತ್ತಾರೆ. ಅದರಿಂದ ಸಂಭೋಗಕ್ಕೆ ಯಾವುದೇ ತೊಂದರೆಯಿಲ್ಲ. ವೃಥಾ ಅನುಮಾನ ಬೇಡ.**

## ಸಲಿಂಗ ಕಾಮ

ನಾನು 24 ವರ್ಷದವನಾಗಿದ್ದು, ನನಗೆ ಸಲಿಂಗ ಕಾಮದಲ್ಲಿಯೇ ಆಲೋಚನೆಗಳು ಬರುತ್ತವೆ. ನನಗೆ ಕೆಟ್ಟ ಅಭ್ಯಾಸಗಳು ತುಂಬಾ ಕಡಿಮೆ. ಆದರೆ ಸ್ಫುರದ್ರೂಪಿ ಯುವಕರನ್ನು ಕಂಡಾಗ ನನಗೆ ಅವರನ್ನು ಸಂಭೋಗಿಸಬೇಕೆಂಬ ಭಾವನೆಗಳು ಬರುತ್ತವೆ.

ನಾನು 15-16 ವರ್ಷದವನಾಗಿರುವಾಗ ಸಹಪಾಠಿಗಳ ಒತ್ತಾಯಕ್ಕೆ ಮಣಿದು ಈ ಸಲಿಂಗ ರತಿಯಲ್ಲಿ ಪಾಲ್ಗೊಂಡೆ. ಆಗ ಇದು ತಪ್ಪೆಂದು ತಿಳಿಯಲಿಲ್ಲ. ಈಗ 23-24 ವರ್ಷದವನಾದಾಗಲೂ ಕೆಲವು ಸ್ನೇಹಿತರ ಒತ್ತಾಯಕ್ಕೆ ಮಣಿದು ಇದರಲ್ಲಿ ಭಾಗಿಯಾಗಬೇಕಾಯಿತು. ಈ ಸಲಿಂಗರತಿಯಿಂದ ಹೊರಬರಲು ನನಗೆ ಸಾಧ್ಯವೇ ಆಗುತ್ತಿಲ್ಲ. ರಾತ್ರಿ ನಿದ್ದೆಯಲ್ಲಿ ಯಾವುದೋ ಪುರುಷನೊಂದಿಗೆ ಸಂಭೋಗಿಸಿದಂತಾಗಿ ವೀರ್ಯ ಸ್ಖಲನವಾಗುತ್ತದೆ.

ನನಗೆ ದಯವಿಟ್ಟು ಈ ಕೆಟ್ಟಚಟದಿಂದ ಹೊರಬರುವ ರೀತಿಯನ್ನು ತಿಳಿಸಿರಿ. ನನಗೆ ವೈದ್ಯರ ಬಳಿಗೆ ಹೋಗಲು ತುಂಬಾ ಸಂಕೋಚವಾಗುತ್ತದೆ. ಆದ್ದರಿಂದ ನನಗೆ ನೀವೇ ಮಾರ್ಗದರ್ಶನ ಮಾಡಿ.

**- ಹೆಸರುಬೇಡ, ಕುಂದಾಪುರ.**

**ಸಲಹೆ**

**ಸಲಿಂಗ ಕಾಮದಿಂದ ಏಡ್ಸ್‌ನಂತಹ ಕಾಯಿಲೆಗಳು ಬರುತ್ತವೆ. ಅದರಿಂದ ದೂರವಿರುವುದೇ ಒಳ್ಳೆಯದು. ಆ ಬಗ್ಗೆ ಆಲೋಚನೆ ಮಾಡುವುದನ್ನು ಬಿಟ್ಟುಬಿಡಿ. ಒಂದು ಬಾರಿ ಮನೋವೈದ್ಯರನ್ನು ಭೇಟಿಯಾಗಿ ಅವರ ಸಲಹೆ, ಚಿಕಿತ್ಸೆಯಂತೆ ನಡೆದರೆ ನಿಮ್ಮ ಮಾನಸಿಕ ಅಸ್ವಸ್ಥತೆ ದೂರವಾಗಿ ಈ ಚಟದಿಂದ ಹೊರಬರಲು ಸಾಧ್ಯವಾಗುತ್ತದೆ.**

## 10,000 ಕೇಳಿದ ಲೈಂಗಿಕ ತಜ್ಞ!

ನನಗೀಗ 22 ವರ್ಷ. ನಾನು ಚಿಕ್ಕ ವಯಸ್ಸಿನಿಂದಲೇ ಅಂದರೆ 14 ವರ್ಷದವನಿದ್ದಾಗಿನಿಂದ ಲೈಂಗಿಕ ಸಂಪರ್ಕದಲ್ಲಿ ನಿರತನಾಗಿದ್ದೇನೆ. ಹೀಗೆ ಸತತವಾಗಿ 8 ವರ್ಷಗಳಿಂದ ಸಂಭೋಗ ಕ್ರಿಯೆ ನಡೆಸಿರುವುದರಿಂದ ನಾನು ತುಂಬಾ ದುರ್ಬಲನಾಗಿದ್ದೇನೆ. ಜತೆಗೆ ಎರಡು ದಿನಗಳಿಗೊಮ್ಮೆ ಸ್ವಪ್ನ ಸ್ಖಲನವಾಗುತ್ತದೆ. ಇದರಿಂದ ಬೇಸತ್ತು ಲೈಂಗಿಕ ತಜ್ಞರ ಬಳಿ ಹೋದೆ. "ನೀವು ತುಂಬಾ ದುರ್ಬಲರಾಗಿದ್ದೀರಿ, ಇದೇ ರೀತಿ ಮುಂದುವರಿದರೆ ನಪುಂಸಕತ್ವ ಬರುತ್ತದೆ. 10,000ರೂ. ಕೊಟ್ಟರೆ ಸರಿಪಡಿಸಬಹುದು" ಎಂದರು. ನನ್ನ ಬಳಿ ಅಷ್ಟೊಂದು ಹಣ ಇಲ್ಲದ್ದರಿಂದ ವಾಪಸ್ ಬಂದೆ. ನವತಾರುಣ್ಯ ಪಡೆಯುವ ಬಗ್ಗೆ ಪ್ರಕಟವಾದ ಜಾಹೀರಾತಿನಂತೆ ಆ ಮಾತ್ರೆಗಳನ್ನು ಸೇವಿಸಿದೆ. ಆದಾದ ನಂತರ ಹೊಟ್ಟೆ ಉರಿ, ಮಲ-ಮೂತ್ರ ದ್ವಾರದಲ್ಲಿ ಉರಿ ಕಾಣಿಸಿಕೊಂಡು ತುಂಬಾ ನೋವು ಅನುಭವಿಸುತ್ತಿದ್ದೇನೆ. ದಯವಿಟ್ಟು ಪರಿಹಾರ ಸೂಚಿಸಿ.

**-ಊರುಬೇಡ, ಹೆಸರು ಬೇಡ.**

**ಸಲಹೆ**

**ಸ್ವಪ್ನ ಸ್ಖಲನದಿಂದಾಗಲೀ ಅಥವಾ ಸಂಭೋಗ ಮಾಡುವುದರಿಂದಾಗಲೀ ಯಾರೂ ದುರ್ಬಲರಾಗುವುದಿಲ್ಲ. ನೀವು ಮನಸ್ಸಿನ ಆತಂಕ ಉದ್ವೇಗಗಳಿಂದಾಗಿ ಗೊಂದಲಕ್ಕೀಡಾಗಿದ್ದೀರಿ. ನಕಲಿ ವೈದ್ಯರ ಬಳಿ ಹೋದರೆ ಅವರು ಹಣ ಕೇಳದೇ ಇನ್ನೇನು ಮಾಡಿಯಾರು? ನೀವು ಪರೀಕ್ಷಿಸಿ ಕೊಳ್ಳ ಬೇಕೆನಿಸಿದರೆ ಚರ್ಮ ಹಾಗೂ ಲೈಂಗಿಕ ರೋಗಗಳ ತಜ್ಞರ (Skin & V.D. Specialist) ಬಳಿ ತಪಾಸಣೆ ಮಾಡಿಸಿಕೊಳ್ಳಿ, ಎಲ್ಲ ಆಸ್ಪತ್ರೆಗಳಲ್ಲಿಯೂ ಚರ್ಮ ಹಾಗೂ ಲೈಂಗಿಕ ರೋಗಗಳ ವಿಭಾಗ ಇದ್ದೇ ಇರುತ್ತದೆ. ನಿಮ್ಮ ದುರ್ಬಲತೆಗೆ ಬೇರೆ ಕಾರಣಗಳಿರಬಹುದು. ಅನವಶ್ಯಕವಾಗಿ ಚಿಂತಿಸದೇ ಪುಷ್ಟಿಕರ ಆಹಾರ ಸೇವಿಸಿ. ವ್ಯಾಯಾಮ ಮಾಡಿ.**

## ಹಸ್ತ ಮೈಥುನ ಬಿಡುವುದು ಹೇಗೆ?

ನಾನು 21 ವರ್ಷದ ಹುಡುಗ. ನಾನು ಸುಮಾರು 6 ವರ್ಷಗಳಿಂದಲೂ ಹಸ್ತ ಮೈಥುನವನ್ನು ಮಾಡುತ್ತಿರುತ್ತೇನೆ. ಈಗ ನಾನು ಮದುವೆಯಾಗಬೇಕೆಂದಿರುವೆ. ಆದರೆ ನನಗೆ ಒಂದು ರೀತಿಯ ಭಯ ಉಂಟಾಗಿದೆ. ಎಲ್ಲಿ ನಾನು ಅವಳಿಗೆ ಸುಖವನ್ನು ನೀಡಲಾಗುವುದಿಲ್ಲವೊ ಎಂದು. ನಾನು ಅವಳಿಗೆ ಮತ್ತು ಅವರ ಮನೆಯವರಿಗೆ ತಿಳಿಸಿ ಮದುವೆಯನ್ನು 2 ವರ್ಷ ಮುಂದೆ ಹಾಕಿಸಿರುತ್ತೇನೆ. ನಾನು ಹಸ್ತ ಮೈಥುನ ಮಾಡುವುದನ್ನು ಬಿಡಬೇಕು ಎಂದರೆ ಅದು ನನ್ನಿಂದ ಸಾಧ್ಯವಾಗುತ್ತಿಲ್ಲ. ಈ ಹಸ್ತಮೈಥುನವನ್ನು ಬಿಟ್ಟುಬಿಡುವ ಬಗ್ಗೆ ತಿಳಿಸಿ. ಇದು ನನ್ನ ತಲೆ ಕೊರೆಯುವ ಸಮಸ್ಯೆಯಾಗಿದೆ.

**-ಹೆಸರುಬೇಡ, ಆನೇಕಲ್.**

**ಸಲಹೆ**

**ಮದ್ಯಪಾನ, ಮಾದಕವಸ್ತುಗಳ ಸೇವನೆ, ದೀರ್ಘಕಾಲದ ಕೆಲವು ದೈಹಿಕ ಕಾಯಿಲೆಗಳು, ಉನ್ಮಾದ ಹಾಗೂ ಖಿನ್ನತೆಯಂತಹ ಮಾನಸಿಕ ಕಾಯಿಲೆಗಳಿಂದ ಲೈಂಗಿಕ ದುರ್ಬಲತೆ ಕಂಡುಬರುತ್ತದೆ. ಇದರ ಲಕ್ಷಣಗಳೆಂದರೆ ಲೈಂಗಿಕ ಬಯಕೆ ಕಡಿಮೆಯಾಗುವುದು, ಜನನಾಂಗ ಉದ್ರೇಕವಾಗದಿರುವುದು ಹಾಗೂ ಶೀಘ್ರ ವೀರ್ಯಸ್ಖಲನವಾಗುವುದು.**

**ಹಸ್ತ ಮೈಥುನ ಕೆಟ್ಟ ಚಟವಲ್ಲ. ಅದು ನಿಮ್ಮ ವಯಸ್ಸಿನ ಎಲ್ಲ ಹುಡುಗರಲ್ಲೂ ಸಹಜವಾಗಿರುವಂತಹದು. ಅದರಿಂದ ಯಾವುದೇ ವಿಧದ ತೊಂದರೆಯಾಗಲು ಸಾಧ್ಯವಿಲ್ಲ. ಅದನ್ನು ಬಿಡಬೇಕೆಂದರೆ ನೀವು ಬೇಗನೆ ಮದುವೆಯಾಗಿ. ಮದುವೆಯಾದ ಮೇಲೆ ಅದು ತನ್ನಿಂದ ತಾನೇ ಮರೆಯಾಗುತ್ತದೆ. ಹೆಂಡತಿಗೆ ಸುಖ ನೀಡಲು ಸಾಧ್ಯವಾಗುವುದಿಲ್ಲವೆನ್ನುವ ಭಯಬೇಡ. ಎಲ್ಲರಂತೆ ನೀವೂ ದಾಂಪತ್ಯ ಜೀವನ ನಡೆಸುವಿರಿ.**

ಕೌಟುಂಬಿಕ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ **'ಆಪ್ತ ಸಮಾಲೋಚನೆ'** ಹಾಗೂ ವೈದ್ಯಕೀಯ ಸಮಸ್ಯೆಗಳನ್ನು ಪರಿಹರಿಸುವ **"ವಯಸ್ಕರ ಸಂದೇಹ ಸಲಹೆ"** ಅಂಕಣಗಳನ್ನು ಪ್ರತಿ ತಿಂಗಳು ನಿಗದಿತ ಮಧ್ಯ ಪುಟಗಳಲ್ಲೇ ಪ್ರಕಟಿಸಲಾಗುವುದು. ಓದುಗರು ಈ ಪುಟಗಳಲ್ಲಿನ ಮಾಹಿತಿಯನ್ನು ಸಮಯಾನುಸಾರ ಬಳಸಿಕೊಳ್ಳಲು ಅನುವಾಗುವಂತೆ ಬಿಡಿಸಿಟ್ಟುಕೊಳ್ಳಬಹುದು.

**ನಿಮ್ಮ ಸಮಸ್ಯೆಗಳನ್ನು ಈ ವಿಳಾಸಕ್ಕೆ ಕಳಿಸಿ :**

ಸಂಪಾದಕರು, **ಬಿಸಿಲ ಬದುಕು,**

ಅಂಕುರ ಪ್ರಕಾಶನ ಅಂಚೆ ಪೆಟ್ಟಿಗೆ: 7951 ಬಸವೇಶ್ವರನಗರ, ಬೆಂಗಳೂರು - 560 079.

## ಜಾತಿಯ ತೊಡಕು

ನನಗೆ 18 ವರ್ಷ. ನನ್ನನ್ನು ಒಬ್ಬ ಹುಡುಗ ಕಳೆದ 2 ವರ್ಷಗಳಿಂದ ಮನಸಾರೆ ಪ್ರೀತಿಸುತ್ತಿದ್ದಾನೆ. ನಾನೂ ಅವನನ್ನು ಮನಸಾರೆ ಪ್ರೀತಿಸುತ್ತಿದ್ದೇನೆ. ಅವನಿಗೆ ಕೆಲಸ ಇದೆ. ತುಂಬಾ ಒಳ್ಳೆಯ ಹುಡುಗ. ಆದರೆ ನಮ್ಮಿಬ್ಬರ ಜಾತಿ ಬೇರೆ ಬೇರೆ. ನಾವು ಪ್ರೀತಿಸುತ್ತಿರುವುದು ನಮ್ಮ ಮನೆಯವರಿಗೆ ಗೊತ್ತಿಲ್ಲ. ನಮ್ಮ ಮದುವೆಗೆ ಅವರು ಒಪ್ಪಿಗೆ ಕೊಡುವುದಿಲ್ಲ. ನನಗೆ ಅವನನ್ನು ಬಿಟ್ಟು ಇರುವುದಕ್ಕೆ ಮನಸ್ಸಿಲ್ಲ. ನಾನು ಮದುವೆ ಆದರೆ ಅವನನ್ನೇ. ಅವನು ಕೂಡ ನೀನು ಮೋಸ ಮಾಡಿದರೆ ನಾನು ಜೀವಂತವಾಗಿ ಇರೋದಿಲ್ಲ ಅಂತ ಹೇಳುತ್ತಾನೆ. ದಯವಿಟ್ಟು ನಾವು ಮದುವೆಯಾಗುವುದು ಹೇಗೆ ಅಂತ ಸಲಹೆ ಕೊಡಿ.

**-ಹೆಸರು, ಊರು ಬೇಡ**

ಸಲಹೆ

**ನೀವಿಬ್ಬರೂ ಮನೆಯಲ್ಲಿ ಹಿರಿಯರಿಗೆ ವಿಷಯ ತಿಳಿಸಿ ಒಪ್ಪಿಗೆ ಪಡೆದು ಮದುವೆಯಾಗುವುದು ಒಳ್ಳೆಯದು. ಅವರು ಒಪ್ಪದಿದ್ದರೆ ಸರಳವಿವಾಹ ಮಾಡಿಕೊಂಡು ನಂತರ ರಿಜಿಸ್ಟರ್ ಮಾಡಿಸಿ. ಇಲ್ಲವೇ ಅಂತರ್ಜಾತಿ ವಿವಾಹಿತರ ವೇದಿಕೆ 'ಮಾನವ ಮಂಟಪ' ಪ್ರತಿವರ್ಷ ಅಂತರ್ಜಾತಿ ವಿವಾಹಗಳನ್ನು ನೆರವೇರಿಸಿಕೊಂಡು ಬರುತ್ತಿದೆ. ಅವರನ್ನು ಸಂಪರ್ಕಿಸಿ ನೀವು ಸಹಾಯ ಪಡೆದುಕೊಳ್ಳಬಹುದು.**

## ಒಮ್ಮೆ ಹಾಗೆ ಇನ್ನೊಮ್ಮೆ ಹೀಗೆ

ನಾನು ಒಂದು ವರ್ಷದಿಂದಲೂ ಒಬ್ಬ ಹುಡುಗಿಯನ್ನು ಪ್ರೀತಿಸುತ್ತಿದ್ದೇನೆ. ಆ ಹುಡುಗಿಯೂ ಕೂಡಾ ನನ್ನನ್ನು ಪ್ರೀತಿಸುತ್ತಿದ್ದಾಳೆ. ನಾನು ಆ ಹುಡುಗಿಯನ್ನು ಮದುವೆಯಾಗಬೇಕೆಂದು ನಿರ್ಧಾರ ಮಾಡಿದ್ದೇನೆ. ನಮ್ಮ ಮನೆಯಲ್ಲಿ ಒಪ್ಪಿಗೆ ಇದೆ. ಆ ಹುಡುಗಿ ಮನೆಯಲ್ಲಿ ಒಪ್ಪಿಗೆ ಇಲ್ಲ. ಆ ಹುಡುಗಿಯ ವಯಸ್ಸು 17. ನನ್ನ ವಯಸ್ಸು 19. ಆಕೆ ಒಂದು ಸಾರಿ ನಿನ್ನನ್ನು ಮದುವೆ ಆಗುತ್ತೇನೆ ಎನ್ನುತ್ತಾಳೆ. ಇನ್ನೊಂದು ಸಾರಿ ನನ್ನನ್ನು ಮಾತನಾಡಿಸಬೇಡ ಎನ್ನುತ್ತಾಳೆ. ಕೆಲವೊಮ್ಮೆ ನೀನು ನನ್ನ ಕೈ ಬಿಟ್ಟರೆ ನಾನು ವಿಷ ಕುಡಿಯುತ್ತೇನೆ ಎನ್ನುತ್ತಾಳೆ. ನನಗೆ ಏನು ಮಾಡಬೇಕೆಂದು ತಿಳೀತಾ ಇಲ್ಲ.

**-ವಿರುಪಾಕ್ಷ ಡ್ರೈವರ, ಊರು ಬೇಡ**

ಸಲಹೆ

**ನಿಮ್ಮಿಬ್ಬರದೂ ಮದುವೆಗೆ ಇನ್ನೂ ಅಪ್ರಾಪ್ತ ವಯಸ್ಸು. ಈ ವಯಸ್ಸಿನಲ್ಲಿ ಪರಸ್ಪರ ಆಕರ್ಷಣೆ ಇರುವುದು ಸಹಜ. ಆ ಹುಡುಗಿಗೆ 18 ವರ್ಷ ಹಾಗೂ ನಿಮಗೆ 21 ವರ್ಷ ಆಗುವವರೆಗೂ ಕಾದು ನಂತರ ಹಿರಿಯರ ಒಪ್ಪಿಗೆ ಪಡೆದು ಮದುವೆಯಾಗಿ.**

## ಆಕೆಯ ಆ ಪತ್ರ

ನಾನು 20 ವರ್ಷದ ಯುವಕ. ಸುಮಾರು 1 ವರ್ಷದ ಹಿಂದೆ ನಮ್ಮ ಅತ್ತೆ ಮಗಳಿಗೆ ಒಂದು ಕಾರ್ಡನ್ನು ನೀಡಿದೆ. ಅದನ್ನಾಕೆ ಇಟ್ಟುಕೊಂಡಳು. ಆ ಕಾರ್ಡ್ ಆಕೆ ನನ್ನನ್ನು ಪ್ರೀತಿಸುತ್ತಿರುವುದನ್ನು ಸೂಚಿಸುತ್ತಿತ್ತು. ಅದಕ್ಕೆ ಬದಲಾಗಿ ಆಕೆ ನನ್ನನ್ನು ನಂಬಿ ಆ ಕಾರ್ಡನ್ನು ಇಟ್ಟುಕೊಂಡಿರುವುದಾಗಿ ಲೆಟರ್ ಬರೆದು ಕೊಟ್ಟಳು. ಅದನ್ನು ನಾನು ಓದಿ ಹರಿದುಹಾಕದೆ ನನ್ನ ಪರ್ಸ್‌ನಲ್ಲಿ ಇಟ್ಟುಕೊಂಡೆ.

ಆ ಲೆಟರನ್ನು ನನ್ನ ದೊಡ್ಡಪ್ಪನ ಮಗ ಕದ್ದು xerox ಮಾಡಿಟ್ಟುಕೊಂಡಿರುವುದು ಬೆಳಕಿಗೆ ಬಂದಿತು. ಅವರೀರ್ವರ ಮಧ್ಯೆ ಆಕರ್ಷಣೆಯಿರುವುದನ್ನು ಸೂಕ್ಷ್ಮವಾಗಿ ಪರಿಶೀಲಿಸಿರುತ್ತೇನೆ ಮತ್ತು ಈ ವಿಷಯವನ್ನು ಆಕೆಯ ಅಣ್ಣನಿಗೆ ತಿಳಿಸಿ, ಆಕೆ ತಪ್ಪು ದಾರಿ ಹಿಡಿಯದಂತೆ ನೋಡುತ್ತಿರಲೂ ಎಚ್ಚರಿಸಿದ್ದೇನೆ. ಆಕೆ ಈಗ ತಾನೇ ಎಸ್.ಎಸ್.ಎಲ್.ಸಿ. ಓದುತ್ತಿರುವ ಕಾರಣ ಪರೀಕ್ಷೆಯ ನಂತರದ ದಿನಗಳಲ್ಲಿ ಆಕೆಯನ್ನು ನೇರವಾಗಿ ವಿಚಾರಿಸಬೇಕೆಂದಿದ್ದೇನೆ.

ಮೊದಲು ನೀಡಿದ ಕಾರ್ಡನ್ನು ವಾಪಸ್ ಕೇಳಿದರೆ ಕೊಡುತ್ತಿಲ್ಲ. ಆಕೆ ನಿಜವಾಗಿ ಪ್ರೀತಿಸುತ್ತಿರುವಳೋ, ಇಲ್ಲವೋ ತಿಳಿಯದು. (ನಮ್ಮದು ಅವಿಭಕ್ತ ಕುಟುಂಬ) ಇಂಥ ಪರಿಸ್ಥಿತಿಯಲ್ಲಿ ನಾನು ಏನು ಮಾಡಬೇಕೆಂದು ದಯವಿಟ್ಟು ಸಲಹೆ ನೀಡಿ.

**-ಅಭಿಮಾನಿ, ಸಿರ್ಸಿ**

ಸಲಹೆ

**ನೀವು ಅನಾವಶ್ಯಕವಾಗಿ ಚಿಂತಿಸುತ್ತಿರುವಿರಿ. ಈ ವಯಸ್ಸಿನಲ್ಲಿ ಪ್ರೀತಿಗಿಂತ ಆಕರ್ಷಣೆಯೇ ಹೆಚ್ಚಾಗಿರುತ್ತದೆ. ಅವಳ ಓದು ಮುಗಿಯುವವರೆಗೂ ಕಾದು ನಂತರ ಆಕೆಯ ಸ್ಪಷ್ಟ ಅಭಿಪ್ರಾಯ ತಿಳಿದುಕೊಳ್ಳಿ, ಅತ್ತೆಯ ಮಗಳೇ ಆಗಿರುವುದರಿಂದ ಮದುವೆಗೆ ಅಡ್ಡಿ ಏನೂ ಬರಲಾರದು.**

## ದಪ್ಪಗಾಗುವ ಔಷಧಿ?

ನನ್ನ ಸಮಸ್ಯೆ ಏನೆಂದರೆ, ನಾನು ತುಂಬಾ ತೆಳ್ಳಗಿದ್ದೇನೆ. ನಾನು ಆರ್ಮಿ ಸೇರಬೇಕೆಂದಿದ್ದೇನೆ. ಮುಂದಿನ ಫೆಬ್ರವರಿಯಲ್ಲಿ ಸೇರಬೇಕು. ಆದರೆ ತುಂಬಾ ತೆಳ್ಳಗಿರುವ ಕಾರಣ ಇದನ್ನು ನಾನು ಸೇರಲು ಸಾಧ್ಯವಾಗಿಲ್ಲ? ಉತ್ತಮವಾದ ಊಟ ಪಡೆಯಲು ನನ್ನಿಂದ ಸಾಧ್ಯವಿಲ್ಲ. ಏಕೆಂದರೆ ನಾನು ತುಂಬಾ ಬಡವ. ದಯವಿಟ್ಟು ಯಾವುದಾದರೂ ಔಷಧಿ ಅಥವಾ ಚುಚ್ಚುಮದ್ದು ಇದ್ದರೆ ತಿಳಿಸಿ. (ಕೇವಲ 6 ತಿಂಗಳೊಳಗೆ ಮಧ್ಯಮ ಗಾತ್ರವಾಗಬೇಕು).

**- ರಾಜು, ಆರ್.ಟಿ.ನಗರ.**

ಸಲಹೆ

**ನೀವು ನಿಮ್ಮ ವಯಸ್ಸು, ಎತ್ತರ ಹಾಗೂ ತೂಕ ಎಷ್ಟಿದೆಯೆಂದು ತಿಳಿಸಿಲ್ಲ. ದಪ್ಪಗಾಗಲು ಕೆಲವು ಹಾರ್ಮೋನಿನ ಚುಚ್ಚು ಮದ್ದುಗಳಿವೆ. ನಿಮ್ಮನ್ನು ಪರೀಕ್ಷಿಸಿ ಅದನ್ನು ನಿಮಗೆ ನೀಡಬಹುದೇ ಇಲ್ಲವೇ ಎಂಬುದನ್ನು ವೈದ್ಯರು ನಿರ್ಧರಿಸಬೇಕಾಗುತ್ತದೆ. ಆದ್ದರಿಂದ ವೈದ್ಯರ ಸಲಹೆಯ ಮೇರೆಗೆ ತೆಗೆದುಕೊಳ್ಳಿ, ಸುಲಭವಾದುದೆಂದರೆ ಪ್ರತಿ ದಿನ ಕಡಲೆಕಾಯಿ (ಶೇಂಗಾ) ಹಾಗೂ ಬಾಳೆಹಣ್ಣು ಸೇವನೆ ಮಾಡಬೇಕು. ಇದರಿಂದ ಸ್ವಲ್ಪಮಟ್ಟಿಗೆ ದಪ್ಪಗಾಗುವಿರಿ.**

## ಬೇರೆ ಮದುವೆಯಾಗಬಹುದೇ?

ನನಗೆ 12 ವರ್ಷವಿರಬೇಕಾದರೆ, ನನಗೆ ಇಷ್ಟವಿಲ್ಲದಿದ್ದರೂ ಬಲವಂತದಿಂದ ಮದುವೆ ಮಾಡಿದರು. ಅವನು ನನ್ನ ಅತ್ತೆಯ ಮಗನೆ ಆಗಿದ್ದ ಮತ್ತು ನನ್ನನ್ನು ಮದುವೆಯಾಗುವ ಮೊದಲೇ ಬೇರೆ ಹುಡುಗಿಯನ್ನು ಧರ್ಮಸ್ಥಳದಲ್ಲಿ ಮದುವೆಯಾಗಿದ್ದ. ಆದ್ದರಿಂದ ಅವನಿಗೆ ನನ್ನ ಮೇಲೆ ಪ್ರೀತಿ ಇರಲಿಲ್ಲ. ಚಿಕ್ಕಹುಡುಗಿ ಎಂದು ನನ್ನನ್ನು ಒಂದು ಭೋಗದ ವಸ್ತುವಾಗಿ ಉಪಯೋಗಿಸಿಕೊಂಡರು. ನನಗೆ ಊಟ ಮತ್ತು ಬಟ್ಟೆ ಕೊಡಬೇಕು ಅನ್ನೋ ಚಿಂತೆಯೂ ಇರಲಿಲ್ಲ. ಅವರ ಮನೆಯವರೆಲ್ಲಾ ನನ್ನನ್ನು ಮನೆಯ ಆಳಿನಂತೆ ಉಪಯೋಗಿಸಿಕೊಂಡು ಹಿಂಸೆ ಕೊಡುತ್ತಿದ್ದರು. ಆಗ ನಮ್ಮ ತಂದೆ ತಾಯಿ ನನ್ನನ್ನು ತವರು ಮನೆಗೆ ಕರೆದುಕೊಂಡು ಬಂದರು. ನಾನು ಒಬ್ಬಳೆ ಮಗಳಾಗಿದ್ದೆ ಮತ್ತು ತುಂಬ ಬಡವರಾಗಿದ್ದೆವು. ಆ ಬಡತನದಲ್ಲಿ ನನ್ನ ತಾಯಿ ತಂದೆ ಕೂಲಿ ಮಾಡಿ ಓದಿಸಿದರು. ನನ್ನ ಶಿಕ್ಷಣ ಮುಗಿಯುವ ಹೊತ್ತಿಗೆ ತಂದೆ ತಾಯಿ ನನ್ನದೆ ಚಿಂತೆಯಿಂದ ಕಾಯಿಲೆಯಾಗಿ ಸತ್ತು ಹೋದರು. ಈಗ ನಾನು ಅನಾಥಳಾಗಿದ್ದೇನೆ. ನಾನು ಈಗ ರಾಜ್ಯ ಸರಕಾರಿ ನೌಕರಳಾಗಿದ್ದೇನೆ. ನನಗೆ ತುಂಬಾ ಒಂಟಿತನ ಕಾಡುತ್ತಲಿದೆ. ನನಗೆ ಬಾಲ್ಯವಿವಾಹವಾಗಿರುವುದನ್ನು ಶಿಕ್ಷಣದಲ್ಲಾಗಲಿ ನೌಕರಿಯಲ್ಲಾಗಲಿ ತೋರಿಸಿಲ್ಲ. ಅವಿವಾಹಿತೆ ಎಂದು ತೋರಿಸಿದ್ದೇನೆ. ನನಗೆ ಈಗ 27 ವರ್ಷ. ನಾನು ಒಂಟಿಯಾಗಿರುವುದರಿಂದ ಈಗ ಇನ್ನೊಂದು ಮದುವೆಯಾಗಬಹುದೇ? ಬಾಲ್ಯವಿವಾಹವಾದಾಗ ನನಗೆ 12 ವರ್ಷ, ಅವನಿಗೆ 23 ವರ್ಷ ಆಗಿತ್ತು. ನಾನು

*ಅವನನ್ನು ನೋಡಿ 13 ವರ್ಷ ಆಯಿತು. ಅವನಿಗೂ ನನಗೂ ಯಾವುದೇ ಸಂಬಂಧವಿಲ್ಲ. ಅವನು ಎಲ್ಲಿದ್ದಾನೆ ಅಂತಾನೂ ತಿಳಿದಿಲ್ಲ. ಅದನ್ನು ತಿಳಿದುಕೊಳ್ಳುವ ಆಸಕ್ತಿಯು ನನಗಿಲ್ಲ. ಮತ್ತೆ ನಾನು ಇನ್ನೊಂದು ಮದುವೆಯಾದರೆ ನನ್ನ ಕೆಲಸಕ್ಕೇನಾದರೂ ತೊಂದರೆಯಾಗುತ್ತದೆಯೇ ತಿಳಿಸಿ.*

**-ಹೆಸರು ಬೇಡ, ಊರುಬೇಡ.**

**ಸಲಹೆ**

**ನೀವು ಜೀವನದಲ್ಲಿ ಬಹಳಷ್ಟು ಕಷ್ಟ, ನೋವು, ಹಿಂಸೆ ಅನುಭವಿಸಿದರೂ ತಂದೆ ತಾಯಿಯ ಬೆಂಬಲದಿಂದ ಬಡತನದಲ್ಲಿಯೂ ಚೆನ್ನಾಗಿ ಓದಿ ಸರ್ಕಾರಿ ನೌಕರಿಯನ್ನು ಪಡೆದು ಸ್ವಾವಲಂಬಿಗಳಾಗಿರುವುದು ನಿಜಕ್ಕೂ ಪ್ರಶಂಸನೀಯ. ಬಾಲ್ಯ ವಿವಾಹವು ಕಾನೂನಿನ ದೃಷ್ಟಿಯಲ್ಲಿ ಊರ್ಜಿತವಲ್ಲ ಹಾಗೂ ಅದು ಅಪರಾಧವೂ ಹೌದು. ಆದ್ದರಿಂದ ನೀವು ಕಳೆದುಹೋದ ದಿನಗಳ ಬಗ್ಗೆ ಚಿಂತಿಸದೇ ಧೈರ್ಯವಾಗಿ ಮದುವೆಯಾಗಿ ಹೊಸಬದುಕಿಗೆ ಹೆಜ್ಜೆಯಿಡಿ. ಚನ್ನದಂತಹ ಭವಿಷ್ಯ ನಿಮ್ಮ ಮುಂದಿದೆ. ನಿಮ್ಮ ಭಾವೀ ಪತಿಯಾಗುವವರಿಗೆ ಬಾಲ್ಯ ವಿವಾಹದ ವಿಷಯ ಮೊದಲೇ ತಿಳಿಸಿದರೆ ಒಳ್ಳೆಯದು. ಆದಷ್ಟು ಬೇಗ ಮದುವೆಯಾಗಿ ಒಂಟಿತನವನ್ನು ನೀಗಿಸಿಕೊಳ್ಳಿ,**

## ಹೀಗೊಂದು ಪ್ರೀತಿ

*ಒಬ್ಬ ಮುಗ್ಧ ಹುಡುಗಿ ನನ್ನನ್ನು ಮೂರು ವರ್ಷದಿಂದ ಪ್ರೀತಿಸುತ್ತಿದ್ದಾಳೆ. ನಾನೂ ಅವಳನ್ನು ತುಂಬಾ ಪ್ರೀತಿಸುತ್ತೇನೆ. ಆದರೆ ಸೋದರ ಮಾವನ ಜೊತೆಯಲ್ಲಿ ಅವಳ ಮದುವೆಯಾಗಿದೆ. ಈಗ ಅವಳು 10ನೇ ವರ್ಗದಲ್ಲಿ ಓದುತ್ತಾ ಇದ್ದಾಳೆ. ನಾನು ಈ ವರ್ಷ ಬಿ.ಎಸ್ಸಿ 3ನೇ ವರ್ಷ. ಅವಳ ಮದುವೆ ಆಗಿ ಏಳು ತಿಂಗಳು ಆಯಿತು. ಅವಳು ನನ್ನ ನೋಡದೆ ಒಂದು ದಿನವನ್ನು ಕಳೆಯಲು ಆಗುವುದಿಲ್ಲ. ನನಗೂ ಅವಳ ಮುಖ ನೋಡದೆ ಇದ್ದರೆ ಊಟ, ತಿಂಡಿ ಯಾವುದೂ ಹಿಡಿಸಲ್ಲ.*

*ಒಂದು ದಿನ ನಿಮ್ಮ ಮಾವನ ಜೊತೆಯಲ್ಲಿ ಸುಖವಾಗಿ ನಿನ್ನ ಮುಂದಿನ ಜೀವನ ನಡೆಸು ಎಂದು ಗಟ್ಟಿ ಮನಸು ಮಾಡಿ ಹೇಳಿದೆ. ಅದಕ್ಕೆ ಅವಳು ನಿದ್ರೆ ಮಾತ್ರೆ ತೆಗೆದುಕೊಂಡಿದ್ದಳು. ಈ ರೀತಿಯಾಗಿ ನಮ್ಮ ಪ್ರೀತಿ ನಡೆದಿದೆ. ಮುಂದೆ ಏನು ಮಾಡಲಿ ತಿಳಿಯುತ್ತಿಲ್ಲ.*

**- ಹೆಸರು, ಊರುಬೇಡ.**

**ಸಲಹೆ**

**ನೀವು ಪ್ರೀತಿಸುವ ಹುಡುಗಿಗೆ ಈಗಾಗಲೇ ಮದುವೆಯಾಗಿರುವುದರಿಂದ ಅವಳ ಬಗ್ಗೆ ನೀವು ಇನ್ನೂ ಯೋಚಿಸುತ್ತಿರುವುದು ಎಳ್ಳಷ್ಟೂ ಸರಿಯಲ್ಲ. ಅದು ನೈತಿಕತೆಯಲ್ಲ. ನೀವು ಅವಳಿಂದ ದೂರವಾದರೆ ಇಬ್ಬರಿಗೂ ಕ್ಷೇಮ. ಸಧ್ಯ ನೀವು ವಿದ್ಯಾಭ್ಯಾಸದ ಕಡೆಗೆ ಗಮನಕೊಡಿ.**

## ಪ್ರೀತಿಸಲೋ? ಬೇಡವೋ?

*ನಾನು 25 ವರ್ಷದ ಯುವಕ. 8ನೇ ತರಗತಿ ಓದಿದ್ದೇನೆ. ದೂರದ ಸಂಬಂಧಿಕರೊಬ್ಬರು ನಮ್ಮೂರಿನಲ್ಲಿದ್ದಾರೆ. ನಾನು ಅವರ ಮಗಳನ್ನು ಪ್ರೀತಿಸುತ್ತಿದ್ದೇನೆ. ಅವಳು ಪಿ.ಯು.ಸಿ. 2ನೇ ವರ್ಷ ಓದುತ್ತಿದ್ದಾಳೆ. ಅವರು ಸಾಹುಕಾರರು. ನಾನು ಬಡವ; ವ್ಯವಸಾಯಗಾರ. ಈಗ ಗೊತ್ತಿದ್ದಂತೆ ವ್ಯವಸಾಯ ಮಾಡುವವರಿಗೆ ಬೆಲೆ ಇಲ್ಲ. ಅವಳೂ ನೋಡುತ್ತಾಳೆ, ನಾನೂ ನೋಡುತ್ತೇನೆ. ಮಾತನಾಡಿಸುವ ಧೈರ್ಯ ಬರುತ್ತಿಲ್ಲ. ನಾನೇ ಮುಂದುವರಿದರೆ ಎಲ್ಲಿ ರಂಪ ಆಗುತ್ತದೋ ಎಂಬ ಭಯ. ನಾನು ಅವಳನ್ನು ಪ್ರೀತಿಸಲೋ ಬೇಡವೋ?*

**- ಹೆಸರುಬೇಡ, ಊರುಬೇಡ.**

**ಸಲಹೆ**

**ಪ್ರೀತಿಸುವುದಕ್ಕಾಗಲೀ, ಮದುವೆಯಾಗುವುದಕ್ಕಾಗಲೀ ಬಡತನ, ಶ್ರೀಮಂತಿಕೆ, ವಿದ್ಯೆ, ವೃತ್ತಿ (ವ್ಯವಸಾಯ) ಯಾವುದೂ ಅಡ್ಡಿಯಾಗುವುದಿಲ್ಲ. ಧೈರ್ಯವಾಗಿ ಅವಳೆದುರು ನಿಮ್ಮ ಪ್ರೀತಿಯನ್ನು ವ್ಯಕ್ತಪಡಿಸಿ. ಅವಳಿಗೂ ನಿಮ್ಮ ಮೇಲೆ ಪ್ರೀತಿಯಿದ್ದರೆ ಮನೆಯಲ್ಲಿ ಹಿರಿಯರಿಗೆ ತಿಳಿಸಿ ಮದುವೆಯಾಗಿ.**

## ಫೇಲಾದರೆ ಹುಚ್ಚು ಹಿಡಿಯುವುದೇ?

*ನಾನು ಈ ವರ್ಷ 10ನೇ ತರಗತಿಯಲ್ಲಿ ಓದುತ್ತಿದ್ದೇನೆ. ಓದುವುದು ತುಂಬಾ ಕಷ್ಟವಾಗಿದೆ. ನಾನು ಎಷ್ಟು ಓದಿದರೂ ನೆನಪು ಉಳಿಯುವುದಿಲ್ಲ. ಇದರಿಂದ ಎಲ್ಲಿ ಫೇಲಾಗುತ್ತೇನೊ ಎಂಬ ಭಯ ನನ್ನನ್ನು ಕಾಡುತ್ತಿದೆ.*

*ಒಂದು ವೇಳೆ ನಾನು ಫೇಲಾದರೆ, ನಮ್ಮ ಮನೆಯಲ್ಲಿ ಮದುವೆ ಮಾಡಲು ಸಿದ್ಧರಾಗಿದ್ದಾರೆ. ಆದರೆ ನನಗೆ ಮದುವೆಯಾಗಲು ಇಷ್ಟವಿಲ್ಲ.*

*ನನಗೆ ನನ್ನ ಕಾಲ ಮೇಲೆ ನಿಂತುಕೊಳ್ಳಬೇಕೆಂಬ ಆಸೆ.*

*ಇನ್ನೊಂದು ವಿಷಯ. ನಾನು ಈ ವರ್ಷ ಫೇಲಾದರೆ ಎಲ್ಲಿ ಹುಚ್ಚು ಹಿಡಿಯುತ್ತದೆಯೋ ಅನಿಸುತ್ತಿದೆ. ನಿಜವಾಗಿಯೂ ನಾನು ಫೇಲಾದರೆ, ಹುಚ್ಚಿ ಆಗುವುದು ಗ್ಯಾರಂಟಿ ಅನಿಸುತ್ತಿದೆ. ಇದಕ್ಕೆ ನಿಮ್ಮ ಪರಿಹಾರವೇನು, ತಿಳಿಸಿ.*

**- ನಿಮ್ಮ ವಿಶ್ವಾಸಿ, ಊರುಬೇಡ.**

**ಸಲಹೆ**

**ನಿಮಗೆ ಅಧ್ಯಯನದ ಕ್ರಮ ತಿಳಿದಿಲ್ಲ. ಕಳೆದ ಸಂಚಿಕೆಯಲ್ಲಿ ಅದರ ಬಗ್ಗೆ ವಿವರಣೆ ನೀಡಿದ್ದೆ. ಈಗಲೂ ತಿಳಿಸುತ್ತೇನೆ. ಒಂದೇ ಸಮನೆ ಗಂಟೆಗಟ್ಟಲೆ ಓದುವುದರಿಂದ ಖಂಡಿತ ನೆನಪಿನಲ್ಲಿ ಉಳಿಯುವುದಿಲ್ಲ. 45 ನಿಮಿಷಗಳ ಕಾಲ ಓದಿ ನಂತರ ಓದಿದ್ದನ್ನು ಮನನ ಮಾಡಿಕೊಳ್ಳಬೇಕು. ಮನನದ ನಂತರ ಬರೆಯಬೇಕು. ಇಲ್ಲವೇ ಬೇರೆಯವರೊಡನೆ ಚರ್ಚಿಸಬೇಕು. ಆಗಲೇ ನಿಮಗೆ ಓದಿದ್ದೆಲ್ಲ ಜೀರ್ಣವಾಗುತ್ತದೆ. ಇಂದಿನಿಂದಲೇ ಈ ರೀತಿ ಓದುವ ಅಭ್ಯಾಸ ಶುರು ಮಾಡಿ. ಪರೀಕ್ಷೆಗೆ ಇನ್ನೂ ಸಾಕಷ್ಟು ಸಮಯವಿದೆ. ಆತ್ಮವಿಶ್ವಾಸದಿಂದ ಓದಿದರೆ ಯಶಸ್ಸು ನಿಮ್ಮದಾಗುತ್ತದೆ. ಫೇಲಾಗುವೆನೆನ್ನುವ ಭಯವನ್ನು ಮೊದಲು ನಿಮ್ಮ ಮನಸ್ಸಿನಿಂದ ತೊಡೆದುಹಾಕಿ. ನಿಮಗೆ ಪರೀಕ್ಷೆಯಲ್ಲಿ ಯಶಸ್ಸು ದೊರೆಯಲಿ ಎಂದು ನನ್ನ ಹಾರೈಕೆ.**

## ಎರಡು ಆತ್ಮಹತ್ಯೆಗಳ ನಡುವೆ....

*ನಾನು ಒಂದು ಹುಡುಗಿಯನ್ನು ಪ್ರೀತಿ ಮಾಡಿದ್ದೇನೆ. ಈಗ ಆ ಹುಡುಗಿಯು ನನ್ನನ್ನು ಮದುವೆ ಮಾಡಿಕೋ ಅನ್ನುತ್ತಾಳೆ. ನನ್ನ ಮನಸ್ಸು ಸಹ ಅವಳನ್ನೇ ಮಾಡಿಕೊಳ್ಳಬೇಕೆನಿಸುತ್ತೆ. ಆದರೆ ನಮ್ಮ ಮನೆಯಲ್ಲಿ ಮದುವೆ ಮಾಡಿಕೊಂಡರೆ ಮಾವನ ಮಗಳನ್ನೇ ಮದುವೆ ಮಾಡಿಕೊಳ್ಳಬೇಕೆಂದು ಒತ್ತಾಯಿಸುತ್ತಿದ್ದಾರೆ. ಬೇರೆ ಮದುವೆ ಮಾಡಿಕೊಂಡರೆ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎನ್ನುತ್ತಾರೆ ನಮ್ಮ ತಾಯಿ. ನಾನು ಪ್ರೀತಿಸಿದ ಹುಡುಗಿ ಹೇಳುತ್ತಾಳೆ: ಮದುವೆ ಆದರೆ ನಿನ್ನನ್ನೇ, ಇಲ್ಲವಾದರೆ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎಂದು. ಇದೇ ಮಾತನ್ನೇ ಪದೇ ಪದೇ ಹೇಳುತ್ತಾಳೆ. ಹಾಗಾದರೆ ನಾನು ಏನು ಮಾಡಲಿ?*

**- ಹೆಸರು ಬೇಡ, ಕಾಳಗಿ.**

**ಸಲಹೆ**

**ನಿಮ್ಮ ತಾಯಿಗೆ ನೀವು ಪ್ರೀತಿಸಿದ ಹುಡುಗಿಯ ಬಗ್ಗೆ ತಿಳಿಸಿ ಅವರ ಮನಸ್ಸನ್ನು ಒಲಿಸಿಕೊಳ್ಳಿ, ತಾಯಿಯಾದವರು ಮಗನ ಜೀವನ ಚೆನ್ನಾಗಿರಬೇಕೆಂದು ಬಯಸುವುದು ಸಹಜ. ನೀವು ಯಾರೊಡನೆ ಮದುವೆಯಾದರೆ ಸಂತೋಷವಾಗಿರುತ್ತೀರೆಂದು ತಿಳಿದರೆ ಅವರು ಖಂಡಿತ ಒಪ್ಪಿಗೆ ಕೊಡುವರು. ಆದಷ್ಟು ಬೇಗನೆ ಅವರನ್ನು ಒಪ್ಪಿಸಿ ಮದುವೆಯಾಗಿ ಎಂದು ಹಾರೈಸುವೆ.**

# ಯಶಸ್ಸು ಎಂಬ ಪಂಚಾಮೃತ!

**ದೇ**ವರು ಪ್ರತ್ಯಕ್ಷವಾದಾಗ (?!) ನಾವು ಹಿರಿಯರಿಗೆ ನಮಸ್ಕರಿಸಿದಾಗ ಪಡೆಯಬಹುದಾದ ಆಶೀರ್ವಾದಗಳಲ್ಲಿ 'ಯಶಸ್ವೀ ಭವ' ವೂ ಒಂದು. ಹರಕೆಗಳು, ಶುಭೇಚ್ಛೆಗಳು ನಮಗೆ ಮಾನಸಿಕ ಶಕ್ತಿ-ಸ್ಫೂರ್ತಿಗಳನ್ನು ನೀಡುವುದೇನೋ ನಿಜ. ಆದರೆ ಕನಸಿನಲ್ಲಿ ತಿಂದ ಮಂಡಿಗೆಯಿಂದ ಹೊಟ್ಟೆ ತುಂಬದಿರುವಂತೆಯೇ ಕೇವಲ ಆಶೀರ್ವಾದದ ಬಂಡವಾಳದಿಂದ ಜೀವನದಲ್ಲಿ ಯಶಸ್ವಿಯಾಗ ಬಹುದೆಂದು ಭಾವಿಸುವ ತಪ್ಪನ್ನು ನಾವು ಎಸಗಬಾರದು.

ಹಾಗಾದರೆ ಜೀವನ ಸಾಫಲ್ಯವೆಂದರೇನು? ಅದಕ್ಕೆ ನಮ್ಮ ನಿಯಂತ್ರಣಕ್ಕೆ ಒಳಗಾದ ಮತ್ತು ಹೊರತಾದ ಕಾರಣಗಳಿವೆ. ನಮ್ಮ ಶರೀರ ಮತ್ತು ಬುದ್ಧಿ ಮತ್ತೆ ಶ್ರದ್ಧೆ ಮತ್ತು ಫಲಕ್ಕೆ ಸಂಬಂಧಿಸಿದವು ಮೊದಲ ವರ್ಗಕ್ಕೆ ಸೇರಿದರೆ, ನಮಗೆ ಅವಕಾಶಗಳು ಎಲ್ಲಿ ಮತ್ತು ಯಾವಾಗ ಪ್ರಾಪ್ತವಾಗುತ್ತವೆಂಬುದು ಎರಡನೆಯ ವರ್ಗಕ್ಕೆ ಸೇರುತ್ತದೆ.

ಯಶಸ್ಸನ್ನು ಕುಪ್ರಸಿದ್ಧರೂ ಸಾಧಿಸಿದ್ದಾರೆ. ಸುಪ್ರಸಿದ್ಧರಂತೆಯೇ- ಆದರ ಗುಟ್ಟೇನು? ಅವರಿಗೆಲ್ಲ "ಯಶಸ್ಸು ಒಂದು ಕೊಳೆಯಾದ ಸ್ತಂಭ. ನಮ್ಮ ಮೈ-ಕೈಗಳನ್ನು ಶುಚಿಯಾಗಿಟ್ಟುಕೊಂಡು ಆ ಸ್ತಂಭದ ತುದಿಯನ್ನು ತಲುಪುವುದು ಸಾಧ್ಯ" ಎಂಬ ಸತ್ಯ-ದರ್ಶನವಾಗಿತ್ತು. ಇದನ್ನೇ ಹಿರಿಯರು ಬಾಯಲ್ಲಿಯ ಮೊಸರು ಕೈ ಕೆಸರಾದುದರ ಫಲ ಎಂದಿದ್ದಾರೆ.

ಯಶಸ್ಸಿನ ಗುಟ್ಟು ಹೊಸ ಹೊಸ ಅವಕಾಶಗಳನ್ನು ಶೋಧಿಸುವುದರಲ್ಲಿಲ್ಲ. ಹೀಗೆ ವ್ಯರ್ಥಗೊಳಿಸಿದ ವೇಳೆಯು ಉಪಯೋಗಿಸದ ಕಬ್ಬಿಣವು ತುಕ್ಕಿಗೀಡಾಗುವಂತೆ ನಮ್ಮ ಬುದ್ಧಿಶಕ್ತಿಯನ್ನು ಮಂಕುಗೊಳಿಸಬಹುದು. ಯಶಸ್ಸು ನಮ್ಮಿಂದ ಬಯಸುವುದು: ಶಿಸ್ತು, ತರಬೇತಿ, ಕಠಿಣ ಪರಿಶ್ರಮ. ಇವು ಕರಗತವಾದರೆ ಅವಕಾಶಗಳು ರಾಶಿ ರಾಶಿಯಾಗಿ ನಮ್ಮ ಸುತ್ತಲೂ ಹರಡಿಕೊಂಡಿರುವುದನ್ನು ಕಾಣುವ 'ದಿವ್ಯದೃಷ್ಟಿ' ನಮಗೆ ಪ್ರಾಪ್ತವಾಗುವುದು. ಹೀಗೆ ಲಭ್ಯವಾಗುವ ಅವಕಾಶಗಳನ್ನು ಬಳಸಿಕೊಳ್ಳುವುದರಲ್ಲಿದೆ ನಮ್ಮ ಯಶಸ್ಸು!

ಯಶಸ್ಸಿನ ಬೀಜವು ಕುಟುಂಬದಲ್ಲಿ ಮೊಳೆತು ಮಕ್ಕಳಲ್ಲಿ ಚಿಗುರಬೇಕು. ಇನ್ನೂವರೆಗೂ ಪಿತೃಪ್ರಮುಖವಾಗಿಯೇ ಉಳಿದಿರುವ ನಮ್ಮ ಕುಟುಂಬ ಪದ್ಧತಿಯಲ್ಲಿ ತಂದೆಯು ತನ್ನ ಮಕ್ಕಳಿಗಾಗಿ ಮಾಡಬಹುದಾದ ಮಹದುಪಕಾರವೆಂದರೆ ತನ್ನ ಪತ್ನಿಯನ್ನು ಹಾರ್ದಿಕವಾಗಿ ಪ್ರೀತಿಸುವುದು! ಇದು ಕುಟುಂಬದ ಕಿರಿಯ ಸದಸ್ಯರ ಸಮತೋಲನೆ ಮತ್ತು ಸಬಲ ವ್ಯಕ್ತಿತ್ವ ನಿರ್ಮಾಣಕ್ಕೆ ಬುನಾದಿ. ತಾರುಣ್ಯದಲ್ಲಿ ವ್ಯವಹಾರ ಕುಶಲತೆ ಅಷ್ಟಾಗಿ ಮೈಗೂಡದಿದ್ದರೂ ಸಹ ಹಿರಿಯರಿಗೆ ಅಸಾಧ್ಯವಾದ ಸಾಧನೆಗಳನ್ನು ಪ್ರಕಟಪಡಿಸುವ ತರುಣ-ತರುಣಿಯರು ಇಂಥ ಕುಟುಂಬಗಳ ಸದಸ್ಯರೇ. ತಂದೆ ತಾಯಿ ತಮ್ಮ ಕರ್ತವ್ಯ ಪಾಲನೆಯಲ್ಲಿ ನಿರ್ಲಕ್ಷ ತೋರಿದರೆ ಮಕ್ಕಳು ತಮ್ಮ ಪ್ರತಿಯೊಂದು ಚಟುವಟಿಕೆಯಲ್ಲೂ 'ಇದರಲ್ಲಿ ನನ್ನ ಭವಿಷ್ಯ ಎಂತಿದೆ?' ಎಂದು ತಮ್ಮನ್ನೇ ಪ್ರಶ್ನಿಸಿಗೊಳ್ಳುತ್ತ 'ನನ್ನ ಭವಿಷ್ಯದ ಶಿಲ್ಪಿ ನಾನೇ' ಎಂಬುದನ್ನು ಮರೆತು ತಮ್ಮ ಅಮೌಲ್ಯ ತಾರುಣ್ಯವನ್ನು ತರುಣ-ತರುಣಿಯರಿಗಾಗಿ ಬಲಿಗೊಡುತ್ತ ಜೀವನ ಸವೆಯಿಸುತ್ತಾರೆ.

'ಶ್ರಮ'ಕ್ಕಿಂತ ಮೊದಲು 'ಯಶಸ್ಸು', 'ಯಶಸ್ಸಿ'ಗಿಂತ ಮೊದಲು 'ಕಾಂಚಾಣ' ಸಿಗುವುದು ಕೇವಲ ಕನ್ನಡ ಶಬ್ದಕೋಶದಲ್ಲಿ! ಯಶಸ್ಸೆಂಬುದು ಒಂದು ಮಾನಸಿಕ ಸ್ಥಿತಿ. 'ನಾನು ಯಶಸ್ವಿಯಾಗುತ್ತಿದ್ದೇನೆ' ಎಂದು ನಿಮ್ಮನ್ನು ನೀವೇ ಉತ್ತೇಜಿಸುತ್ತ ನಡೆದರೆ ನಿಮಗೆ ಯಶಸ್ಸು ಖಂಡಿತ. ಆದರೂ ಹಲವರಿಂದ ಯಶಸ್ಸು ದೂರ ಓಡುತ್ತಿರುವುದೇತಕ್ಕೆ? ಏಕೆಂದರೆ, ಜೀವನದಿಂದ ನಾನು ಅಪೇಕ್ಷಿಸುವುದನ್ನು ದೊರಕಿಸಲು ಶ್ರದ್ಧಾ ಪೂರ್ವಕ ಪ್ರಯತ್ನ ಮತ್ತು ನನ್ನ ಪ್ರಯತ್ನದಲ್ಲಿ ನಾನು ಸಫಲನಾಗುವೆನೆಂಬ ಆತ್ಮ ವಿಶ್ವಾಸ ಇವೆರಡೂ ಇಲ್ಲದಿರುವುದು. ಇಂಥ ವ್ಯಕ್ತಿಗಳು ಸದವಕಾಶಗಳು ತಮ್ಮ ಮನೆಯ ಕದ ತಟ್ಟುತ್ತಿದ್ದರೂ ಆದನ್ನು ಶಬ್ದ ಮಾಲಿನ್ಯವೆಂದು ಟೀಕಿಸುತ್ತ ತಮ್ಮ ಅಪ್ಪಟ ನಿರಾಶಾವಾದಿತ್ವವನ್ನು ಜಾಹೀರುಪಡಿಸುತ್ತ ಮುಚ್ಚಿದ ಕದಗಳ ಹಿಂದೆ ಅವಿತುಕೊಂಡಿರುತ್ತಾರೆ. ಲಾಭದಾಯಕವಾದ ಕಾರ್ಯಗಳನ್ನು ಮಾಡಲು ಕಠಿಣ ಶ್ರಮಗೈಯುವ ಸದವಕಾಶವನ್ನು ಒದಗಿಸಿದುದೇ ಜೀವನ ನಮಗೆ ನೀಡಿದ ವರದಾನವೆಂಬುದನ್ನು ಮರೆಯುತ್ತಾರೆ. ಪರಿಣಾಮ? ಜಗತ್ತು ಮೂರು ಬಗೆಯ ವ್ಯಕ್ತಿಗಳಿಂದ ತುಂಬಿತುಳುಕುತ್ತಿರುವುದು! 'ತಮ್ಮ ಸುತ್ತಮುತ್ತಲೂ ಏನು ಘಟಿಸುತ್ತಲಿದೆಯೆಂಬುದನ್ನೂ ತಿಳಿಯದ ಜನಸಾಗರ; ಸುತ್ತಮುತ್ತಲೂ ಘಟಿಸುತ್ತಿರುವುದನ್ನು ನೋಡಿಯೂ ನಿಷ್ಕ್ರಿಯರಾಗಿರುವ ಹಲವರು; ಈ ಎಲ್ಲ ಘಟನೆಗಳಿಗೂ ಕಾರಣೀಭೂತರಾಗಿರುವ ಕೆಲವೇ ಕೆಲವರು'. ಕೊನೆಯವರ ಹಣೆಫಲಕವೇ



**ಯಶಸ್ಸಿನ ಗುಟ್ಟು ಹೊಸ ಹೊಸ ಅವಕಾಶಗಳನ್ನು ಶೋಧಿಸುವುದರಲ್ಲಿಲ್ಲ. ಹೀಗೆ ವ್ಯರ್ಥಗೊಳಿಸಿದ ವೇಳೆಯು ಉಪಯೋಗಿಸದ ಕಬ್ಬಿಣವು ತುಕ್ಕಿಗೀಡಾಗುವಂತೆ ನಮ್ಮ ಬುದ್ಧಿಶಕ್ತಿಯನ್ನು ಮಂಕುಗೊಳಿಸಬಹುದು. ಯಶಸ್ಸು ನಮ್ಮಿಂದ ಬಯಸುವುದು: ಶಿಸ್ತು, ತರಬೇತಿ, ಕಠಿಣ ಪರಿಶ್ರಮ.**

ಯಶಸ್ಸು!

ಎರಡು ಪ್ರಕಾರದ ಯಶಸ್ಸನ್ನು ನಾವು ಕಾಣುತ್ತೇವೆ: ವ್ಯಕ್ತಿಗತ ಸಾಧನೆಯ ಕುರಿತಾದದ್ದು; ಯಾವದೊಂದು ಸಮೂಹದ ಸಾಧನೆಯ ದ್ಯೋತಕವಾದುದು. ಎರಡನೆಯ ಸಾಧನೆ ಹೆಚ್ಚು ಕಷ್ಟಕರ; ಅಂತೆಯೇ ಸಾಮಾಜಿಕವಾಗಿ ಹೆಚ್ಚು ಮಹತ್ವದ್ದು. ಸಮೂಹದ ಸದಸ್ಯರೆಲ್ಲರೂ ಸಾಧನೆಯ ಮೂಲಕ ಯಶಸ್ಸಿನತ್ತ ಮುಖಮಾಡುವಂತೆ ಪ್ರೇರೇಪಣೆ ನೀಡುವಲ್ಲಿ ಪ್ರತಿಯೊಬ್ಬನ ಕಾಣಿಕೆಯೂ ಇದೆ. ಗುಂಪಿನ ಪ್ರತಿ ಸದಸ್ಯನೂ ಸಾಂಘಿಕ ನಡಾವಳಿಯ ಮುಖ್ಯ ಸೂತ್ರಗಳನ್ನು ತನ್ನ ವ್ಯಕ್ತಿತ್ವದಲ್ಲಿ ಹೊಂದಿರುವ ಪ್ರತಿಯೋರ್ವನಲ್ಲಿಯೂ ರಚನಾತ್ಮಕವೂ, ವಿಶ್ಲೇಷಣಾತ್ಮಕವೂ ಆದ ವಿಚಾರಶಕ್ತಿಯಿದೆ.

ಸಾಂಘಿಕ ಯಶಸ್ಸನ್ನು ಸಾಧಿಸುವಾಗ ಒಂದು ಮೋಜಿನ ವಿಷಯವನ್ನು ನಾವು ನೆನಪಿಡಬೇಕು. ಪ್ರಾಣಿಗಳಿಂದ ನಾವು ಕಲಿಯಲು ಬೇಕಾದಷ್ಟು ಇದ್ದರೂ ಕೆಲವು ಪ್ರಾಣಿ ಸಹಜ ಗುಣಗಳನ್ನು ನಮ್ಮಿಂದ ದೂರವಿರಿಸುವುದೂ ಅಷ್ಟೇ ಮಹತ್ವದ್ದು. ಇವುಗಳನ್ನು ಗಮನಿಸೋಣ:

ಉತ್ಸಾಹಿಗಳ ಸಮೂಹ, ಯಶಸ್ಸು ಸಾಧಿಸಬೇಕಾದ ದಾರಿಯಲ್ಲಿ ಹೋಗುತ್ತಿರುವಾಗ ಹಟಮಾರಿ ಬೃಹತ್ ಗಜನಂತೆ ದಾರಿಗಟ್ಟುವುದು ಸಲ್ಲ.

ಆಮೆಯಂತೆ ಇಂದ್ರಿಯಗಳನ್ನಾಕುಂಚಿಸಿ ತನ್ನ ವಿಚಾರ ಅಭಿಪ್ರಾಯಗಳನ್ನು ತನ್ನಲ್ಲಿಯೇ ಮುಚ್ಚಿಟ್ಟುಕೊಳ್ಳುವ ಸ್ವಭಾವ ಬೇಡ. ಸಮಸ್ಯೆ ಯೆದುರಾದಾಗ ತಿಳಿಗೇಡಿಯಂತೆ ಮರಳಿನಲ್ಲಿ ಕತ್ತನ್ನು ಹುದುಗಿಸಿವುದೂ, ಸತ್ಯವನ್ನೆದುರಿಸಲಾಗದೇ ಪಲಾಯನ ಗೈಯುವುದೂ ಅವಿವೇಕ.

ತನ್ನ ಅಭಿಪ್ರಾಯವನ್ನು ಬದಲಿಸಬಾರದೆಂಬ ಕತ್ತೆಯ ಗುಣ ನಮ್ಮಲ್ಲಿರಬಾರದು.

ಕೋತಿಯ ಅಲೆಮಾರಿತನ, ನಿರಂತರ ಹರಟುವಿಕೆ, ಇತರರ ಗೇಲಿ ನಮ್ಮ ಉದ್ದೇಶಕ್ಕೆ ವಿರುದ್ಧ.

ಗೂಬೆಯ ತೋರಿಕೆಯ ಜಾಣತನ, ಗಾಂಭೀರ್ಯ ಅರ್ಥವಾಗದ ದೀರ್ಘಮಾತುಗಳನ್ನು ನಾವು ಅನುಕರಿಸುವುದು ಬೇಡ. ಬೇರೆಯವರ ವಿಷಯದಲ್ಲಿ ಅನಗತ್ಯವಾಗಿ ಮೂಗುತೂರಿಸಿ ಕಾಲುಕೆದರಿ ಜಗಳ ಕಾಯುವುದು ಘೆಂಡಾಮೃಗಕ್ಕೆ ಮಾತ್ರ ಶೋಭೆ. ಜಿರಾಫೆಯಂತೆ ಬಹಳ ಎತ್ತರದಿಂದ ಇತರರನ್ನು ಹೀಯಾಳಿಸುವಂತೆ ನೋಡುವುದು ಸಲ್ಲ.

ಯಾವಾಗಲೂ ನಿದ್ರಾವಶವಾದ, ಆಕಳಿಸಲು ಮಾತ್ರ ತಲೆಯೆತ್ತುವ ನೀರಾನೆ ನಮ್ಮ ಆದರ್ಶವಾಗದಿರಲಿ.

ಇತರರ ಸಹಾನುಭೂತಿಗಾಗಿ ಸದಾ ಹಂಬಲಿಸುವ ಬೆಕ್ಕಿನ ಸ್ವಭಾವ ನಮಗೆ ಸುತರಾಂ ಬೇಡ.

> ಭಾವನೆಗಳು ಮೂಡಿದಂತೆ
> ಲೆಕ್ಕಣಿಕೆ ಓಡುತ್ತದೆ
> ಪ್ರೇಮ ಸಂದೇಶ ಬಾರದಿದ್ದರೆ
> ಮನಸ್ಸು ಮುದುಡುತ್ತದೆ.
>
> **- ಯು.ವಿ.ತಾರಿಣಿರಾವ್**

ಹಾಡಿದ್ದನ್ನೇ ಹಾಡುವ ಕಿಸುಬಾಯಿ ದಾಸ ಮಂಡೂಕದಿಂದ ನಾವು ಗಾವುದ ದೂರವಿರೋಣ.

ಮಯೂರದಂತೆ ಯಾವಾಗಲೂ ಇತರರ ಲಕ್ಷ್ಯ ಸೆಳೆಯಬಯಸುವ 'ಬಿಂಕದ ಸಿಂಗಾರಿ' ಯಾಗಿ ನೀವು ಬೇರೆಯವರ ಒಲವು ಗಳಿಸಲಾರಿರಿ.

ಮೂಷಕದಂತೆ ಅಂಜುಗುಳಿಯಾಗಿ ಸಮಸ್ಯೆ ಯಿಂದ ಓಡಿಹೋಗದಿರಿ. ತೀರ ಸ್ವಲ್ಪ ಭಿನ್ನಾಭಿಪ್ರಾಯ, ಭಾವೋದ್ವೇಗಗಳಿಗೂ ಮಣಿದು ವಿಷಯಾಂತರ ಮಾಡುವ ಮೊಲ ನಾವಾಗದಿರೋಣ.

ತನ್ನ ಮೈಬಣ್ಣದ ಪರಿಸರದೊಂದಿಗೆ ಸಮರಸವಾಗಿ ಅನಿರೀಕ್ಷಿತವಾಗಿ ದಾಳಿಮಾಡುವ ಸರ್ಪ ನಮಗೆ ಮಾದರಿಯಾಗುವುದು ಬೇಡ.

ಭಿನ್ನಮತವನ್ನು ಶಕ್ತಿ, ಕ್ರೌರ್ಯಗಳಿಂದ ಹತ್ತಿಕ್ಕುವ ಸಿಂಹದ ತಂತ್ರ ಅಪಾಯಕರ.

ವೈಯಕ್ತಿಕ ಹಾಗೂ ಸಾಂಘಿಕ ಯಶಸ್ಸಿಗೆ ಸಂಬಂಧಿಸಿದ ವಿಷಯಗಳನ್ನು ಸ್ಥೂಲವಾಗಿ ತಿಳಿದುಕೊಂಡಾಯಿತು. ಲೇಖನದ ತಲೆ ಬರಹದಲ್ಲಿ ಯಶಸ್ಸನ್ನು ಪಂಚಾಮೃತವೆಂದಿದ್ದೇನಲ್ಲವೇ? ಅಮೃತಕ್ಕೆ ಸದ್ಗುಣವೆಂದೂ ಅರ್ಥವುಂಟು; ಅದು ಶುಭ್ರತೆಯ ಪ್ರತೀಕವೂ ಅಹುದು. ಅಮೃತಗುಣ ಪಡೆದ ಐದು ಪದಾರ್ಥಗಳಿಂದ ತಾನೇ ಪಂಚಾಮೃತ ಸಿದ್ಧವಾಗುವುದು? ಹಾಗಾದರೆ ಯಶಸ್ಸೆಂಬ ಪಂಚಾಮೃತದ ಐದು ಮಹತ್ವದ ಘಟಕಗಳನ್ನೀಗ ಸೂಕ್ಷ್ಮವಾಗಿ ಅಭ್ಯಸಿಸೋಣ:

## ವಿಶಿಷ್ಟ ಕೋಪವೆಂಬ ಹಾಲು

**ಜ** ಜಗತ್ತಿನ ಎಲ್ಲ ಸುವಿಖ್ಯಾತ ಕಲಾವಿದರು, ಸಾಹಿತಿಗಳು, ವಿಜ್ಞಾನಿಗಳು ಇತ್ಯಾದಿ ಕೋಪಿಷ್ಠರು. ಆದರೆ ನೆನಪಿಡಿ: ಅವರ ಕೋಪ ತಮ್ಮ ಅಥವಾ ಇತರರ 'ದವಡೆಗೆ ಮೂಲ' ವಲ್ಲ. ಆ ಸಾತ್ವಿಕ ಕ್ರೋಧಕ್ಕೆ ಕಾರಣ - ಸಮಾಜ ತಮ್ಮನ್ನು ಅನುಚಿತವಾಗಿ ಕಾಣುತ್ತಿದೆಯಲ್ಲ ಎಂಬುದು. ಆದರೆ ಈ ಸಾಮಾಜಿಕ ನಿರ್ಲಕ್ಷ್ಯದ ಕಾರಣ ತಾವೇ ಎಂಬುದೂ ಅವರಿಗೆ ಬೇಗನೆ ಅರಿವಾಗುತ್ತದೆ. ಹಾಗಾಗಿ ಆ ಕೋಪ ತಮ್ಮ ನಿಕೃಷ್ಟ ಸ್ಥಿತಿ, ಕೆಲಸಕ್ಕೆ ಬಾರದ ಅಸ್ತಿತ್ವ, ಪರಾಜಯಗಳತ್ತ ತಿರುಗುತ್ತದೆ. ಆಗಲೇ ಇವರೆಲ್ಲರೂ 'ಮಹಾಜನರು ತುಳಿದ ದಾರಿ' ಯನ್ನು ಬಿಟ್ಟು 'ಕೆಲವರೇ ತುಳಿದ ಕಾನನದ ಇನ್ನೊಂದು ದಾರಿ' ಯನ್ನು ಉಪಯೋಗಿಸಲು ಪ್ರಾರಂಭಿಸುತ್ತಾರೆ. ತಮಗೆ ಅಸಾಧ್ಯವಾದ ಕಾರ್ಯಗಳಲ್ಲಿ ತಾವು ತೊಡಗಿಕೊಂಡಿರುವದೂ ಸಹ ಆಗ ಇವರಿಗೆ ತಿಳಿಯದು. ಕಷ್ಟಗಳು ಅವರ ಮನೋಬಲವನ್ನು ವೃದ್ಧಿಸಿ, ಛಲವನ್ನು ಸಾಣೆ ಹಿಡಿದು ಅವರನ್ನು ಪ್ರಗತಿಯತ್ತ ಒಯ್ಯುತ್ತವೆ.

ಅವರು ಹೊಳೆಯುವ ಲೋಹ ದಂಡಗಳಂತೆ ಗಟ್ಟಿಗೊಳ್ಳುತ್ತ ಯಶಸ್ಸಿನ ಏರುಹಂತಗಳತ್ತ ಪಯಣಿಸತೊಡಗುತ್ತಾರೆ. ''ಪರ್ವತಾರೋಹಣವು ಸುಲಭದ ಕಾರ್ಯವಲ್ಲದಿದ್ದರೂ ಶಿಖರದ ಮೇಲಿನಿಂದ ಎಸೆದ ನೋಟವು ಸರ್ವಶ್ರೇಷ್ಠವಾದುದೆಂಬ'' ಸತ್ಯದರ್ಶನ ಅವರಿಗಾಗುತ್ತದೆ.

## ಜಾಗ್ರತೆಯೆಂಬ ಮೊಸರು

**ಜೀ** ಜೀವನದಲ್ಲಿ ತಪ್ಪೆಸಗುವುದು, ಸೋಲುವುದು ಸಹಜ. ಆದರೆ ತಮ್ಮ ಮತ್ತು ಇತರರ ತಪ್ಪುಗಳಿಂದ ಪಾಠ ಕಲಿಯುವುದು ಯಶಸ್ವಿಗಳ ಲಕ್ಷಣ. ಎಲ್ಲ ತಪ್ಪುಗಳನ್ನೂ ನಾನೇ ಮಾಡಿ ಪಾಠ ಕಲಿಯುವಷ್ಟು ದೀರ್ಘ ಜೀವನ ನನ್ನದಲ್ಲ ಎಂಬುದನ್ನು ಇಂಥ ಪ್ರತಿಯೊಬ್ಬ ಅರಿತಿರುವ. ತಮ್ಮ ತಪ್ಪುಗಳನ್ನು ಬರೆದಿಟ್ಟು ಅವುಗಳ ಪಾರಾಯಣ ಮಾಡುವುದು ಅವರ ಸ್ವಭಾವ. ತಪ್ಪು, ಸೋಲು ಗಳಿಂದ ಅವರು ಪಲಾಯನಗೈಯ್ಯುವುದಿಲ್ಲ. ಪ್ರತಿ ಸೋಲೂ ಅವರನ್ನು ನಗಿಸುವುದರ ಮೂಲಕ ಅವರ ಮುಖದ ಮಂಜನ್ನು ಕರಗಿಸುತ್ತದೆ. ಹತ್ತೆಂಟು ಸಲ ಗೋಡೆಯನ್ನೇರಿ ನೆಲಕ್ಕೆ ಬಿದ್ದರೂ ಕೊನೆಗೂ ತನ್ನ ಗುರಿ ಮುಟ್ಟುವಲ್ಲಿ ಸಫಲವಾಗಿ ರಾಣಾಸಂಗನ ಕಣ್ತೆರೆಯಿಸಿದ ಇರುವೆಯೂ ಅವರಿಗೆ ಆದರ್ಶವಾಗುತ್ತದೆ.

## ಶಾಶ್ವತ ಕಲಿಕೆಯೆಂಬ ತುಪ್ಪ

**ನ** ನಮ್ಮ ಕಾರ್ಯಕ್ಷೇತ್ರವೊಂದು ಬೃಹತ್ ದೇವಾಲಯ. ಅದನ್ನು ಪ್ರವೇಶಿಸುವಾಗ ಪಾದರಕ್ಷೆಗಳೊಡನೆ ನಮ್ಮ 'ಅಹಂ' ನ್ನು ಹೊರಗಿರಿಸಬೇಕು. ನಮ್ಮತನವನ್ನು ಬೆಳೆಯಿಸಿಕೊಳ್ಳಬೇಕು. ಪ್ರತಿ ವಿಷಯದಲ್ಲಿಯೂ ಸತ್ಯವನ್ನು ಇತರರ ಪ್ರಭಾವದಿಂದ ಪ್ರತ್ಯೇಕಿಸಲು ನಾವು ಕಲಿಯಬೇಕು.

ಅಭಿಪ್ರಾಯಗಳ ಕವಚ ಭೇದಿಸಿದರೇ ನಮಗೆ ಒಳಗಿನ ಬಾದಾಮು ದೊರಕುವುದು. ಈ ರೀತಿ ಜಾಣರಾಗುತ್ತ ಸಾಗುವುದು ಅವರ ಜಾಯಮಾನ. ಫಲಸಮೃದ್ಧ ವೃಕ್ಷಗಳಂತೆ ವಿನೀತಭಾವ ಪ್ರದರ್ಶಿಸುವುದು ಅವರ ಲಕ್ಷಣ.

### ಮೌನವೆಂಬ ಜೇನು

ಯಶಸ್ವಿ ವ್ಯಕ್ತಿಗಳು ಒಳ್ಳೇ ಕಥೆಗಾರರಾಗಿರಬಹುದು; ವಾಗ್ಮಿಗಳಾಗಿರಬಹುದು. ಆದರೆ ಅವರಲ್ಲಿ ಬಹಳಷ್ಟು ಜನ ಒಳ್ಳೇ ಸಂಭಾಷಣಾಕಾರರಲ್ಲ. ಮೂಲತಃ ಅವರು ಮೌನಕ್ಕೆ ಶರಣು. ಗಾಂಧೀಜಿಯ ಮೌನ ಅವರಿಗೆ ಶ್ರೇಷ್ಠ ಶಕ್ತಿಯನ್ನೊದಗಿಸಿದ್ದನ್ನು ನಾವು ಮರೆತಿಲ್ಲ ತಾನೇ? ಸಮಯೋಚಿತವಾದ ಮೌನವು ಅತ್ಯಂತ ಪ್ರಭಾವಶಾಲಿಯಾದ ಮಾತಿಗಿಂತ ಮೇಲು ಎಂಬುದನ್ನು ನಾವು ಬಲ್ಲೆವು. ಇಲ್ಲಿ ಕೇಳಿ: "ಮಾವಿನ ಮರದಲ್ಲೊಂದು ಜಾಣ ಮುದಿಗೂಬೆ ಕುಳಿತಿತ್ತು. ಮರದಲ್ಲಿ ಕುಳಿತಷ್ಟೂ ಅದರ ಮೌನವ್ರತ ವಿಸ್ತರಿಸುತ್ತ ಹೋಯಿತು. ಆಗ ಅದರ ಶ್ರವಣ ಶಕ್ತಿ ವೃದ್ಧಿಸುತ್ತ ನಡೆಯಿತು.

### ನಿರ್ಭಯತೆಯೆಂಬ ಸಕ್ಕರೆ

ಜೀವನವನ್ನು ಯಥಾರ್ಥವಾಗಿ ಪರಿಗಣಿಸುವ ಗುಣ ಯಶಸ್ವೀ ವ್ಯಕ್ತಿಗಳಲ್ಲಿದೆ. ಶಿವರಾಮ ಕಾರಂತರ "ವಿಜಯದ ಭ್ರಮೆ, ಸೋಲಿನ ಭಯ ಎರಡೂ ನನಗಿಲ್ಲ" ಎಂಬ ನಿಲುವು ಅವರದು. ತಮ್ಮನ್ನು ತಾವು ಕನಿಷ್ಠರೆಂದು ಅವರು ಯಾವಾಗಲೂ ತಿಳಿಯುವುದಿಲ್ಲ. ಆದರೂ ಸೋಲಿನಿಂದ ಸೋಲಿಗೆ ಪಯಣಿಸುವಾಗಲೂ ಅವರ ಉತ್ಸಾಹ ಗರಿಗೆದರುತ್ತಾ ನಡೆಯುತ್ತದೆ. ಪೂರ್ವಾಗ್ರಹಗಳಿಂದ ಅವರು ಗಾವುದ ದೂರ. ಅವರು "ತಿರುವು ಮುರುವಾಗಿರುವ 'ಪಿರಮಿಡ್'ಗಳೆಂಬುದು" ಅವರಿಗೆ ತಿಳಿದಿದೆ. ಪುಟ್ಟ ಕಾರಣ ಅಥವಾ ಘಟನೆಗಳಿಂದ ಪ್ರಾರಂಭವಾಗುವ ಪೂರ್ವಾಗ್ರಹಗಳು ನಮ್ಮ ಮನಸ್ಸನ್ನು ಪೂರ್ಣವಾಗಿ ಆಕ್ರಮಿಸುವವರೆಗೆ ಎತ್ತರಕ್ಕೂ ಅಕ್ಕಪಕ್ಕಕ್ಕೂ ಪಸರಿಸುತ್ತ ಹೋಗುತ್ತದೆಂಬುದನ್ನವರು ಬಲ್ಲರು.

ನಾವು ದೇವರೆಂದು ಕರೆಯುವ ಆ ಅದೃಶ್ಯ ಶಕ್ತಿ ಕರುಣಾಮಯಿ. ಎಲ್ಲರ ಜೀವನದಲ್ಲೂ ಸದವಕಾಶಗಳು ಪ್ರಾಪ್ತವಾಗುತ್ತವೆ. ಈ ಜಾಹೀರಾತು ಗಮನಿಸಿ: "ನಮ್ಮ ಮಿಠಾಯಿ ಅಂಗಡಿಯಲ್ಲಿ ಮಾರಾಟ ಕಾರ್ಯಕರ್ತರ ಅವಶ್ಯಕತೆಯಿದೆ. ಮಧುಮೇಹಿಗಳಿಗೆ ಆದ್ಯತೆ." ಜೀವನ ಸಂಗ್ರಾಮದಲ್ಲಿ "ಧೈರ್ಯದಿಂದ ಕ್ರಿಯಾಶೀಲರಾಗಿರುವವರಿಗೆ ಯಶಸ್ಸು ಲಭಿಸುತ್ತದೆ, ಅಂಜುಗುಳಿಗಳಿಗಲ್ಲ" ಎಂದು ನೆಹರೂಜಿ ತಿಳಿಹೇಳಿದ್ದಾರೆ. ಆದರೆ ನಮ್ಮ ಯಶಸ್ಸು ನಮ್ಮ ವ್ಯಕ್ತಿತ್ವಕ್ಕೆ ಘನತೆ ತರಬೇಕು. 'ವ್ಯಕ್ತಿಯೊಬ್ಬನ ಘನತೆಯ ಮಟ್ಟ ಅವನು ಜನಕಲ್ಯಾಣದಲ್ಲಿ ತನ್ನನ್ನೆಷ್ಟು ತೊಡಗಿಸಿಕೊಂಡಿದ್ದಾನೆಂಬುದನ್ನವಲಂಬಿಸಿದೆ' ಎಂಬುದು ಗಾಂಧೀಜಿಯ ನುಡಿ. ಸ್ವಂತದ ಯಶಸ್ಸೆಂಬ ಸ್ವಾರ್ಥಪೂರಿತ ಹುಚ್ಚುಕುದುರೆಯ ಬೆನ್ನೇರಿ ಹೊರಟವರಿಗೆ ಉಮ್ಮರ ಖಯಾಮ್‌ನ ಈ ಎಚ್ಚರಿಕೆ ದಾರಿದೀಪವಾಗಬೇಕು: "ಅಗೋಚರವಾದ ಪ್ರದೇಶಕ್ಕೆ ನನ್ನ ಆತ್ಮವನ್ನು ಈ ಜನ್ಮದ ನಂತರದ ರಹಸ್ಯವನ್ನು ಅರಿಯಲು ನಾನು ಕಳಿಸಿಕೊಟ್ಟೆ. ನನ್ನ ನಾಕ ನರಕಗಳಿಗೆ ಸ್ವತಃ ನಾನೇ ಕಾರಣ!"

■ **ಡಾ. ಟಿ. ಕೆ. ತಾಪಸ್**

# ಮಾರ್ಗದರ್ಶಿ

■ ಡಾ. ಎಸ್.ಸಿ. ಶರ್ಮಾ

ಪ್ರಾಧ್ಯಾಪಕರು,
ಆರ್.ವಿ. ಇಂಜಿನಿಯರಿಂಗ್ ಕಾಲೇಜು,
ಮೈಸೂರು ರಸ್ತೆ, ಬೆಂಗಳೂರು - 59.



### ಎಸ್. ವಾಣಿಶ್ರೀ, ಗಂಗಾವತಿ

ನಾನು ಎಸ್.ಎಸ್.ಎಲ್.ಸಿ. ಯಲ್ಲಿ 55% ರಷ್ಟು ಅಂಕಗಳನ್ನು ಪಡೆದು ದ್ವಿತೀಯ ವರ್ಗದಲ್ಲಿ ಪಾಸಾಗಿದ್ದೇನೆ. ಮುಂದೆ ಆರ್ಥಿಕ ಭದ್ರತೆಗೆ ಪೂರಕವಾದಂತಹ ಶಿಕ್ಷಣವನ್ನು ಪಡೆಯಬೇಕೆಂಬ ಆಸೆ ಇದೆ. ಆದ ಕಾರಣ ಡಿಪ್ಲೊಮೊ ಟೈಲರಿಂಗ್ ಮಾಡಬೇಕೆಂಬ ಆಸೆ ಇದೆ. ಇದರ ಬಗ್ಗೆ ಮಾಹಿತಿ ನೀಡಿ ಹಾಗೂ ವಿದ್ಯಾಭ್ಯಾಸಕ್ಕಾಗಿ ಬ್ಯಾಂಕಿನಲ್ಲಿ ಸಾಲ ಸೌಲಭ್ಯ ದೊರೆಯುತ್ತದೆಯೇ ತಿಳಿಸಿ.

**ನೀವು ಭಾರತ ಸರ್ಕಾರದ ಸಾಲರೂಪದ ವಿದ್ಯಾರ್ಥಿವೇತನವನ್ನು ನಿಮ್ಮ ಆರ್ಥಿಕ ಪರಿಸ್ಥಿತಿಯ ಆಧಾರದ ಮೇಲೆ ಪಡೆಯಬಹುದು. ಇದರ ವಿವರಗಳು ತಾವು ಓದುವ ಕಾಲೇಜಿನಲ್ಲಿ ಇಲ್ಲವೆ ಕಾಲೇಜು ಶಿಕ್ಷಣ ಮಂಡಳಿ, ಬೆಂಗಳೂರು -560 001 ಇಲ್ಲಿ ದೊರೆಯುವುದು. ಹತ್ತಿರದ ಬ್ಯಾಂಕನ್ನಾದರೂ ಸಂಪರ್ಕಿಸಬಹುದು.**

### ಜಯತೀರ್ಥ ಗೊರೇಬಾಳ, ಗಂಗಾವತಿ

ನಾನು ಬಿ.ಕಾಂ.ನಲ್ಲಿ ಶೇ. 37ರಷ್ಟು ಅಂಕ ಪಡೆದು ಪಾಸಾಗಿದ್ದೇನೆ. ನಾನು ಅಂಚೆ ತೆರಪಿನ ಮೂಲಕ ಎಲ್.ಎಲ್.ಬಿ. ಮಾಡಬೇಕು. ಪದವಿಯಲ್ಲಿ ಶೇ. 37ರಷ್ಟು ಅಂಕಗಳಿದ್ದರೆ ಎಲ್ ಎಲ್ ಬಿ ಮಾಡಲು ಸಾಧ್ಯವೇ ತಿಳಿಸಿ.

**ನೀವು ಅಂಚೆ ತೆರಪಿನ ಮೂಲಕ LLBಯನ್ನು ಮಾಡಬಹುದು. ನಿಮ್ಮ ಅಂಕಗಳಿಕೆ ಇದಕ್ಕೆ ತೊಂದರೆಯಾಗಲಾರದು.**

### ಶಾಂತಕುಮಾರ್ ವಿ. ಉಪ್ಪಿನ್

ನಾನು ದ್ವಿತೀಯ ಪಿ.ಯು.ಸಿ. ಪರೀಕ್ಷೆಯನ್ನು ಏಪ್ರಿಲ್ 98ರಲ್ಲಿ ಬರೆದಿರುತ್ತೇನೆ. ನಾನು ಮುಂದೆ ಟಿ.ಸಿ.ಎಚ್. ಮಾಡಬೇಕೆಂದುಕೊಂಡಿದ್ದೇನೆ. ಟಿ.ಸಿ.ಎಚ್. ಆದ ನಂತರ ಬಿ.ಎಡ್. ಮಾಡಬೇಕಾದರೆ ಏನು ಮಾಡಬೇಕು ಅಥವಾ ನಾನು ಇದೇ ವರ್ಷ ಟಿ.ಸಿ. ಎಚ್ ಮುಂದುವರೆಸುತ್ತಾ ಯಾವುದಾದರೂ ಮುಕ್ತ ವಿಶ್ವವಿದ್ಯಾಲಯದಿಂದ ಬಿ.ಎ.ಪದವಿಯನ್ನು ಪಡೆಯಬಹುದೇ? ಇದರಿಂದ ಬಿ.ಇಡಿ ಮಾಡಲಿಕ್ಕೆ ಅನುಕೂಲವಾಗತ್ತದೆಯೋ ಇಲ್ಲವೋ ತಿಳಿಸಿ.

**ನೀವು ಟಿ.ಸಿ. ಎಚ್. ಮಾಡಿ. ಇದರೊಂದಿಗೇ ಬಿ.ಎ. ಮಾಡಲು ಆಗುವುದಿಲ್ಲ. ಟಿ.ಸಿ.ಎಚ್. ನಂತರ ಮುಕ್ತ ವಿಶ್ವವಿದ್ಯಾಲಯದಿಂದ ಬಿ.ಎ ಮಾಡಿ ಅನಂತರ ಬಿ.ಎಡ್. ಮಾಡಬಹುದು.**

### ಹರೀಶ್, ತುಮಕೂರು

ನಾನು ಬಿ.ಕಾಂ. ಅಂತಿಮ ವರ್ಷದ ಪರೀಕ್ಷೆ ಬರೆದಿದ್ದೇನೆ. ಮೊದಲ ಎರಡು ವರ್ಷಗಳಲ್ಲಿ ಶೇ. 73 ಅಂಕ ಗಳಿಸಿರುವೆ. ಮುಂದೆ ಎಂ.ಕಾಂ. ಪದವಿ ಗಳಿಸಿ ಉಪನ್ಯಾಸಕನಾಗಲು ಆಸೆ. ಅದರ ಜೊತೆಗೆ ಕಂಪನಿ ಸೆಕ್ರೆಟರಿ ಕೋರ್ಸನ್ನು ಅಂಚೆ ತೆರಪಿನ ಮೂಲಕ ಮಾಡಬೇಕೆಂಬ ಆಸೆ. ಇದಕ್ಕಾಗಿ ನಾನು ಯಾರನ್ನು ಸಂಪರ್ಕಿಸಬೇಕು? ಎಲ್ಲಿ ಸೇರಬೇಕು? ಎರಡನ್ನೂ ಒಟ್ಟಿಗೆ ಮಾಡಬಹುದೆ? ಹಾಗೆಯೇ ಡಿಪ್ಲೊಮೊ ಇನ್ ಅಕೌಂಟಿಂಗ್ ಪಾಕೇಜ್ ಬಗ್ಗೆ ತಿಳಿಸಿ.

**ನಿಮ್ಮ ಆಸೆಯಂತೆ ನೀವು ಎಂ.ಕಾಂ. ಮಾಡಬಹುದು. ಇದರ ಜೊತೆ ಅಂಚೆ ತೆರಪಿನ ಮೂಲಕ ಕಂಪನಿ ಸೆಕ್ರೆಟರಿ ಕೋರ್ಸ್ ಸಹ ಮಾಡಬಹುದು. ಇದರ ಬಗ್ಗೆ ಹೆಚ್ಚಿನ ಮಾಹಿತಿಗೆ ಈ ವಿಳಾಸ ಸಂಪರ್ಕಿಸಿ. Institute of company Secretaries of India (ICSI), ICSI HOuse, 22, Institutional Area, Lodhi Road, New Delhi - 110 003.**

### ಹೆಸರಿಲ್ಲ,

ನಾನು ದ್ವಿತೀಯ ಪಿ.ಯು.ಸಿ.ಯಲ್ಲಿ ವಿಜ್ಞಾನ ವಿಷಯಗಳನ್ನು ತೆಗೆದುಕೊಂಡು ಪಾಸ್ ಆಗಿದ್ದೇನೆ. ನಾನು ಈಗ ಅಂಚೆಯ ಮೂಲಕ BSc-ಯನ್ನು ಮಾಡಬೇಕೆಂದಿದ್ದೇನೆ. ಇದು ಸಾಧ್ಯವೇ ತಿಳಿಸಿ.

**ನಿಮ್ಮ ಬಯಕೆಯಂತೆ ಅಂಚೆ ತೆರಪಿನ ಶಿಕ್ಷಣದ ಮೂಲಕ BSc ಮಾಡಬಹುದು. ಹೆಚ್ಚಿನ ವಿವರಗಳಿಗೆ ಈ ವಿಳಾಸ ಸಂಪರ್ಕಿಸಿ. ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮಾನಸ ಗಂಗೋತ್ರಿ, ಮೈಸೂರು -570 006.**

### ಎಂ.ಎ. ಸೊಂಪುರ

ನಾನು ಈ ವರ್ಷ ಎಸ್.ಎಸ್.ಎಲ್.ಸಿ. ಓದುತ್ತಿದ್ದೇನೆ. ಮುಂದೆ Business Management ಕೋರ್ಸ್ ಮಾಡಬೇಕೆಂದಿದ್ದೇನೆ. ನನಗೆ ಗಣಿತದಲ್ಲಿ ತುಂಬಾ ಆಸಕ್ತಿಯಿದೆ. ಆದ್ದರಿಂದ ಈ ಕೋರ್ಸ್ ಮಾಡಲು ಬೇಕಾಗುವ ಅವಧಿ ಮತ್ತು ಪೂರ್ಣ ವಿವರಗಳನ್ನು ನೀಡಿ. ಎಸ್.ಎಸ್.ಎಲ್.ಸಿ. ನಂತರ ಯಾವ ವಿಷಯವನ್ನು ಆಯ್ಕೆ ಮಾಡಿಕೊಂಡರೆ ಒಳ್ಳೆಯದು ತಿಳಿಸಿ.

**ನಿಮಗೆ Business Management ನಲ್ಲಿ ಅಷ್ಟು ಆಸಕ್ತಿಯಿದ್ದರೆ ನೀವು ಪಿ.ಯು.ಸಿ.ಯಲ್ಲಿ ವಾಣಿಜ್ಯ ವಿಭಾಗದಲ್ಲಿ ಓದಿ ನಂತರ ಬಿ.ಬಿ. ಎಮ್. ಮಾಡಬಹುದು. ನಂತರ M.B.A ಮಾಡಬಹುದು. ನೀವು ಪಿ.ಯು.ಸಿ. ನಂತರ ಬಿ.ಕಾಂ ಮುಗಿಸಿ ಸಹ M.B.A. ಮಾಡಬಹುದು.**

### ಸರೋಜಾ ಎಸ್. ಪಾಟೀಲ

ನಾನು ದ್ವಿತೀಯ ಪಿ.ಯು.ಸಿ. (ಕಲೆ)ಯಲ್ಲಿ ಶೇ. 55 ಅಂಕ ಗಳಿಸಿದ್ದೇನೆ. ಸರ್ಕಾರಿ ಸೀಟು ದೊರೆಯುವುದಿಲ್ಲ. ಹಣ ಕೊಟ್ಟು ಸೇರಲು ಆರ್ಥಿಕ ಪರಿಸ್ಥಿತಿ ಸರಿ ಇಲ್ಲ. ಸರ್ಕಾರಿ ಕೆಲಸ ಮಾಡಬೇಕೆಂಬ ಆಸೆ ಇದೆ. ಕ್ಲರ್ಕ್ ಕೆಲಸ ಮಾಡಲು ಆಸೆ. ಮುಂದೆ ಏನು ಮಾಡಿದರೆ ಒಳ್ಳೆಯದು ತಿಳಿಸಿ.

**ನೀವು ಬಿ.ಎ. ಮಾಡಬಹುದಾಗಿದೆ. ನಿಮಗೆ ಆರ್ಥಿಕ ತೊಂದರೆಯಿದ್ದರೆ, ಕೆಲಸಕ್ಕೆ ಸೇರಿಕೊಂಡೇ ಅಂಚೆ ತೆರಪಿನ ಶಿಕ್ಷಣದ ನಿಮ್ಮ ವಿದ್ಯಾಭ್ಯಾಸ ಮುಂದುವರೆಸಬಹುದು. ಸರ್ಕಾರಿ ಕೆಲಸವೇ ಬೇಕೆಂಬ ಹಟ ಬಿಡಿರಿ. ಬಿ.ಎ. ನಂತರ ಬಿ.ಎಡ್. ಮಾಡಿದರೆ ಶಿಕ್ಷಕಿಯಾಗಿ ಕೆಲಸ ಮಾಡಬಹುದು.**

### ಗುರು, ಬೇಲೂರು

ವಯಸ್ಸಿನ ಆಧಾರದ ಮೇಲೆ ಬಿ.ಎ. ಪರೀಕ್ಷೆಯನ್ನು ಬರೆಯಬಹುದೆಂದು ತಿಳಿಸಿದ್ದೀರಿ. ಹಾಗಿದ್ದಲ್ಲಿ ಅದರ ಆಧಾರದ ಮೇಲೆ ಮುಂದಿನ ಸ್ನಾತಕೋತ್ತರ ಪದವಿಯನ್ನು ಮಾಡಬಹುದೆ? ಈ ರೀತಿ ಪಡೆದ ಪದವಿಯಿಂದ ಸರ್ಕಾರಿ ಮತ್ತು ಸರ್ಕಾರೇತರ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಬಹುದೇ? ಹಾಗೆಯೇ ಸ್ನಾತಕೋತ್ತರ ಪದವಿಯನ್ನು ವಯಸ್ಸಿನ ಆಧಾರದ ಮೇಲೆ ಪಡೆದು NET, UGC ಪರೀಕ್ಷೆಗಳನ್ನು ಬರೆಯಬಹುದೇ?

**ವಯಸ್ಸಿನ ಆಧಾರದ ಮೇಲೆ ನೀವು ಬಿ.ಎ/ ಬಿ.ಕಾಂ. ಪರೀಕ್ಷೆ ಬರೆಯಬಹುದು. ಇದು ರೆಗ್ಯುಲರ್ ಪದವಿಗೆ ಸಮನಾಗಿರುತ್ತದೆ. ಈ ರೀತಿ ಪಡೆದ ಪದವಿಯ ಆಧಾರದ ಮೇಲೆ ನೀವು ಉದ್ಯೋಗಕ್ಕೆ ಪ್ರಯತ್ನಿಸಬಹುದು. ಹಾಗು ಸ್ನಾತಕೋತ್ತರ ಪದವಿಯ ಆಧಾರದ ಮೇಲೆ ಸ್ಪರ್ಧಾತ್ಮಕ ಪರೀಕ್ಷೆಗಳಾದ NET, UGC ಪರೀಕ್ಷೆ ಬರೆಯಬಹುದು.**

### ನಾಗರತ್ನ, ದಿಟವರ

ನನಗೆ ಚಾಲನಾ ತರಬೇತಿಯ ಬಗ್ಗೆ ಹೆಚ್ಚಿನ ಮಾಹಿತಿ ಬೇಕು. ನಾನು ಪಿ.ಯು.ಸಿ. ಮುಗಿಸಿರುವೆ ಹಾಗು ಆರ್ಟ್ಸ್ ಮಾಡಿರುವೆ. ಈಗ ನನಗೆ 18 ವರ್ಷ. ಚಾಲನಾ ತರಬೇತಿಗೆ ಅರ್ಜಿ ಹೇಗೆ ಸಲ್ಲಿಸಬೇಕೆಂದು ತಿಳಿಸಿ.

**ನೀವು ಚಾಲನಾ ತರಬೇತಿಯನ್ನು ಪಡೆಯಬೇಕಾದಲ್ಲಿ, ತಾವು ಯಾವುದಾದರೂ ಖಾಸಗಿ 'ಚಾಲನಾ ತರಬೇತಿ ಸಂಸ್ಥೆ'ಗಳಲ್ಲಿ ಚಾಲನಾ ತರಬೇತಿಯನ್ನು ಪಡೆಯಬಹುದು. ನೀವು ಆರ್ಥಿಕವಾಗಿ ಹಿಂದುಳಿದಿದ್ದಲ್ಲಿ, ಕರ್ನಾಟಕ ಸರ್ಕಾರದಿಂದ ದೊರೆಯುವ ತರಬೇತಿಯಿಂದಲೂ ಸಹ ತಾವು ಚಾಲನಾ ತರಬೇತಿಯನ್ನು ಹೊಂದಬಹುದು. ಹೆಚ್ಚಿನ ಮಾಹಿತಿಗಾಗಿ ಹತ್ತಿರದ ಚಾಲನಾ ತರಬೇತಿ ಸಂಸ್ಥೆಯನ್ನು ಸಂಪರ್ಕಿಸಿ.**

### ರವೀಂದ್ರ, ಗಿಂಡಿಗೋಗಿ, ಶಹಾಪುರ.

ನಾನು ಪಿ.ಯು.ಸಿ. JOCಯಲ್ಲಿ Electronic ಓದಿದ್ದು, ಮುಂದೆ ಅನಿವಾರ್ಯ ಕಾರಣದಿಂದ ಓದಲು ಆಗಲಿಲ್ಲ. ಇತ್ತೀಚೆಗೆ ನಾನು ಒಂದು Hot shot camera ತೆಗೆದುಕೊಂಡಿದ್ದೇನೆ. Photography ಕಡೆ ಹೆಚ್ಚಿನ ಆಸಕ್ತಿಯಿದೆ. Studio ಹಾಕಬೇಕೆಂಬ ಆಸೆ ಇದೆ. ಖಾಸಗಿ ಹಾಗು ಸ್ವಂತ ನೌಕರಿ ಎರಡಕ್ಕೂ ಸಂಬಂಧ ಪಡುವ ಹಾಗೆ ಒಂದು ಒಳ್ಳೆಯ ಕೋರ್ಸ್ ಬಗ್ಗೆ ತಿಳಿಸಿ.

**ನಿಮಗೆ Photography/Videography ಬಗ್ಗೆ ಆಸಕ್ತಿಯಿದ್ದು. ಅದರ ಬಗ್ಗೆ ಕೋರ್ಸ್ ಮಾಡಲು ಬಯಕೆಯಿದ್ದರೆ ಈ ವಿಳಾಸದಿಂದ ಹೆಚ್ಚಿನ ಮಾಹಿತಿ ಪಡೆಯಿರಿ. ಪ್ರಿನ್ಸಿಪಾಲ್, ಎಸ್.ಜೆ. ಪಾಲಿಟೆಕ್ನಿಕ್, ಕೆ.ಆರ್. ಸರ್ಕಲ್. ಬೆಂಗಳೂರು.**

### ಗಿರೀಶ್, ಬೀದರ್.

ನನ್ನ ವಯಸ್ಸು 22 ವರ್ಷ. ನಾನು ITI ಮೊದಲ ದರ್ಜೆಯಲ್ಲಿ ಪಾಸಾಗಿದ್ದೇನೆ. ಪಿ.ಯು.ಸಿ. II ವರ್ಷದಲ್ಲಿ ಅನಿವಾರ್ಯ ಕಾರಣಗಳಿಂದ ಪರೀಕ್ಷೆ ತೆಗೆದುಕೊಳ್ಳಲಿಲ್ಲ. ನಾನು ಮುಂದೆ KAS, IAS ಮಾಡಬೇಕೆಂಬ ಆಸೆಯಿದೆ. ನಾನು ಮುಂದೆ ಏನು ಮಾಡಬೇಕು ತಿಳಿಸಿ. ವಯಸ್ಸಿನ ಆಧಾರದ ಮೇಲೆ ಬಿ.ಎ. ಅಥವಾ ಎಂ.ಎ. ಮಾಡಬಹುದೇ? ಯಾವ ಕಾಲೇಜಿನಲ್ಲಿ ಇದಕ್ಕೆ ಅವಕಾಶವಿದೆ ತಿಳಿಸಿ.

**KAS, IAS ಮಾಡಲು ಕನಿಷ್ಠ ಪದವಿಯಾಗಿರಬೇಕು. ಅದರಿಂದ ಮೊದಲು ನೀವು ವಯಸ್ಸಿನ ಆಧಾರದ ಮೇಲೆ ಬಿ.ಎ. ಮುಗಿಸಿ. ಹೆಚ್ಚಿನ ಮಾಹಿತಿಗೆ ಈ ವಿಳಾಸ ಸಂಪರ್ಕಿಸಿ. ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು-570 006.**

### ಸುದರ್ಶನ, ಬಸಾಪುರ

ನಾನು ಎಸ್.ಎಸ್.ಎಲ್.ಸಿ. ಹಾಗೂ ಕರ್ನಾಟಕ ಹಿಂದಿ ಪ್ರಚಾರ ಸಮಿತಿ ನಡೆಸುವ ರಾಜಭಾಷಾ ವಿದ್ವಾನ್ ಎಂಬ ಬಿ.ಎ.ಗೆ ತತ್ಸಮಾನವಾದ ಹಿಂದೀ ಪರೀಕ್ಷೆಯ ಆಧಾರದ ಮೇಲೆ ಹಿಂದೀ ಬಿ.ಎಡ್. ಕೋರ್ಸ್‌ನ್ನು ಪೂರೈಸಿರುತ್ತೇನೆ. ಪ್ರೌಢ ಶಾಲಾ ಶಿಕ್ಷಕರ ನೇಮಕಾತಿಯನ್ನು ಬಿ.ಎ. ಹಾಗೂ ಬಿ.ಎಡ್. ಪರೀಕ್ಷೆಗಳ ಅಂಕಗಳ ಆಧಾರದ ಮೇಲೆ ಮಾಡುತ್ತಾರೆ. ಬಿ.ಎ ತತ್ಸಮಾನ ಹಿಂದೀ ಪರೀಕ್ಷೆಯಲ್ಲಿ ಕಡಿಮೆ ಅಂಕಗಳು ಬಂದಿವೆ. ಈಗ ಮತ್ತೊಮ್ಮೆ ಪರೀಕ್ಷೆ ಬರೆಯಲು ಸಾಧ್ಯವೇ? ಹೀಗೆ ಪಡೆದ ಹೆಚ್ಚಿನ ಅಂಕಗಳನ್ನು ಉದ್ಯೋಗ ನೋಂದಾವಣಿ ಕಛೇರಿಯಲ್ಲಿ ನೋಂದಣಿ ಮಾಡಿಕೊಂಡು ಆ ಅಂಕಗಳನ್ನು ನೇಮಕಾತಿಗೆ ಪರಿಗಣಿಸುವರೇ?

**ನೀವು ಈಗ ಬಿ.ಎ.ನಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ನೀವು ಬಿ.ಎಡ್.ನ್ನು ಮಾಡಿರುತ್ತೀರಿ. ತಾವು ಬಿ.ಎ.ಯನ್ನು ಮತ್ತೆ ಬರೆಯಬೇಕಾದಲ್ಲಿ, ತಾವು ಗಳಿಸಿರುವ ಬಿ.ಎ. ಫಲಿತಾಂಶವನ್ನು ರದ್ದುಗೊಳಿಸಬೇಕು. ಇದರಿಂದ ನೀವು ಈಗಾಗಲೇ ಗಳಿಸಿರುವ ಬಿ.ಎಡ್.ಗೂ ಸಹ ತೊಂದರೆಯಾಗುತ್ತದೆ. ಆದ್ದರಿಂದ ನೀವು ಮತ್ತೊಮ್ಮೆ ಬಿ.ಎ. ಪರೀಕ್ಷೆ ಬರೆದು, ಗಳಿಸಿದ ಅಂಕಗಳನ್ನು ಉದ್ಯೋಗ ವಿನಿಮಯ ಅಧಿಕಾರಿಗಳು ಮತ್ತೊಮ್ಮೆ ನೋಂದಣಿ ಮಾಡಿಕೊಳ್ಳಲು ಅಥವಾ ಬದಲಾಯಿಸಲು ಸಮ್ಮತಿಸುವುದಿಲ್ಲ. ಹೆಚ್ಚಿನ ಮಾಹಿತಿಯನ್ನು ಉಪಾಧ್ಯಾಯರ ಆಯ್ಕೆ ಸಮಿತಿಯಿಂದ ಪಡೆದುಕೊಳ್ಳಬಹುದು.**

### ಪಿ.ವಿ. ಜಮಾದಾರ್, ಗುಲ್ಬರ್ಗಾ.

ನಾನು ಪಿ.ಯು.ಸಿ. ಮಾಡಿರುತ್ತೇನೆ. ಮುಂದೆ ಬಿ.ಎ. ಮಾಡಿ PSI ಹಾಗು IPS ಪರೀಕ್ಷೆ ತೆಗೆದುಕೊಳ್ಳಬೇಕು. ಅದಕ್ಕಾಗಿ ನಾನು ಬಿ.ಎ.ನಲ್ಲಿ ಯಾವ ವಿಷಯಗಳನ್ನು ತೆಗೆದುಕೊಳ್ಳಬೇಕು ತಿಳಿಸಿ.

**ಬಿ.ಎ.ನಲ್ಲಿ ನಿಮಗಿಷ್ಟವಾದ ವಿಷಯ ತೆಗೆದುಕೊಂಡು ನಂತರ IPS, PSI ಪರೀಕ್ಷೆ ಬರೆಯಿರಿ.**

### ಹೆಸರಿಲ್ಲ

ನಾನು 1995-96ರ ಸಾಲಿನ ಎಸ್.ಎಸ್.ಎಲ್.ಸಿ. ಯಲ್ಲಿ ತೃತೀಯ ದರ್ಜೆಯಲ್ಲಿ ತೇರ್ಗಡೆ ಹೊಂದಿ ಕಂಪ್ಯೂಟರ್ ಡಿಪ್ಲೋಮೊ ಮಾಡಲು ಸೇರಿದ ಒಂದು ವರ್ಷದ ನಂತರ Resultನಲ್ಲಿ with held ಎಂದು ಬಂದಿದೆ. ಕಾರಣ ಗಣಿತ ಹಾಗು ವಿಜ್ಞಾನ ವಿಷಯಗಳ ಅಂಕಗಳು ಶೇ. 40 ಕ್ಕಿಂತ ಕಡಿಮೆಯಿದೆ. ಅಂದರೆ ಆ ಎರಡು ವಿಷಯಗಳಲ್ಲಿ ಶೇ. 39ರಷ್ಟು ಅಂಕಗಳು ಬಂದಿದೆ. ಆದ ಕಾರಣ ನನ್ನ ಪ್ರವೇಶ ರದ್ದಾಗಿದೆ. ನನ್ನ ಪ್ರಶ್ನೆಯೆಂದರೆ ಈ ಅಂಕಗಳಿಗೆ ನನಗೆ ಡಿಪ್ಲೊಮೋ ಸೀಟು ಸಿಗುವುದಿಲ್ಲವೇ? ನಾನು ಮತ್ತೊಮ್ಮೆ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಖಾಸಗಿಯಾಗಿ ಕಟ್ಟಿ ಬೇರೆ ಅಂಕಪಟ್ಟಿಯನ್ನು ಪಡೆಯಬಹುದೇ ತಿಳಿಸಿ. ನನಗೆ ಶೇ. 39 ರಷ್ಟು ಅಂಕಗಳಿಗೆ ITI ಅಥವಾ ಬೇರೆ ಯಾವುದಾದರೂ ಕೋರ್ಸ್‌ಗಳು ಸಿಗುತ್ತವೆಯೇ ತಿಳಿಸಿ.

**ನಿಮಗೆ ಎಸ್.ಎಸ್.ಎಲ್.ಸಿ.ಯಲ್ಲಿ ಬಂದಿರುವ ಶೇ. ಅಂಕಗಳು ಕಡಿಮೆ ಇರುವುದರಿಂದ ITI ಅಥವಾ ಬೇರೆ ಕೋರ್ಸ್‌ಗಳಿಗೆ ಸೀಟು ಸಿಗುವುದು ಕಷ್ಟವಾಗಬಹುದು. ಆದರೆ ಪ್ರಯತ್ನಿಸಿ. ನೀವು ಎಸ್.ಎಸ್.ಎಲ್.ಸಿ. ಪರೀಕ್ಷೆ ಮತ್ತೊಮ್ಮೆ ಬರೆಯಬೇಕೆಂದರೆ ಈಗಿನ ಫಲಿತಾಂಶವನ್ನು withdraw ಮಾಡಿಕೊಳ್ಳಬೇಕು. ಮತ್ತೊಮ್ಮೆ ಬರೆದ ಪರೀಕ್ಷೆಗೆ ಬೇರೆ ಅಂಕಪಟ್ಟಿ ಪಡೆಯಬಹುದು. ಹೆಚ್ಚಿನ ವಿವರಗಳಿಗೆ ನಿಮ್ಮ ಪ್ರೌಢಶಾಲೆಯನ್ನು ಸಂಪರ್ಕಿಸಿ.**

### ಎನ್. ರಾಗಿಣಿ, ಕೊಳ್ಳೆಗಾಲ

ನಾನು BSc (CBZ)ಯಲ್ಲಿ ಶೇ. 45ರಷ್ಟು ಅಂಕಗಳನ್ನು ಪಡೆದಿದ್ದೇನೆ. ನಾನು ಪರಿಶಿಷ್ಟ ವರ್ಗಕ್ಕೆ ಸೇರಿದವಳಾಗಿದ್ದೇನೆ. ಈಗ ನಾನು MBBS ಕೋರ್ಸನ್ನು Armed Medical forces, Puneಯಲ್ಲಿ ಉಚಿತವಾಗಿ ಮಾಡಬಹುದೇ? ಇದರ ಬಗ್ಗೆ ಪೂರ್ಣವಾದ ಮಾಹಿತಿ ನೀಡಿ. ಹಾಗು Medical Council Directorateರವರ ವಿಳಾಸ ತಿಳಿಸಿ.

**ನಿಮಗೆ ಆರ್ಮ್ಡ್ ಫೋರ್ಸಸ್ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ದೊರೆಯಬೇಕಾಗಿದ್ದಲ್ಲಿ ನೀವು ಅವರು ನಡೆಸುವ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು. ಈ ಪರೀಕ್ಷೆಯ ವಿವರಗಳು ನಿಯತಕಾಲಿಕಗಳಲ್ಲಿ ಜನವರಿ ತಿಂಗಳಲ್ಲಿ ಸಾಮಾನ್ಯವಾಗಿ ಬರುತ್ತದೆ. ಗಮನಿಸಿ.**

# ಪ್ರವಾಸೋದ್ಯಮದಲ್ಲಿ ಉದ್ಯೋಗಾವಕಾಶ

ನಮ್ಮ ದೇಶಕ್ಕೆ ಪ್ರತಿವರ್ಷ ಇಪ್ಪತ್ತರಿಂದ ಇಪ್ಪತ್ತೈದು ಲಕ್ಷ ವಿದೇಶಿ ಪ್ರವಾಸಿಗರು ಬರುತ್ತಾರೆ. ಸಂಸ್ಕೃತಿ, ಕಲೆ, ಪ್ರವಾಸ ಇತ್ಯಾದಿಗಳ ಕಾರಣಗಳಿಗಾಗಿ ಅವರ ಭೇಟಿ ನಿರಂತರವಾಗಿರುತ್ತದೆ. ಈ ಪ್ರವಾಸಿಗರಿಗೆ ಅಗತ್ಯ ಸೇವೆ ಒದಗಿಸುವಲ್ಲಿ ಸರ್ಕಾರ ಹಾಗೂ ಇತರೆ ಖಾಸಗಿ ಸಂಸ್ಥೆಗಳು ವಿವಿಧ ಯೋಜನೆಗಳನ್ನು ಹಮ್ಮಿಕೊಂಡಿವೆ.

ಕೋಟ್ಯಂತರ ರೂಪಾಯಿಗಳ ವಿದೇಶಿ ವಿನಿಮಯ ಗಳಿಸಿ ಕೊಡುವ ಈ ಪ್ರವಾಸೋದ್ಯಮದಲ್ಲಿ ವಿಶೇಷ ತರಬೇತಿ ನೀಡಲು ಸಹ ಹಲವಾರು ಸಂಘ-ಸಂಸ್ಥೆಗಳು ಸಿದ್ಧವಾಗಿವೆ.

ಟಿಕೆಟಿಂಗ್ ಆ್ಯಂಡ್ ರಿಜರ್ವೇಶನ್ ವಿಭಾಗ, ವಿದೇಶಿ ವಿನಿಮಯ ವಿಭಾಗ, ಮ್ಯಾನೇಜ್‌ಮೆಂಟ್ ಆ್ಯಂಡ್ ಗೈಡಿಂಗ್ ಕೋರ್ಸ್, ಡಿಪ್ಲೊಮಾ ಇನ್ ಟೂರಿಸಂ, ವಿಮಾನದಲ್ಲಿ ಪರಿಚಾರಿಕೆಯರ ತರಬೇತಿ-ಶಿಕ್ಷಣ, ಹೊಟೇಲ್ ಮ್ಯಾನೇಜ್‌ಮೆಂಟ್ ಹಾಗೂ ಇತರೆ ಸೇವಾ ತರಬೇತಿಗಳನ್ನು ಟ್ರೇಡ್ ವಿಂಗ್ಸ್ ಮ್ಯಾನೇಜ್‌ಮೆಂಟ್ ಇನ್ಸ್ಟಿಟ್ಯೂಟ್ ಒದಗಿಸುತ್ತದೆ. ಈ ಎಲ್ಲ ಕೋರ್ಸ್‌ಗಳು ಅಮೆರಿಕನ್ ಸೊಸೈಟಿ ಆಫ್ ಟ್ರಾವಲ್ ಏಜೆಂಟ್ಸ್‌ನಿಂದ ಮಾನ್ಯತೆ ಪಡೆದಿವೆ. ಯಾವುದೇ ವಿಶ್ವವಿದ್ಯಾಲಯದ ಪದವಿ ಇಲ್ಲವೆ ಅದಕ್ಕೆ ಪೂರಕವಾದ ಶಿಕ್ಷಣ ಪಡೆದವರು ಈ ತರಬೇತಿ ಶಿಕ್ಷಣಕ್ಕೆ ಅರ್ಹರಾಗುತ್ತಾರೆ. ಪಿ. ಯು. ಸಿ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದವರು ಸಹ ಈ ಕೋರ್ಸುಗಳಿಗೆ ಪ್ರವೇಶ ಪಡೆದು ಭವಿಷ್ಯ ರೂಪಿಸಿಕೊಳ್ಳಬಹುದು.

ಬಿರ್ಲಾ ಇನ್ಸ್ಟಿಟ್ಯೂಟ್ ಆಫ್ ಲಿಬರಲ್ ಆರ್ಟ್ಸ್ ಆ್ಯಂಡ್ ಮ್ಯಾನೇಜ್‌ಮೆಂಟ್ ಸೈನ್ಸ್ (ಬಿ ಐ ಎಲ್ ಎಮ್ ಎಸ್) ಇಲ್ಲಿ ಮಾರ್ಕೆಟಿಂಗ್, ಸೇಲ್ಸ್ ಮ್ಯಾನೇಜ್‌ಮೆಂಟ್, ಇಂಪೋರ್ಟ್ ಆ್ಯಂಡ್ ಎಕ್ಸಪೋರ್ಟ್ ಮ್ಯಾನೇಜ್‌ಮೆಂಟ್, ಎಕೊ-ಟ್ಯೂರಿಸಂ ಆ್ಯಂಡ್ ಆಡ್ವೆಂಚರ್ ಟ್ಯೂರಿಸಂ ಕೋರ್ಸ್‌ಗಳನ್ನು ಪಡೆಯುವದರಿಂದ ಸ್ವಂತ ಟ್ರಾವಲಿಂಗ್ ಏಜೆನ್ಸಿಯನ್ನು ಕೂಡ ಪ್ರಾರಂಭಿಸಬಹುದು.

ಇನ್ಸ್ಟಿಟ್ಯೂಟ್ ಆಫ್ ಮಾಡರ್ನ್ ಮ್ಯಾನೇಜ್‌ಮೆಂಟ್‌ನವರು ತರಬೇತಿ, ಡಿಪ್ಲೊಮಾ ಕೋರ್ಸುಗಳನ್ನು ನೀಡುತ್ತಾರೆ.

ಮುಖ್ಯವಾಗಿ ಈ ಕೋರ್ಸುಗಳು ದೆಹಲಿ ಹಾಗೂ ಕಲ್ಕತ್ತಗಳಲ್ಲಿ ಲಭ್ಯವಿರುತ್ತವೆ. ಮುಂಬೈ ಹಾಗೂ ಬೆಂಗಳೂರಿನಂತಹ ಕಡೆಗಳಲ್ಲಿ ಈ ಕೋರ್ಸುಗಳನ್ನು ಪಡೆಯಲು ಸದ್ಯಕ್ಕೆ ತೊಂದರೆಯಾಗಬಹುದು.

ವಿಶೇಷವೆಂದರೆ ಅತ್ಯಂತ ಜನಪ್ರಿಯ ಶಿಕ್ಷಣ ಸಂಸ್ಥೆಗಳು ಈ ಕೋರ್ಸುಗಳನ್ನು ತಮ್ಮ ಸಂಸ್ಥೆಯಲ್ಲಿ ನಡೆಸಲು ಅವಕಾಶ ಹಾಗೂ ಪರವಾನಗಿ ಕೇಳಿವೆ.

ಈ ಶಿಕ್ಷಣ-ತರಬೇತಿಗಳಲ್ಲಿ ಪುರುಷ ಹಾಗೂ ಸ್ತ್ರೀ ವರ್ಗಗಳಿಗೆ ಸಮಾನ ಅವಕಾಶಗಳಿವೆ.

ಅಂಚೆ ಮೂಲಕ ಈ ಕೋರ್ಸುಗಳಲ್ಲಿ ತರಬೇತಿ ಪ್ರಾರಂಭಿಸುವ ಬಗ್ಗೆ ಕೆಲವು ಶಿಕ್ಷಣ ಸಂಸ್ಥೆಗಳು ಇತ್ತೀಚೆಗೆ ಯೋಚಿಸಿವೆ. ಇನ್ನೂ ಆ ಬಗ್ಗೆ ನಿಖರ ನಿರ್ಧಾರವಾಗಿಲ್ಲ.

# ಸ್ಪರ್ಧಾತ್ಮಕ ಪರೀಕ್ಷೆಗೆ ಸಿದ್ಧರಾಗಿ

## ಸಾಮಾನ್ಯ ಜ್ಞಾನ

1. ಚೀನಾದ ಯಾಂಗತ್ಸೆ ನದಿಗೆ ಕಟ್ಟಿದ ಅಣೆಕಟ್ಟು ಯಾವುದು?
2. ಸತ್ಯ ಹರಿಶ್ಚಂದ್ರ ಯಾವ ವಂಶಕ್ಕೆ ಸೇರಿದ ದೊರೆಯಾಗಿದ್ದ?
3. ಕ್ರಿ.ಶ.(46-120)ರಲ್ಲಿಯೇ ಚಂದ್ರ ಭೂಮಿಯಂತೆಯೇ ಇದ್ದಾನೆ ಎಂದು ತಿಳಿಸಿದ ಗ್ರೀಸ್‌ನ ಪ್ರಬಂಧಕಾರನಾರು?
4. SETI'ಯ ವಿಸ್ತೃತ ರೂಪವೇನು?
5. Spectroscopy ಅಂದರೆ, ಕನ್ನಡದಲ್ಲಿ ಏನು?
6. 'ಜೀವ ವಿಕಾಸ' ಸಿದ್ಧಾಂತವನ್ನು ಪ್ರತಿಪಾದಿಸಿದ ವಿಜ್ಞಾನಿ ಯಾರು?
7. 1993ರಲ್ಲಿ ವಿಶ್ವಸಂಸ್ಥೆಯು ಸರ್ವರಿಗೂ ಶಿಕ್ಷಣ(Education for all)ಎಂಬ ಸಮ್ಮೇಳನವನ್ನು ಎಲ್ಲಿ ನಡೆಸಿತು?
8. ಫ್ರಾನ್ಸ್ ರಾಷ್ಟ್ರ ಇಲ್ಲಿಯವರೆಗೆ ಎಷ್ಟು ಬಾರಿ ತನ್ನ ಸಂವಿಧಾನವನ್ನು ಬದಲಾಯಿಸಿದೆ?
9. ಜನವಸತಿ ಇಲ್ಲದ ಖಂಡ ಯಾವುದು?
10. ಭಾರತದ ಸರ್ವೋಚ್ಚ ನ್ಯಾಯಾಲಯದ 27ನೇ ಮುಖ್ಯ ನ್ಯಾಯಾಧೀಶರು ಯಾರು?
11. ಭಾರತದ ಹತ್ತನೇ ರಾಷ್ಟ್ರಪತಿ ಯಾರು ?
12. 29ನೇ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ಎಲ್ಲಿ ನಡೆಯಿತು ಮತ್ತು ಯಾರು ಉದ್ಘಾಟಿಸಿದರು?
13. ಭಾರತದ ಹಂಗಾಮಿ ಪ್ರಧಾನಿ ಗುಲ್ಜಾರಿ ಲಾಲ ನಂದಾ ಅವರು ತಮ್ಮ ಎಷ್ಟನೇ ವಯಸ್ಸಿನಲ್ಲಿ ಸಾವಿಗೀಡಾದರು (ಮರಣ ಹೊಂದಿದರು)?
14. 'ಸರ್ವೋದಯ ದಿನ'ವೆಂದು ಯಾವ ತಾರೀಖಿನಂದು ಆಚರಿಸಲಾಗುತ್ತದೆ?
15. ಮರಣ ದಂಡನೆಯನ್ನು ವಿಧಿಸಲ್ಪಟ್ಟಿದ್ದ ಬೂಕರ್ ಪ್ರಶಸ್ತಿ ವಿಜೇತ ಲೇಖಕನಾರು?
16. ಶೆನ್‌ವಾರ್ನ್ ಕ್ರಿಕೆಟಿಗ ಯಾವ ರಾಷ್ಟ್ರದವರು?
17. ಡಾ.ಸಲಿಂ ಅಲಿ ಪಕ್ಷಿಧಾಮ ಯಾವ ರಾಜ್ಯದಲ್ಲಿ ಇದೆ?
18. ರಾಮಾಯಣ ಕಾಲದಲ್ಲಿ ಶ್ರೀಲಂಕಾವನ್ನು ಯಾವ ಹೆಸರಿನಿಂದ ಕರೆಯಲಾಗುತ್ತಿತ್ತು?
19. ಕರ್ನಾಟಕ ಸರಕಾರ ರೈತರ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸುವುದಕ್ಕಾಗಿ ಯಾವ ಯೋಜನೆಯನ್ನು, ಎಂದು ಆರಂಭಿಸಿತು?
20. ಆಫ್ರಿಕಾದ ವರ್ಣಭೇದದ ವಿರುದ್ಧ ಹೋರಾಡಿ "ನೈಟ್-ಹುಡ್" ಪ್ರಶಸ್ತಿ ಗಳಿಸಿದ ಬಿಳಿಯನಾರು?
21. ಇತ್ತೀಚೆಗೆ 'ಸರಸ್ವತಿ' ಚಿತ್ರವನ್ನು ಬೆತ್ತಲಾಗಿ ಚಿತ್ರಿಸಿ ವಿವಾದಕ್ಕೊಳಗಾದ ಚಿತ್ರ ಕಲಾವಿದನಾರು?
22. ಸಮವರ್ತಿ ಪಟ್ಟಿಯಲ್ಲಿರುವ ವಿಷಯಗಳ ಸಂಖ್ಯೆ ಎಷ್ಟು?
23. 'ಕೇರ್ ಇಂಟರ್‌ನ್ಯಾಷನಲ್ ಹ್ಯುಮನಿಟೇರಿಯನ್' ಎಂಬ ಪ್ರತಿಷ್ಠಿತ ಪ್ರಶಸ್ತಿಯನ್ನು 1998ರಲ್ಲಿ ಸ್ವೀಕರಿಸಿದ ಭಾರತೀಯನಾರು?
24. ಅಮೇರಿಕದ ಗಾಂಧಿ ಮಾರ್ಟಿನ್ ಲೂಥರ್ ಕಿಂಗ್‌ರನ್ನು ಹತ್ಯೆಗೈದ ವ್ಯಕ್ತಿಯಾರು?
25. ಕೊಲಂಬಿಯಾದ ರಾಜಧಾನಿ ಯಾವುದು?
26. ಪ್ರಸ್ತುತ ಪ್ರಪಂಚದಲ್ಲಿ ಇರುವ ಕುರುಡರ ಸಂಖ್ಯೆ ಎಷ್ಟು?
27. ರೋಹಿಣಿ-560 ರಾಕೆಟ್‌ನ್ನು ಯಾವ ಉಡಾವಣಾ ಕೇಂದ್ರದಿಂದ ಉಡಾಯಿಸಲಾಯ್ತು?
28. ಎ.ಬಿ. ಸುಬ್ಬಯ್ಯ ಯಾವ ಕ್ರೀಡೆಗಾಗಿ ಸುಪ್ರಸಿದ್ಧರು?
29. 'ಹಂಸ-3ಬಿ' ಅಂದರೇನು?
30. ಕೋಟಿ ಸೂರ್ಯರಿಗೆ ಸಮನಾದ ನಕ್ಷತ್ರ ಹೊಂದಿದೆಯೆಂದು ವಿಜ್ಞಾನಿಗಳು ತಿಳಿಸಿದ್ದಾರೆ, ಅದು ಯಾವುದು?
31. 1974ರಲ್ಲಿ ಪೋಖ್ರಾನ್‌ನಲ್ಲಿ ಸಿಡಿಸಿದ ಪರಮಾಣು ಪರೀಕ್ಷೆಯ ಸಂಕೇತ ಯಾವುದು?
32. ಚಂದ್ರನ ಆಯಸ್ಸು ಎಷ್ಟು?
33. ಕ್ಯೂಬಾ ದೇಶದ ಅಧಿಕೃತ ಭಾಷೆ ಯಾವುದು?
34. ಸಂವಿಧಾನದ 8ನೇ ಅನುಸೂಚಿಯು ಎಷ್ಟು ಅಧಿಕೃತ ಭಾಷೆಗಳನ್ನು ಒಳಗೊಂಡಿದೆ?
35. 'ಯುರೊ' ಎಂಬ ಏಕ ರೂಪದ ನಾಣ್ಯವು ಐರೋಪ್ಯದಲ್ಲಿ ಎಂದಿನಿಂದ ಜಾರಿಗೆ ಬರಲಿದೆ?
36. ಡಾಲಿ ಎಂಬ ಕೃತಕ ಕುರಿ-ಮರಿಯನ್ನು ಸೃಷ್ಟಿಸಿದವರು?
37. ವಿಶ್ವ-ಸಂಸ್ಥೆಯ ಧ್ವಜದ ಆಕಾರ ಯಾವುದು?
38. ಭಾರತದಲ್ಲಿ ಕುಸ್ತಿ ಫೆಡರೇಷನ್ ಎಂದು ಸ್ಥಾಪಿಸಲ್ಪಟ್ಟಿತು?
39. 1998ನೇ ಸಾಲಿನ 'ಮಹಾತ್ಮಾ ಗಾಂಧಿ' ಪ್ರಶಸ್ತಿ ಪಡೆದವರು ಯಾರು?
40. ಗುಪ್ತ-ವಂಶದ ಸ್ಥಾಪಕನಾರು?
41. ಕೊಂಕಣ ರೈಲ್ವೆ ಮಾರ್ಗದ ಉದ್ದವೆಷ್ಟು?
42. "Soccer"(ಸಾಕರ್) ಎಂದು ಯಾವ ಆಟಕ್ಕೆ ಕರೆಯಲಾಗಿದೆ?
43. 'ಶ್ರೀನಗರ' ಸ್ಥಾಪಿಸಿದ ಮೌರ್ಯ ಅರಸ ಯಾರು?
44. 'ಭೂಮಿಗೀತ'ದ ಕರ್ತೃ ಯಾರು?
45. ಚಿಪ್ಕೊ ಚಳವಳಿ ಮೊದಲಿಗೆ ಎಲ್ಲಿ ಆರಂಭಗೊಂಡಿತು?
46. ಇತ್ತೀಚೆಗೆ ತ್ರಿರಾಷ್ಟ್ರಗಳ ಶೃಂಗ ಸಭೆ ಎಲ್ಲಿ ನಡೆಯಿತು?
47. ದೋಗ್ರಿ ಭಾಷೆ ಮಾತನಾಡುವ ಜನ ಯಾವ ರಾಜ್ಯದಲ್ಲಿ ಕಂಡು ಬರುತ್ತಾರೆ?
48. ಇಲ್ಲಿಯವರೆಗೆ ಎಷ್ಟು ಜನ ಉರ್ದು ಸಾಹಿತಿಗಳು ಜ್ಞಾನ ಪೀಠ ಪ್ರಶಸ್ತಿ ಸ್ವೀಕರಿಸಿದ್ದಾರೆ?
49. ಅಂಚೆ ಚೀಟಿ ಬಳಸಿದ ಮೊದಲ ದೇಶ ಯಾವುದು?
50. 'ಮಗು ಮಾನವನ ತಂದೆ' (Child is father of man) ಎಂದು ಹೇಳಿದ ಆಂಗ್ಲ ಕವಿ ಯಾರು?

## ಉತ್ತರಗಳು

1.ಥ್ರಿಗಾರ್ಜಸ್, 2.ಸೂರ್ಯವಂಶ, 3.ಪ್ಲುಟಾರ್ಕ್, 4.Search for Extra Terrestrial Intelligence, 5. ರೋಹಿತ ದರ್ಶಿಶಾಸ್ತ್ರ 6.ಡಾರ್ವಿನ್, 7.ದೆಹಲಿ, 8. 5 ಸಲ, 9.ಅಂಟಾರ್ಕ್ಟಿಕಾ, 10.ಜೆ.ಎಸ್.ವರ್ಮಾ, 11.ಕೆ.ಆರ್. ನಾರಾಯಣನ್, 12.ದೆಹಲಿ, ಡಿ.ವಿ.ಎಸ್.ರಾಜು, 13.100, 14.ಜನವರಿ 30, 15.ಸಲ್ಮಾನ್ ರಷ್ದಿ, 16.ಆಸ್ಟ್ರೇಲಿಯ, 17.ಗೋವಾ, 18.ಲಂಕಾ, 19.ಗಂಗಾಕಲ್ಯಾಣ ಯೋಜನೆ, 1997-98ರಲ್ಲಿ, 20.ಆರ್ಚ್ ಬಿಷಪ್, 21.ಎಂ.ಎಫ್.ಹುಸೇನ್, 22.47, 23.ಅಣ್ಣಾ ಹಜಾರೆ, 24.ಜೇಮ್ಸ್ ಅರ್ಲ್, 25.ಬೊಗೋಟ, 26.38 ದಶಲಕ್ಷ, 27.ಶ್ರೀಹರಿಕೋಟ, 28.ಹಾಕಿ, 29.ವಿಮಾನದ ಹೆಸರು, 30. ಪ್ರಿಸ್ಟಲ್ 31.ಬುದ್ಧ ನಸುನಕ್ಕ, 32.4.6 ಬಿಲಿಯನ್ ವರ್ಷ, 33.ಸ್ಪ್ಯಾನಿಷ್, 34. 18, 35. 1. 1. 1999, 36. ಇಮಾನ್ ವಿಲ್ಮಟ್, 37. ಆಯತಾಕಾರ, 38.1948, 39. ಮನಮೋಹನ ಚೌಧುರಿ, 40.ಶ್ರೀಗುಪ್ತ, 41.760 ಕಿ.ಮೀ, 42.ಫುಟ್ಬಾಲ್, 43.ಅಶೋಕ, 44.ಎಂ.ಗೋಪಾಲಕೃಷ್ಣ ಅಡಿಗ, 45.ಉತ್ತರ ಪ್ರದೇಶದ ಮಂಡಳ ಹಳ್ಳಿ, 46.ಢಾಕಾ, 47.ಜಮ್ಮು ಹಾಗೂ ಕಾಶ್ಮೀರ, 48.3 ಜನ, 49. ಗ್ರೇಟ್ ಬ್ರಿಟನ್, 50.ವಿಲಿಯಂ ವರ್ಡ್ಸ್‌ವರ್ತ್.

■ ಶಿ.ಕಾ.ಬಡಿಗೇರ

# ನೀವೂ ಇಂಗ್ಲಿಷ್ ಕಲಿಯಿರಿ | ಭಾಗ-10

## ಸಾಮಾನ್ಯರೂ ಸುಲಭವಾಗಿ ಇಂಗ್ಲಿಷ್ ಕಲಿಯಬಹುದಾದ ಸರಳ ಮಾರ್ಗ ಇಲ್ಲಿದೆ

(ಹಿಂದಿನ ಸಂಚಿಕೆಯಿಂದ)

### ಕ್ರಿಯಾಪದ - Verb

ಜಾನಕಿ : ಜಾನ್, ಈಗ ಕ್ರಿಯಾಪದ ಅಭ್ಯಾಸ ಮಾಡಬೇಕು. ಅದು ಬಹಳ difficult ಅಂತಾರೆ. ಚಂದಾಗಿ ಹೇಳು. ತಿಳಿಬೇಕು ನೋಡು.

ಜಾನ್ : ಜಾನಕಿ, ನೀನು ಹೇಳುವುದು ನಿಜ. ತಿಳಿದುಕೊಂಡಿದ್ದು ಸರಿ. ಆದರೆ ಅಷ್ಟು difficult ಅಲ್ಲ. ಲಕ್ಷ್ಯ ಕೊಟ್ಟರೆ ಬಹಳ easy ಮತ್ತು Verb ಸರಿಯಾಗಿ ತಿಳಿದು ಕೊಂಡರೆ English ಸಲೀಸಾಗಿ ಬರ‍್ತದ.

ಜಾನಕಿ : ಹಾಗಾದರೆ ಚಂದಾಗಿ ಹೇಳು.... Verb ಅಂದರೇನು?

ಜಾನ್ : Verb ಅಂದರೆ.. ಇರಲಿ, ಮೊದ್ಲು ಹೇಳು, ವಾಕ್ಯ ಅಂದರೇನು?

ಜಾನಕಿ : ವಾಕ್ಯ ಅಂದರೆ ಸಂಪೂರ್ಣ ಅರ್ಥವನ್ನು ಕೊಡತಕ್ಕಂತಹ ಶಬ್ದಗಳ ಸಮೂಹ. ನೀನು ಹೇಳಿದ್ದಲ್ಲ 'A group of words which makes a complete sense is called a Sentence'.

ಜಾನ್ : Correct. ಶಬ್ದಗಳ ಸಮೂಹಕ್ಕೆ ಪೂರ್ಣಅರ್ಥ ಒದಗಿಸುವ ಪದ Verb. ಆ ಪದ, ಅಂದರೆ Verb ಇರದಿದ್ದರೆ ಶಬ್ದಗಳ ಸಮೂಹ ವಾಕ್ಯ ಆಗುವುದಿಲ್ಲ. ಅದು ಬರೇ ಶಬ್ದಗಳ ಸಮೂಹ....

ಜಾನಕಿ : ಸರಿ, ಅದಕ್ಕೇ ಹೇಳುವುದು Verbಗೆ ಭಾರಿ ಮಹತ್ವ ಅಂತ.....!

ಜಾನ್ : ಹೌದು. ಇಲ್ಲಿ ನೋಡು I **teach** English everyday. ಇಲ್ಲಿ ನಾಲ್ಕು ಶಬ್ದಗಳು ಇವೆ. ಅದರಲ್ಲಿ teach ಪದ ಇಲ್ಲ ಅಂದರೆ ಅರ್ಥ ಆಗುವುದಿಲ್ಲ. I English everyday ಅಂದರೇನು? ಕಲಿಯುತ್ತೇನೆ? ಓದುತ್ತೇನೆ? ಕೇಳುತ್ತೇನೆ? ಕಲಿಸುತ್ತೇನೆ? (Learn, Read, Listen, Teach)ಈ ಶಬ್ದಗಳಲ್ಲಿ ಒಂದಿದ್ದರೂ ಅರ್ಥವುಂಟು.

ಜಾನಕಿ : ನೀನು ಹೇಳಿದ್ದು ಹೇಗೆ ಅಂದರೆ 'ನಾನು ಕಲಿಸುತ್ತೇನೆ ಇಂಗ್ಲಿಷ್ ಪ್ರತಿ ದಿವಸ'.

ಜಾನ್ : ಹೌದು. ಕನ್ನಡ ವಾಕ್ಯ ರಚನೆ ಮತ್ತು ಇಂಗ್ಲಿಷ್ ವಾಕ್ಯ ರಚನೆಯಲ್ಲಿ ಭಿನ್ನತೆ ಇದೆ. ಕ್ರಿಯಾಪದದ ಸ್ಥಾನದಲ್ಲಿ ಬದಲಾವಣೆವುಂಟು.

ಜಾನಕಿ : ಉದಾಹರಣೆ ಹೇಳಿದರೆ ಸರಿಯಾಗಿ ತಿಳಿಯುತ್ತದೆ...

ಜಾನ್ : <u>ಪ್ರತಿದಿವ್ಸ</u> <u>ನಾನು</u> <u>ಇಂಗ್ಲಿಷ್</u> <u>ಕಲಿಸುತ್ತೇನೆ.</u> ಇದರಲ್ಲಿ

1 2 3 4

1. ಈ ಪದ ಸಮಯ ಸೂಚಿಸುವುದು
2. ಕರ್ತೃ ಪದ - Subject
3. ಕರ್ಮಪದ - Object
4. ಕ್ರಿಯಾಪದ - Verb

ಅಂದರೆ ಕನ್ನಡದಲ್ಲಿ Subject - Object - Verb- ಇದು ವಾಕ್ಯ ರಚನೆ. - SOV (ಸಂಕ್ಷಿಪ್ತದಲ್ಲಿ)

ಜಾನಕಿ : ಇಂಗ್ಲಿಷಿನಲ್ಲಿ ನಾನು ಹೇಳ್ತೇನೆ.

ಜಾನ್ : ಇರಲಿ. ಮೊದಲು ಸರಿಯಾಗಿ ಕಲಿತುಕೋ.

**<u>I</u> <u>teach</u> <u>English</u> <u>everyday</u>**

1 2 3 4

1.Subject 2.Verb 3.Object 4.Time

ಅಂದರೆ ರಚನೆ - **S.V.O**

| **ಕನ್ನಡದಲ್ಲಿ** | **ಇಂಗ್ಲಿಷಿನಲ್ಲಿ** |
|---|---|
| **SOV** | **S.V.O** |

ಅಂದರೆ ಇಂಗ್ಲಿಷ್ ವಾಕ್ಯದಲ್ಲಿ ಕರ್ತೃ ಪದದ ಮುಂದೆಯೆ ಕ್ರಿಯಾಪದ ಬರಬೇಕು.

ಜಾನಕಿ : ಕ್ರಿಯಾಪದದ ಮಹತ್ವ ಏನು ಹೇಳಲಿಲ್ಲ?

ಜಾನ್ : Yes, ನೆನಪು ಮಾಡಿದ್ದು ಸರಿ. ಒಂದು ವಾಕ್ಯದಲ್ಲಿ - ಅಂದರೆ Simple sentenceದಲ್ಲಿ ಒಂದೇ Finite verb ಇರಬೇಕು. ಮತ್ತೆ Infinite verb ಇರಬಹುದು. ವಾಕ್ಯಗಳಲ್ಲಿ ಮೂರು ವಿಧ. ಆಮೇಲೆ ನೋಡೋಣ.

ಜಾನಕಿ : Finite verb ಅಂದರೆ.......

ಜಾನ್ : ನಿನಗೆ ಹೇಳುವ ತನಕ ತಾಳ್ಮೆ ಇಲ್ಲ ನೋಡು. ಈಗೊಂದು ಉದಾಹರಣೆ ಹೇಳ್ತೇನೆ ಕೇಳು.

i) ನಾನು **ಕಲಿಯಲಿಕ್ಕೆ** ಶಾಲೆಗೆ **ಹೋಗುತ್ತೇನೆ.** ಇದನ್ನು English ನಲ್ಲಿ ಹೇಳ್ತೇನೆ -I **go** to school **to learn.** ಈ ವಾಕ್ಯದಲ್ಲಿ ಹೋಗುತ್ತೇನೆ-'**go**'-ಇದು Finite verb ಮತ್ತು ಕಲಿಯಲಿಕ್ಕೆ **to learn** -ಇದು Infinite verb.

ಜಾನಕಿ : ಸರಳವಾಗಿದೆ. ತಿಳಿತು ಬಿಡು. ಕ್ರಿಯಾಪದದ ಮೂಲರೂಪದ ಹಿಂದೆ 'to' ಹಚ್ಚಿದರಾಯ್ತು, ಅದೇ Infinite verb. ನಾನೇ ಉದಾಹರಣೆ ಹೇಳ್ತೇನೆ, to go, to read, to see, to talk. I **go** to well **to bring** water. **Go** ಇದು Finite verb ಮತ್ತು **to bring** ಇದು Infinite verb.

ಜಾನ್ : ಭಾರಿ ಸಂತೋಷ,. ನೀನು ಏಕಪಾಠಿ ಮತ್ತು ಬುದ್ಧಿವಂತೆ!

ಜಾನಕಿ : ನೀನು ಹೊಗಳುವುದು ಸಾಕು. ಮುಂದಿನದನ್ನು ಕಲಿಸು.

ಜಾನ್ : ಇನ್ನೊಮ್ಮೆ ಹೇಳ್ತೇನೆ, ಲಕ್ಷ್ಯದಲ್ಲಿಡು. **ಒಂದು ವಾಕ್ಯದಲ್ಲಿ finite verb ಒಂದೇ ಇರಬೇಕು.** ಕ್ರಿಯಾಪದದಲ್ಲಿ ಮುಖ್ಯವಾಗಿ ಎರಡು ವಿಧಗಳು :

i) **Transitive verb - ಸಕರ್ಮಕ ಕ್ರಿಯಾಪದ**

ii) **Intransitive verb - ಅಕರ್ಮಕ ಕ್ರಿಯಾಪದ**

ಕ್ರಿಯಾಪದವು ಕರ್ತೃವಿನ ಕ್ರಿಯೆಯನ್ನು ಸೂಚಿಸುವುದು. ಆ

ಕ್ರಿಯೆ ಕರ್ಮಪದಕ್ಕೆ ಸಂಬಂಧಿಸಿದ್ದರೆ ಅದು ಸಕರ್ಮಕ ಕ್ರಿಯಾಪದ (Transitive verb).
ಇದನ್ನು ಸರಳವಾಗಿ ಹೇಳುವುದಾದರೆ, ಕ್ರಿಯಾಪದಕ್ಕೆ 'ಏನು?' (What?) ಅಂತಾ ಪ್ರಶ್ನೆ ಮಾಡಿದರೆ ಕರ್ಮಪದವು ಉತ್ತರವಾಗಿದ್ದಲ್ಲಿ ಆ ಕ್ರಿಯಾಪದ **Transitive Verb.** ಉದಾ : I eat fruit. **What** do I eat? ಇಲ್ಲಿ ಉತ್ತರವೇನು?**Fruit** ಹಾಗಾದರೆ Eat ಇದು Transitive verb

ಜಾನಕಿ : ನಾನು ಕೆಲವು ಹೇಳ್ತೀನೆ.
i) I **see** cinema.
ii) She **sings** a song.
iii) They **learn** English.
iv) It **drinks** water.

ಜಾನ್ : Very good. ಇನ್ನು, ಕೆಲವು ಕ್ರಿಯಾಪದಗಳಿಗೆ ಹೀಗೆ ಉತ್ತರ ಸಿಗುವುದಿಲ್ಲ. ಉದಾ. Janaki **comes.** I **laugh.** Dog **runs.** They **jump.** ಇಲ್ಲಿ **come, laugh, run, jump** ಇವುಗಳಿಗೆ 'what' ಅಂತಾ ಪ್ರಶ್ನೆ ಮಾಡಿದರೆ ಉತ್ತರ ಸಿಗುವುದಿಲ್ಲ. ಇಂತಹ ಕ್ರಿಯಾಪದಗಳನ್ನು ಅಕರ್ಮಕ ಕ್ರಿಯಾಪದ (Intransitive Verb) ಎನ್ನುವರು.

ಜಾನಕಿ : ಅಂದರೆ ಇವುಗಳಿಗೆ ಕರ್ಮಪದ ಇಲ್ಲ ಅಂತ ಅರ್ಥ. ಹೌದಲ್ಲೊ?

ಜಾನ್ : ಕೆಲವು ಕ್ರಿಯಾಪದಗಳನ್ನು ಎರಡು ರೀತಿಯಲ್ಲೂ (ಸಕರ್ಮಕ ಮತ್ತು ಅಕರ್ಮಕ ರೂಪದಲ್ಲಿ) ಉಪಯೋಗಿಸಬಹುದು. ಅದನ್ನು ರೂಢಿಯಿಂದ ಕಲಿಯಬಹುದು. ಆದರೂ ಕೆಲವು ಉದಾಹರಣೆ ಹೇಳ್ತೀನೆ, ಕೇಳು,

| **Transitive form** | **Intransitive form** |
|---|---|
| I **stopped** teaching English | The bus **stopped** suddenly |
| The boys **fly** kites | Birds **fly** |
| The peon **rings** the bell | The bell **rang** loudly |
| The bulls **fought** the tiger | The soldier **fights** fiercely |

ಜಾನಕಿ : **Verb**ದ ಮಹತ್ವ ಹೇಳ್ತೀನೆ ಅಂದಿ. ಹೇಳಲಿಲ್ಲ?

ಜಾನ್ : ಮುಖ್ಯವಾಗಿ ಮೂರು ಕಾಲ (Tense)ಗಳು.
ವರ್ತಮಾನ ಕಾಲ (ಸದ್ಯಕ್ಕೆ) **Present Tense**
ಭೂತಕಾಲ (ಆಗಿ ಹೋದದ್ದು) **Past Tense**
ಭವಿಷ್ಯತ್ಕಾಲ (ಮುಂದೆ ಆಗುವುದು) **Future Tense**
ಈ **Tense**ಗಳನ್ನು ಸೂಚಿಸುವ ಪದ ಕ್ರಿಯಾಪದ. ವಾಕ್ಯದಲ್ಲಿ ಉಪಯೋಗಿಸಿದ ಕ್ರಿಯಾಪದದ ರೂಪದಿಂದ ವಾಕ್ಯದ Tense (ಕಾಲ) ಹೇಳುವುದು.
**Present Tense** - I love you
**Past Tense** - I loved you
**Future Tense** - I shall love you
ಇದರ ಇನ್ನುಳಿದ ವಿವರವನ್ನು ಮುಂದಿನ ಅವಧಿಯಲ್ಲಿ ಹೇಳ್ತೀನೆ.

ಜಾನಕಿ : ಈಗ ಕೆಲವು ಪದಗಳನ್ನು (ಕ್ರಿಯಾಪದಗಳನ್ನು) ಹೇಳು, ಅವುಗಳನ್ನು ಗುರ್ತಿಸುತ್ತೇನೆ.

## ಕೊನೆಯ ಹನಿ

ಜಾನ್ : ಸರಿ, **Transitive and Intransitive** ಯಾವುವು ಅನ್ನುವುದನ್ನು ಕಂಡು ಹಿಡಿಯಬೇಕು.
i) The Sun **shines** brightly.
ii) The woman **cut** her finger.
iii) The **clock** stopped.
iv) He **stopped** the clock.
v) Rain **falls.**

ಜಾನಕಿ : i) **Shines** - Intransitive Verb
ii) **Cut** - Transitive Verb
iii) **Stopped** - Intransitive Verb
iv) **Stopped** - Transitive Verb
v) **Falls** - Intransitive Verb

ಜಾನ್ : Very good. ಸರಿಯಾಗಿ ತಿಳಿದುಕೊಂಡಿರು. ಮುಂದಿನ ಸಲ 'Mood' ಮತ್ತು Tense ಇವುಗಳ ವಿವಿಧ ರೂಪಗಳನ್ನು ಅಭ್ಯಾಸ ಮಾಡೋಣ.

## ಶಬ್ದ ಸಂಪತ್ತು

**ಪ್ರತಿ ಶಬ್ದಕ್ಕೆ 4 ಅರ್ಥಕೊಟ್ಟಿದ್ದು, ಕೊಟ್ಟ ಶಬ್ದದ ಸಮಾನಾರ್ಥ ಪದ ಹುಡುಕಿರಿ, ನಂತರ ಉತ್ತರ ನೋಡಿ.**

a. Transcend - ಅ. ಚಲಿಸು ಬ. ಸ್ಥಿರವಾದ ಕ. ಬದಲಾವಣೆ ಡ. ಮಿತಿ(ದಾಟಿಹೋಗು)

b. Votary - ಅ. ಮತ ಸಂಗ್ರಹ ಬ. ಕಾನೂನು ಕ. ಪೂಜಿಸುವವ ಡ. ತಗ್ಗು

c. Presumptuous - ಅ. ಸೊಕ್ಕಿನ ಬ. ಗೌರವ ಕ. ಗ್ರಹಿಸು ಡ. ನ್ಯಾಯಯುತ.

d. Status-Quo - ಅ. ಸ್ಥಾನ ಬದಲಾವಣೆ ಬ. ಪರಿಸ್ಥಿತಿ ಇದ್ದ ಹಾಗೆ ಕ. ಹೊಸ ವ್ಯವಸ್ಥೆ ಡ. ಆದರ್ಶ.

e. Affronting - ಅ. ಭೇಟಿಯಾಗು ಬ. ಅಪಮಾನ ಮಾಡು ಕ. ವಿವಾದ ಡ. ಎದುರು

f. Derogatory - ಅ. ಒರಟು ಬ. ಅಗೌರವ ಕ. ತಿರಸ್ಕಾರ ಡ. ಪ್ರಶ್ನೆ

**ಉತ್ತರಗಳು:**
a. ಡ b. ಕ c. ಅ d. ಬ e. ಬ f. ಬ

# ಜವಾನರ ಹುದ್ದೆಗಾಗಿ ಅರ್ಜಿ ಆಹ್ವಾನ

ರೂ.2550-55-2660-60-3200/-ರ ವೇತನ ಶ್ರೇಣಿಯಲ್ಲಿ ಉಪ ನಿರ್ದೇಶಕರು ಎನ್‌ಎಸ್‌ಎಸ್‌ಓ (ಎಫ್‌ಓಡಿ) 5ನೇ ಅಂತಸ್ತು, ಇ ಅಂಡ್ ಎಫ್ ವಿಂಗ್, ಕೇಂದ್ರೀಯ ಸದನ್, ಕೋರಮಂಗಲ, ಬೆಂಗಳೂರು ಇವರ ಕಚೇರಿಯಲ್ಲಿ 2 ಜವಾನರ ಹುದ್ದೆಗಳ (ಗ್ರೂಫ್ 'ಡಿ') ನೇಮಕಾತಿಗಾಗಿ ಕೆಳಕಂಡ ಷರತ್ತುಗಳನ್ನು ಪೂರೈಸುವ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. (ಒಂದು ಹುದ್ದೆ ಖಾಯಂ ಆಧಾರದ ಮೇಲೆ, ಮತ್ತೊಂದು ಹುದ್ದೆ ಆರು ತಿಂಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ)

**1. ವಿದ್ಯಾರ್ಹತೆ :**
ಮಾಧ್ಯಮಿಕ ಶಾಲೆ 7ನೇ ತರಗತಿ ತೇರ್ಗಡೆ.

**2. ವಯಸ್ಸು:**
18 ರಿಂದ 25 ವರ್ಷಗಳವರೆಗೆ, ಜಾರಿಯಲ್ಲಿರುವ ಸರಕಾರಿ ನಿಯಮಗಳ ರೀತ್ಯ ಎಸ್‌ಸಿ/ಎಸ್‌ಟಿ/ಓಬಿಸಿ/ಮಾಜಿ ಯೋಧರಿಗೆ ಗರಿಷ್ಠ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು. ಪಾಸ್‌ಪೋರ್ಟ್ ಅಳತೆಯ ಇತ್ತೀಚಿನ ಎರಡು ಭಾವಚಿತ್ರದೊಂದಿಗೆ ಸಂಪೂರ್ಣ ವ್ಯಕ್ತಿಗತ ವಿವರದೊಡನೆ ಅರ್ಜಿಯನ್ನು **14-10-98ರಿಂದ 30 ದಿನಗಳ ಒಳಗಾಗಿ ಉಪ ನಿರ್ದೇಶಕರು (ಎಸ್‌ಸಿ), ಎನ್‌ಎಸ್‌ಎಸ್‌ಓ (ಎಫ್‌ಓಡಿ) 5ನೇ ಅಂತಸ್ತು, ಇ ಅಂಡ್ ಎಫ್ ವಿಂಗ್, ಕೇಂದ್ರೀಯ ಸದನ, ಕೋರಮಂಗಲ - ಬೆಂಗಳೂರು - 560034** ಇವರಿಗೆ ತಲುಪುವಂತೆ ಸಲ್ಲಿಸಬೇಕು. ಕೇಂದ್ರ/ರಾಜ್ಯ ಸರ್ಕಾರಿ/ಸ್ವಾಯತ್ತ ಸಂಸ್ಥೆಯೊಂದರಲ್ಲಿ ಕೆಲಸ ಮಾಡುತ್ತಿರುವ ಅಭ್ಯರ್ಥಿಗಳು ತಮ್ಮ ಮೇಲಧಿಕಾರಿಗಳ ಮುಖೇನ ಅರ್ಜಿ ಸಲ್ಲಿಸಬೇಕು.

■

# ಹಿಂದುಳಿದ ವರ್ಗದ ನಿರುದ್ಯೋಗಿ ಡಿಪ್ಲೊಮಾ ಅಭ್ಯರ್ಥಿಗಳಿಗೆ ತರಬೇತಿ: ಅರ್ಜಿ ಆಹ್ವಾನ

ಹಿಂದುಳಿದ ವರ್ಗಗಳ ನಿರುದ್ಯೋಗಿ ಡಿಪ್ಲೊಮೊದಾರರಿಗೆ ಪೋಸ್ಟ್ ಡಿಪ್ಲೊಮಾ ಇನ್ ಫೋರ್‌ಮನ್‌ಶಿಪ್‌ನಲ್ಲಿ, ಪ್ರೊಡಕ್ಷನ್ ಇಂಜಿನಿಯರಿಂಗ್ ಇಂಡಸ್ಟ್ರೀಯಲ್ ಇಂಜಿನಿಯರಿಂಗ್ ಹಾಗೂ ಮೆಂಟೆನೆನ್ಸ್ ಇಂಜಿನಿಯರಿಂಗ್‌ನಲ್ಲಿ ಒಂದು ವರ್ಷದ ತರಬೇತಿ ಮತ್ತು ಐಟಿಐ ಅಥವಾ ಎನ್.ಎ.ಸಿ ಸರ್ಟಿಫಿಕೇಟ್ ಹೊಂದಿರುವವರಿಗೆ 2 ವರ್ಷದ ಡಿಪ್ಲೊಮೊ ಇನ್ ಫೋರ್‌ಮನ್ ಶಿಪ್ ತರಬೇತಿಗೆ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಅರ್ಜಿ ಆಹ್ವಾನಿಸಿದೆ.

**ಅರ್ಹತೆ :**

ಅಭ್ಯರ್ಥಿಗಳು ಹಿಂದುಳಿದ ವರ್ಗಗಳ ಪ್ರವರ್ಗ-1, 2ಎ, 3ಎ ಮತ್ತು 3ಬಿಗಳಿಗೆ ಸೇರಿದವರಾಗಿದ್ದು, ಕುಟುಂಬದ ಒಟ್ಟು ವಾರ್ಷಿಕ ವರಮಾನ 22 ಸಾವಿರ ರೂಪಾಯಿಗಳಿಗಿಂತ ಹೆಚ್ಚಿರಬಾರದು. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳು ಹಾಗೂ ಅಲ್ಪಸಂಖ್ಯಾತರ ಅಭ್ಯರ್ಥಿಗಳನ್ನು ಹೊರತುಪಡಿಸಿ).

**ವಯೋಮಿತಿ:**

18 ರಿಂದ 25 ವರ್ಷಗಳು.

**ವಿದ್ಯಾರ್ಹತೆ:**

(ಪೋಸ್ಟ್ ಡಿಪ್ಲೊಮೊ ಇನ್ ಫೋರ್‌ಮನ್‌ಶಿಪ್) ಮೆಕ್ಯಾನಿಕಲ್‌ನಲ್ಲಿ ಡಿಪ್ಲೊಮೊ ಪಡೆದಿರಬೇಕು. ಶೇ.50ಕ್ಕಿಂತ ಹೆಚ್ಚು ಅಂಕ ಗಳಿಸಿರಬೇಕು. (ಡಿಪ್ಲೊಮಾ ಇನ್ ಫೋರ್ಮನ್‌ಶಿಪ್) ಎಸ್.ಎಸ್.ಎಲ್.ಸಿ, ಐಟಿಐ, ಎನ್‌ಎಸಿ ಸರ್ಟಿಫಿಕೇಟ್, ಟರ್ನರ್, ಫಿಟ್ಟರ್, ಪುಶನಿಸ್ಟ್, ಮೆಶಿನಿಸ್ಟ್, ಗ್ರೈಡರ್‌ನಲ್ಲಿ ಕನಿಷ್ಠ ಶೇ.50ಕ್ಕಿಂತ ಹೆಚ್ಚು ಅಂಕ ಗಳಿಸಿರಬೇಕು.

**ತರಬೇತಿ ಅವಧಿ :**

ಪೋಸ್ಟ್ ಡಿಪ್ಲೊಮಾ ಇನ್ ಫೋರ್‌ಮನ್ ಶಿಪ್ - ಒಂದು ವರ್ಷ. ಡಿಪ್ಲೊಮಾ ಇನ್ ಫೋರಮನ್ ಶಿಪ್ - ಎರಡು ವರ್ಷ.

**ಭತ್ಯೆ :**

ಮಾಹೆಯಾನ 500 ರೂಪಾಯಿ. ತರಬೇತಿ ಪಡೆಯಲು ಇಚ್ಛಿಸುವ ಅರ್ಹ ಅಭ್ಯರ್ಥಿಗಳು **ನವೆಂಬರ್ 21** ರೊಳಗೆ ಅರ್ಜಿ ಸಲ್ಲಿಸುವಂತೆ ಕೋರಲಾಗಿದೆ.

ವಿವರಗಳಿಗಾಗಿ

**ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, 144, ಸೇಂಟ್ ಜಾನ್ ಚರ್ಚ್ ರಸ್ತೆ, 'ಅಂಜಲಿ', ಮೊದಲ ಮಹಡಿ, ಶ್ರೀ ಕೃಷ್ಣರಾಜ ಒಡೆಯರ್ ನಗರ, ಬೆಂಗಳೂರು-5** ಇಲ್ಲಿಗೆ ಸಂಪರ್ಕಿಸಬೇಕು.

# ಭಾರತದ ವಯಾಗ್ರಾ

**ಅಡ್ಡ ಪರಿಣಾಮವಿಲ್ಲದ ಈ ವಯಾಗ್ರಾ, ಉಪಯೋಗಿಸಿ ವೀರರಾಗಬಾರದೇಕೆ?**

ಅಮೆರಿಕದ ವಯಾಗ್ರಾದ ಬೆಲೆ ಹೆಚ್ಚು. ಈ ಮಾತ್ರೆಗಳು ತುಂಬಾ ದುಬಾರಿ ಎಂದೊಡನೆ ಭಾರತದ ವಯಾಗ್ರಾದ ಬೆಲೆಯಲ್ಲಿ ವಿಪರೀತ ಹೆಚ್ಚಳವಾಯಿತು. ಅಮೆರಿಕೆಯದಕ್ಕೆ ಹೋಲಿಸಿದರೆ ಕಡಿಮೆ ಎನ್ನಬಹುದಾದರೂ ಭಾರತೀಯನ ಬಡಜೇಬು ಬರಿದಾಯಿತು. ಕಂಡರಿಯದ, ಕೇಳರಿಯದಷ್ಟು ಹೆಚ್ಚಳ ಬೆಲೆಯಲ್ಲಿ. ಭಾರತದ ವಯಾಗ್ರಾದಿಂದ ಯಾವುದೇ ರೀತಿಯ ಸೈಡ್ ಇಫೆಕ್ಟ್ ಇಲ್ಲ. ಹೃದಯಾಘಾತವಿಲ್ಲ. ಕಿಡ್ನಿ ಫೇಲ್ ಆಗುವುದಿಲ್ಲ. ಆದರೆ ತನ್ನ ಕಾರ್ಯ ಮಾಡುವುದನ್ನು ಬಿಡುವುದಿಲ್ಲ. ಭಾರತದ ವಯಾಗ್ರಾ ಮುಖ್ಯವಾಗಿ ಹಲವು ಜೀವಸತ್ವ ತುಂಬಿಕೊಂಡಿದ್ದು, ಔಷಧದ ಕಾರ್ಯವನ್ನು ಮಾಡುತ್ತದೆ. ಆದರ ದೋಷ ಮಾತ್ರ ಒಂದೇ ಒಂದು: ವಾಸನೆ.




ಈರುಳ್ಳಿ-ನೀರುಳ್ಳಿ-ಓನಿಯನ್-ಉಳ್ಳಾಗಡ್ಡಿ-ಖಾಂದಾ ಇತ್ಯಾದಿ ಹೆಸರು ಅದಕ್ಕೆ. ಇಲ್ಲಿಯವರೆಗೆ ಅದನ್ನು ಬೆಳೆಯುವವರು ಮಾತ್ರ ಅಳುತ್ತಿದ್ದು, ಈಗ ತರುವವರು ಅಳುವಂತಾಗಿದೆ.

ಇದರಲ್ಲಿರುವ ಪ್ರಮುಖ ಗುಣ ಶಕ್ತಿವರ್ಧಕ. ಬಡವರಿಗೆ ಇದು ಅತ್ಯಾವಶ್ಯಕವಾಗಿದ್ದುದರಿಂದಲೇ ಅವರಿಗೆ ಹೆಚ್ಚು ಮಕ್ಕಳು. ಬಡವರಿಗೆ ಹೃದಯಾಘಾತವಾಗಿದ್ದು ಕೇಳಿರುವಿರಾ? ಅವರು ಈರುಳ್ಳಿಯನ್ನು ಅಧಿಕ ಪ್ರಮಾಣದಲ್ಲಿ ಉಪಯೋಗಿಸುವುದರಿಂದ ಅವರ ಎದೆ ಗುಂಡಿಗೆಯನ್ನು ಇದು ರಕ್ಷಿಸುತ್ತದೆ. ರಕ್ತ ಹೆಪ್ಪುಗಟ್ಟುವುದನ್ನು ತಪ್ಪಿಸುವುದು.

ಇದು ಜೀವಸತ್ವ, ಪ್ರೊಟೀನ್ ಮತ್ತು ಕ್ಯಾಲ್ಸಿಯಂನಿಂದ ಸಂಪದ್ಭರಿತವಾಗಿದೆ. ''ಎ'' ಮತ್ತು ''ಸಿ'' ಜೀವಸತ್ವ ಇದರಲ್ಲಿ ವಿಪುಲ. ವಯಾಗ್ರಾದಂತೆ ಇದು ಸಹ ಶಕ್ತಿವರ್ಧಕ.

ಬೊಕ್ಕತಲೆಯವರಿಂದ ಹಿಡಿದು ಹಾವನ್ನು ಕಡಿಸಿಕೊಂಡವರಿಗೆ, ರಕ್ತಹೀನತೆಯಿಂದ ಬಳಲುತ್ತಿರುವವರಿಗೆ, ಮಧುಮೇಹದವರಿಗೆ ಇದು ಔಷಧಿ. ಈರುಳ್ಳಿಯನ್ನು ನೀರಲ್ಲಿ ಕುದಿಸಿ, ರಸವನ್ನು ಹಿಂಡಿ ಅದನ್ನು ಕುಡಿಯುವುದರಿಂದ ಮೂತ್ರ ಉರಿತ ಶಮನವಾಗುವುದು.

ಇದರ ರಸವನ್ನು ಹಣೆಗೆ ಲೇಪಿಸುವುದರಿಂದ ಜ್ವರ ನಿವಾರಣೆಯಾಗುವುದು. ಮೂರ್ಛೆ ಹೋದವರಿಗೆ, ಮೂಗಿನಲ್ಲಿ ರಕ್ತ ಒಸರುತ್ತಿದ್ದರೆ, ಈರುಳ್ಳಿ ಹಿಂಡಿ 3-4 ಹನಿ ಮೂಗಿನಲ್ಲಿ ಹನಿಕಿಸಿದರೆ ಗುಣವಾಗುವುದು. ಹಲ್ಲನ್ನು ರಕ್ಷಿಸುವ ಈರುಳ್ಳಿ ಕ್ರಿಮಿನಾಶಕವು ಹೌದು. ಶೀತ, ಕಫ, ಲಿವರ್ ತೊಂದರೆಗೆ ಇದು ರಾಮಬಾಣ.

ರೋಗ ನಿವಾರಕವು ಹೌದು. ಆರೋಗ್ಯ ಕಾಪಾಡಿ ಶಕ್ತಿಯನ್ನು ಒದಗಿಸುತ್ತದೆ. ಇದೊಂದು ನೈಸರ್ಗಿಕ ಆಹಾರವು ಹೌದು. ಆಹಾರದಲ್ಲಿ ಇದನ್ನು ಅಧಿಕ ಉಪಯೋಗ ಮಾಡುವವರು ಸದೃಢ ಕಾಯರಾಗಿರುವುದರಲ್ಲಿ ಸಂಶಯವಿಲ್ಲ. ಕೆಂಪು ಈರುಳ್ಳಿ ಹಸಿವು ಹೆಚ್ಚಿಸುವುದು ಮತ್ತು ಗಾಢವಾದ ನಿದ್ದೆ ಬರಿಸುವುದು. ಬಿಳಿ ಈರುಳ್ಳಿ ಶೀತ-ಕಫ ನಿವಾರಕ ಮತ್ತು ಹಸಿವನ್ನು ಉಂಟುಮಾಡುವುದು.

ಶುಂಠಿ, ಜೇನುತುಪ್ಪ ಹಾಗೂ ಇದರ ರಸ ಮಿಶ್ರಣ ಮಾಡಿ ಸೇವಿಸಿದರೆ ಭೇದಿ, ಆಮಶಂಕೆ ನಿವಾರಣೆಯಾಗುವುದು, ಮಲಬದ್ಧತೆ ಮಾಯವಾಗುವುದು.

## ಚರಿತ್ರೆ

ಇಂಗ್ಲಿಷಿನ ಓನಿಯನ್ ಲ್ಯಾಟಿನ್ ಶಬ್ದದ 'ಯುನಿಯೊ' ದಿಂದ ಬಂದಿದೆ: ಯುನಿಯೊ ಅಂದರೆ ದೊಡ್ಡಗಾತ್ರದ ಮುತ್ತು (Pearl). ಇದು ಯುನಿಯನ್ (Union) ಸಹ ಹೌದು. ಅದರ ಎಲ್ಲ ಪದರುಗಳು ಒಕ್ಕಟ್ಟಿನಿಂದ, ಸುವ್ಯವಸ್ಥಿತವಾಗಿರುವುದಿಲ್ಲವೆ?

ಕಿ.ಪೂ. 173ರಲ್ಲಿ ಈಜಿಪ್ತದವರು ಈರುಳ್ಳಿಯನ್ನು ಅತ್ಯಧಿಕ ಪ್ರಮಾಣದಲ್ಲಿ ಉಪಯೋಗಿಸುತ್ತಿದ್ದರೆಂದು ತಿಳಿಯುವುದು. ಅದು ಶಕ್ತಿವರ್ಧಕವೆಂದು, ಅದರ ಉಪಯೋಗದಿಂದ ಮನುಷ್ಯ ಬಲಶಾಲಿಯಾಗುವನೆಂದು ಅವರು ಅರಿತಿದ್ದರು. ಪಿರಮಿಡ್ ಕಟ್ಟುತ್ತಿದ್ದ ಕೂಲಿಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಈರುಳ್ಳಿ ತಿನ್ನಿಸುತ್ತಿದ್ದರೆಂದು ಇತಿಹಾಸ ಹೇಳುವುದು. ಈರುಳ್ಳಿಯ ಪ್ರೀತಿಯ ದ್ಯೋತಕವಾಗಿ ಯಹೂದಿಯರು 'ಓನಿಯನ್' ಎನ್ನುವ ಪಟ್ಟಣವನ್ನೇ ಕಟ್ಟಿದರು.

ರೋಮನ್‌ರು ತಮ್ಮ ಜೊತೆ ಈರುಳ್ಳಿಯನ್ನು ಇಂಗ್ಲೆಂಡ್‌ಗೆ ಒಯ್ದರು. ಇದರ ವೈದ್ಯಕೀಯ ಗುಣಧರ್ಮ ಅರಿತು ಇಂಗ್ಲಿಷರು ಇದನ್ನು ಹೆಚ್ಚಾಗಿ ಉಪಯೋಗಿಸತೊಡಗಿದರು. 1664ರಲ್ಲಿ ಪ್ಲೇಗ್‌ರೋಗ ಹರಡಿದಾಗ ಈರುಳ್ಳಿ ಹಾಗೂ ಬೆಳ್ಳುಳ್ಳಿಯನ್ನೇ ವಿಶೇಷವಾಗಿ ರೋಗಿಗಳಿಗೆ ತಿನ್ನಿಸಿದ್ದುಂಟು. ಈಜಿಪ್ತ, ರೋಮ್, ಗ್ರೀಸ್, ಇಂಗ್ಲೆಂಡ್, ರಶಿಯಾ ಮುಂತಾದ ದೇಶಗಳಲ್ಲಿ ಪ್ರಾಚೀನ ಕಾಲದಿಂದಲೂ ಈರುಳ್ಳಿ ಉಪಯೋಗಿಸುತ್ತಿದ್ದರೆಂದು ಸ್ಪಷ್ಟವಾಗಿದೆ. ಭಾರತವಂತೂ ಸರಿಯೆ. ಅಡ್ಡ ಪರಿಣಾಮವಿಲ್ಲದ ಈ ವಯಾಗ್ರಾ, ಉಪಯೋಗಿಸಿ ವೀರರಾಗಬಾರದೇಕೆ? ಹಿತ್ತಲ ಗಿಡ ಮದ್ದಲ್ಲವೆಂಬುದು ಗಾದೆ ಮಾತು; ನಿಜ. ಆದರೆ ವಿಷಯ ಅರಿತ ಬಳಿಕ ಉಪಯೋಗಿಸಬೇಕಲ್ಲವೆ?

**■ ಬಿ.ಕೆ.ಸೋಮನಾಥ್**




**ಜನ ಕಾನೂನನ್ನು ಪಾಲಿಸುತ್ತಾರೆಯೇ ಎಂಬುದನ್ನು ನ್ಯಾಯಾಲಯ ಹಾಗೂ ಪೊಲೀಸ್ ವ್ಯವಸ್ಥೆ ಗಮನಿಸುತ್ತದೆ. ಆದರೆ ಸರಕಾರ ತನ್ನ ಕಾನೂನುಗಳನ್ನು ಮನ್ನಿಸುತ್ತಿದೆಯೇ ಎಂಬುದನ್ನು ಪರೀಕ್ಷಿಸುವವರು ಯಾರು?**

■ **ಮಾಧವ ಐತಾಳ್**

**1984** ಡಿಸೆಂಬರ್ 10 ರಂದು ಮಾನವ ಹಕ್ಕುಗಳನ್ನು ಕುರಿತ ಜಾಗತಿಕ ಘೋಷಣೆ ಮೊಳಗಿತು. ಈ ಘೋಷಣೆಗೆ ಭಾರತವೂ ಸಹಿ ಹಾಕಿದೆ.

ಇಂದಿನ ರಾಜಕೀಯ ವ್ಯವಸ್ಥೆಯಲ್ಲೆರಡು ಸ್ಪಷ್ಟ ಬೆಳವಣಿಗೆಗಳನ್ನು ಕಾಣಬಹುದು. ಒಂದು ಜನಾಂಗೀಯ ವಿಭಿನ್ನತೆ. ತಮ್ಮದೇ ಗುರಿ, ರಾಷ್ಟ್ರೀಯತೆಯನ್ನುಳ್ಳ ವಿವಿಧ ರಾಜ್ಯಗಳು ದೇಶದೊಡನೆ ಸಂಘರ್ಷದ ದಾರಿ ಹಿಡಿದಿವೆ. ಎರಡು ಸಾಂಸ್ಕೃತಿಕ, ಜಾತ್ಯಾತೀತವಾದ. ಮಾನವ ಹಕ್ಕುಗಳನ್ನು ರಕ್ಷಿಸುವ ವ್ಯವಸ್ಥೆಯೊಂದು ಪ್ರಜಾಪ್ರಭುತ್ವಕ್ಕೆ ಸ್ಥಾನ ದೊರಕಿಸಿಕೊಡಲು ತಲೆ ಎತ್ತಿದೆ.

ಮಾನವ ಹಕ್ಕುಗಳ ಹೋರಾಟವು ರಾಜ್ಯದೊಡನೆ ನಿರಂತರವಾಗಿ ಸಂಘರ್ಷದಲ್ಲಿ ಇಲ್ಲವೇ ರಾಜಿಕಬೂಲಿಯಲ್ಲಿ ತೊಡಗಿರುತ್ತದೆ. ಸಂವಿಧಾನ ಅಂಗೀಕರಿಸಿದ, ಕಾನೂನು ವಿವರಿಸಿದ ಹಾಗೂ ಖಾತರಿ ಪಡಿಸಿದ ಕಾಯಿದೆಗಳನ್ನು ಸರ್ಕಾರ ಮನ್ನಿಸುತ್ತಿದೆಯೇ ಎನ್ನುವುದನ್ನು ರಾಜ್ಯ ಮತ್ತು ಪ್ರಜೆಗಳ ನಡುವಿನ ಸಂಬಂಧ ಎಂತಹದ್ದು, ರಾಜ್ಯ ಜನರ ಹಕ್ಕನ್ನು ಮನ್ನಿಸುತ್ತಿದೆಯೇ ಎನ್ನುವುದನ್ನು ಗಮನಿಸುವುದು, ರಾಜ್ಯ ತನ್ನದೇ ಕಾನೂನುಗಳಿಗೆ ಉತ್ತರದಾಯಿ ಎನ್ನುವುದನ್ನು ತಿಳಿಯಪಡಿಸುವುದು ಮಾನವ ಹಕ್ಕುಗಳ ಹೋರಾಟದ ಕರ್ತವ್ಯವಾಗಿದೆ. ಜನತೆ ಕಾನೂನನ್ನು ಪಾಲಿಸುತ್ತಿದೆಯೇ ಎನ್ನುವುದನ್ನು ನ್ಯಾಯಾಲಯ ಹಾಗೂ ಪೋಲಿಸ್ ವ್ಯವಸ್ಥೆ ಗಮನಿಸುತ್ತದೆ. ಆದರೆ ರಾಜ್ಯ ತನ್ನ ಕಾನೂನುಗಳನ್ನು ಮನ್ನಿಸುತ್ತಿದೆಯೇ ಎನ್ನುವುದನ್ನು ನೋಡುವವರು ಬೇಕು. ಪ್ರಜಾಪ್ರಭುತ್ವ ಮಾದರಿಯ ಸಮಾಜದ ನಿರ್ಮಾಣಕ್ಕೆ ರಾಜ್ಯವು ಪ್ರಜಾಪ್ರಭುತ್ವದ ತತ್ವಗಳನ್ನು ಪಾಲಿಸುತ್ತಿರಬೇಕು. ರಾಜ್ಯ ಮಾತ್ರವಲ್ಲ, ವ್ಯಕ್ತಿ, ಸಂಸ್ಥೆ, ಸಾಮಾಜಿಕ ಗುಂಪುಗಳು ಕೂಡಾ ಹಕ್ಕನ್ನು ಉಲ್ಲಂಘಿಸಬಾರದು.

ಹಕ್ಕು ಉಲ್ಲಂಘನೆಗೆ ಮುಖ್ಯ ಕಾರಣಗಳು ಜಾತಿ, ಪಿತೃಪ್ರಧಾನ ವ್ಯವಸ್ಥೆ ಹಾಗೂ ಆಸ್ತಿಯೇ ಮೊದಲಾದ ಸಂಸ್ಥೆಗಳು, ದಲಿತರ ಮೇಲೆ ಸವರ್ಣೀಯರ ಹಲ್ಲೆ, ಜಾತಿಗಳೊಳಗೆ ನಡೆಯುವ ಸಂಘರ್ಷ, ಅತ್ಯಾಚಾರ, ವರದಕ್ಷಿಣೆ ಸಾವು - ಇವೆಲ್ಲ ಪ್ರಸ್ತುತ ಪುರುಷ ಪ್ರಧಾನ, ಜಾತಿಪ್ರಧಾನ ವ್ಯವಸ್ಥೆಯಲ್ಲಿ ನಡೆಯುವ ಹಕ್ಕು ಉಲ್ಲಂಘನೆಗಳು. ಇವುಗಳಲ್ಲಿ ಸರ್ಕಾರ ನೇರವಾಗಿ ಪಾಲುದಾರನಲ್ಲ. ಆದರೆ ರಾಜ್ಯದ ನಿರ್ಲಕ್ಷ್ಯ ಹಾಗೂ ಘಟನೆಗಳನ್ನು ತಡೆಯುವಲ್ಲಿ ಅದರ ಸೋಲು ಅದನ್ನು ಘಟನೆಗಳ ಪಾಲುದಾರನನ್ನಾಗಿಸುತ್ತದೆ. ಚಾಲ್ತಿಯಲ್ಲಿರುವ ಕಾನೂನುಗಳನ್ನು ಪೋಲಿಸ್, ನ್ಯಾಯಾಂಗಗಳ ನೆರವಿನಿಂದ ಜಾರಿಗೊಳಿಸುವುದಲ್ಲದೆ, ಹಕ್ಕು ಉಲ್ಲಂಘನೆ ಹಾಗೂ ಅನ್ಯಾಯಗಳನ್ನು ತಡೆಯಲು ಹೊಸ ಕಾನೂನುಗಳನ್ನು ರಚಿಸುವುದು ಸರ್ಕಾರದ ಕರ್ತವ್ಯವಾಗಿದೆ.

ಮಾನವ ಹಕ್ಕುಗಳ ದೊಡ್ಡ ಉಲ್ಲಂಘಕ- ರಾಜ್ಯ ಹಾಗೂ ಅದರ ಏಜೆನ್ಸಿಗಳು. ಪೋಲಿಸ್ ವ್ಯವಸ್ಥೆಯಲ್ಲಿ ಸುಧಾರಣೆಯನ್ನು ಒತ್ತಾಯಿಸುತ್ತಿರುವವರು ಹಾಗೂ ಮಾನವ ಹಕ್ಕುಸಂಸ್ಥೆಗಳ ಯಾವುದೇ ಕಾರ್ಯಕರ್ತರನ್ನು ಕೇಳಿದರೂ ಹೇಳುವುದು ರಾಜ್ಯ ಪ್ರೋತ್ಸಾಹಿಸುವ ಭಯೋತ್ಪಾದಕತೆ ಮಾನವಹಕ್ಕುಗಳ ಅತೀ ದೊಡ್ಡ ಉಲ್ಲಂಘಕ. ಅಸಂವಿಧಾನಾತ್ಮಕ, ಕಾನೂನುಬಾಹಿರ ಸೆರೆ, ಹಿಂಸೆ, ಮುಖಾಮುಖಿಗಳ ಮೂಲಕ ಪೋಲಿಸ್, ಸೇನೆ ಬಳಸಿ ರಾಜ್ಯ ನಡೆಸುವ ಭಯೋತ್ಪಾದಕತೆ ಕುರಿತು ಮಾನವ ಹಕ್ಕುಗಳ ಆಯೋಗಕ್ಕೆ ಅತೀ ಹೆಚ್ಚು ದೂರುಗಳು ಬರುತ್ತವೆ. ಸ್ತ್ರೀಯರು, ಮಕ್ಕಳು, ದಲಿತರು, ಆದಿವಾಸಿಗಳು ಹಾಗೂ ಗ್ರಾಮೀಣ ಜನತೆಯ ಬಗ್ಗೆ ನಡೆದ ಅಧ್ಯಯನಗಳು ಹೇಳುವುದು: ಪೋಲಿಸರು ಜನರನ್ನು ಹತ್ತಿಕ್ಕುತ್ತಿದ್ದಾರೆ. ಗೃಹಮಂತ್ರಿ ಅಡ್ವಾಣಿ ಹೇಳುವಂತೆ ಕಾನೂನು ಮತ್ತು ಸುವ್ಯವಸ್ಥೆ ಪರಿಸ್ಥಿತಿ ಎಂಬುದು ಆದರೆ ಪೋಲಿಸರ ಸಾಧನೆ ಚೆನ್ನಾಗಿದೆ ಎಂಬ ಹೇಳಿಕೆ ಸಾಧಾರಣವಾದದ್ದಲ್ಲ. ದೇಶದ ಬಹುಭಾಗಗಳಲ್ಲಿ ವಿಚ್ಛಿದ್ರಕಾರಕ ಶಕ್ತಿಗಳ ವಿರುದ್ಧ ಕಾರ್ಯಾಚರಣೆಯ ನೆಪದಲ್ಲಿ ನಾಗರೀಕರ ಮೇಲೆ ನಿರಂತರ ಹಲ್ಲೆ, ಅವರ ಸ್ವಾತಂತ್ರ್ಯ ಹರಣ ನಡೆಯುತ್ತಿದೆ.

ನನಗೆ ಬೇಕಾದ್ದು ಫಲಿತಾಂಶ. ಕ್ರಿಮಿನಲ್‌ಗಳನ್ನು ಗುಂಡಿಟ್ಟು ಕೊಲ್ಲಬೇಕೆಂದಿದ್ದಲ್ಲಿ ಕೊಂದು ಬಿಡಿ. ನಾನು ನಿಮ್ಮನ್ನು ರಕ್ಷಿಸುತ್ತೇನೆ. ಇದನ್ನು ಉತ್ತರ ಪ್ರದೇಶದ ಮುಖ್ಯಮಂತ್ರಿ ಕಲ್ಯಾಣ್ ಸಿಂಗ್ ಹೇಳಿದ್ದು ಏಪ್ರಿಲ್ 30 ರಂದು. ಜುಲೈ 25 ರಂದು

ಬಲಿಪಾರಾದಲ್ಲಿ 5 ಜನರನ್ನು ತೀರಾ ಹತ್ತಿರದಿಂದ ಗುಂಡಿಟ್ಟು ಕೊಲ್ಲಲಾಯ್ತು. ಉತ್ತರಪ್ರದೇಶದಲ್ಲಿ ಇಲ್ಲಿಯ ತನಕ 200 ಜನರು ಪೋಲಿಸರ ಗುಂಡಿಗೆ ಬಲಿಯಾಗಿದ್ದಾರೆ. ಸರ್ಕಾರ ಪಾತಕಿಗಳಿಗೆ ಮಾನವ ಹಕ್ಕುಗಳು ಎಂಬುದಿಲ್ಲ ಎನ್ನುತ್ತದೆ. 1996-97ರಲ್ಲಿ ಮಾನವ ಹಕ್ಕುಗಳ ಆಯೋಗಕ್ಕೆ ಬಂದ ದೂರುಗಳಲ್ಲಿ ಶೇ.40ರಷ್ಟು ಪಾಲು ಉತ್ತರಪ್ರದೇಶದ್ದು. ಕಳೆದ ವರ್ಷಕ್ಕಿಂತ 5 ಪಟ್ಟು ಹೆಚ್ಚು ಕೊಲೆ, ಅತ್ಯಾಚಾರ ಅಲ್ಲಿ ನಡೆದಿದೆ. ಕಲ್ಯಾಣ್ ಹೇಳುತ್ತಾರೆ: ಕೊಲೆ ಗಡುಕರು ಒಂದೋ ಜೈಲು ಸೇರಬೇಕು ಇಲ್ಲವೇ ಪರಮಾತ್ಮನನ್ನು ಸೇರಬೇಕು. ಹೊರಗಿದ್ದರೆ ಪೋಲಿಸರು ಕೊಲ್ಲುತ್ತಾರೆನ್ನುವ ಭಯದಿಂದ ಮೇ 98ರಲ್ಲಿ 800 ಜನ ಜೈಲಿಗೆ ಹಿಂದಿರುಗಿದ್ದಾರೆ. ಭಯವಿಮುಕ್ತ ಸಮಾಜ ನಿರ್ಮಾಣದ ಫಲ ಇದು! ಇಂದು ಭಾಜಪ ಸರ್ಕಾರವಿರುವ ಗುಜರಾತ್‌ನಲ್ಲಿ ಕ್ರೈಸ್ತರು ಹಾಗೂ ಮುಸ್ಲಿಮರ ಸ್ಥಿತಿ ಅತಂತ್ರವಾಗಿದೆ. ವಿಶ್ವಹಿಂದೂ ಪರಿಷತ್ ಅಲ್ಪಸಂಖ್ಯಾತರು ಮತಾಂತರ ಮಾಡಿಸುತ್ತಿದ್ದಾರೆ ಎಂದು ಅವರ ಮೇಲೆ ಹಲ್ಲೆ ನಡೆಸುತ್ತಿದೆಯಲ್ಲದೆ ಬೈಬಲ್ ಸುಟ್ಟಿದೆ. ಮಸೀದಿಗಳಿಗೆ ಗಡಪಾರೆ ಹಾಕುತ್ತಿದೆ. ದೆಹಲಿಯ ಎಲ್ಲ ಸಮಸ್ಯೆಗಳಿಗೆ ವಲಸಿಗರೇ ಕಾರಣ ಎನ್ನುವ ಮಾಜಿ ಮುಖ್ಯಮಂತ್ರಿ ಸಾಹಿಬ್‌ಸಿಂಗ್ ವರ್ಮಾ ಬಾಂಗ್ಲಾ ವಲಸಿಗರನ್ನು ಬಲವಂತವಾಗಿ ಹೊರ ಹಾಕುತ್ತಿದ್ದಾರೆ. ಈ ವಲಸಿಗರಲ್ಲಿ ಅನೇಕರು 20 ವರ್ಷಗಳ ಹಿಂದೆ ಬಂದವರು. ಅವರ ಬಳಿ ಇಲ್ಲಿನ ಪ್ರಜೆಗಳೆನ್ನಲು ಎಲ್ಲ ಪುರಾವೆಗಳಿವೆ. 'ಕಾಶ್ಮೀರದಲ್ಲಿ ಹಿಂದೂಗಳನ್ನು ರಕ್ಷಿಸಲು ಯಾವ ಸರ್ಕಾರವೂ ಮನಸ್ಸು ಮಾಡಿಲ್ಲ' ಎನ್ನುತ್ತಿದ್ದ ಅಡ್ವಾಣಿ ಅದೇ ಕೆಲಸ ಮಾಡುವಲ್ಲಿ ವಿಫಲ ರಾಗಿದ್ದಾರೆ. ಭಯೋತ್ಪಾದಕತೆ ಈಗ ಹಿಮಾಚಲ ಪ್ರದೇಶವನ್ನು ಮುಟ್ಟಿದೆ. ಅಲ್ಲಿ ಜನರನ್ನು ಹಿಂದೂ ಮುಸ್ಲಿಂ ಎಂದು ವಿಭಜಿಸಲಾಗುತ್ತಿದೆ. ಬಾಂಗ್ಲಾ ವಲಸಿಗರನ್ನು ಪತ್ತೆ ಹಚ್ಚುವ ಕೆಲಸ ಬಹುಕಾಲದಿಂದ ನಡೆದು ಬಂದಿದೆ ಎನ್ನುವ ಸರ್ಕಾರ ಚರ್ಚ್‌ಗಳಲ್ಲಿ ಮದ್ಯ ಹಂಚುತ್ತಾರಾದ್ದರಿಂದ ಅವುಗಳನ್ನು ಧಾರ್ಮಿಕ ಸ್ಥಳಗಳು ಎನ್ನುವಂತಿಲ್ಲ ಎಂದಿತ್ತು. ಕೊನೆಗೆ ವಾಜಪೇಯಿ ಮಧ್ಯ ಪ್ರವೇಶಿಸಿ ಈ ಮೂರ್ಖರಿಗೆ ಬುದ್ಧಿ ಹೇಳಬೇಕಾಗಿ ಬಂದಿತು.

**ನನಗೆ ಬೇಕಾದ್ದು ಫಲಿತಾಂಶ. ಕ್ರಿಮಿನಲ್‌ಗಳನ್ನು ಗುಂಡಿಟ್ಟು ಕೊಲ್ಲಬೇಕೆಂದಿದ್ದಲ್ಲಿ ಕೊಂದು ಬಿಡಿ. ನಾನು ನಿಮ್ಮನ್ನು ರಕ್ಷಿಸುತ್ತೇನೆ. ಇದನ್ನು ಉತ್ತರ ಪ್ರದೇಶದ ಮುಖ್ಯಮಂತ್ರಿ ಕಲ್ಯಾಣ್‌ಸಿಂಗ್ ಹೇಳಿದ್ದು ಏಪ್ರಿಲ್ 30 ರಂದು.**

## ಇಂದಿರಾಗಾಂಧಿ ಹತ್ಯೆಯ ನಂತರ

ಡಿಸೆಂಬರ್ 92 ಮತ್ತು ಜನವರಿ 93ರಲ್ಲಿ ನಡೆದ ಹತ್ಯಾಕಾಂಡದಲ್ಲಿ ಕೊಲ್ಲಲ್ಪಟ್ಟವರ ಸಂಖ್ಯೆ 900. ಈ ಕುರಿತು ವಿಚಾರಣೆ ನಡೆಸಲು ಸರ್ಕಾರವು ಶ್ರೀ ಕೃಷ್ಣ ಆಯೋಗವನ್ನು ರಚಿಸಿತ್ತು. ಆ ನಂತರ ಅಧಿಕಾರಕ್ಕೆ ಬಂದ ಭಾಜಪ ನೇತೃತ್ವದ ಸಮ್ಮಿಶ್ರ



ಸಂಯುಕ್ತ ಸರ್ಕಾರವು ಆಯೋಗವನ್ನು ರದ್ದು ಮಾಡಿತು. ವಾಜಪೇಯಿ ಮಧ್ಯಪ್ರವೇಶಿಸಿದ ನಂತರ, ಆಯೋಗದ ವಿಚಾರಣಾ ವ್ಯಾಪ್ತಿಗೆ ಮುಂಬೈ ಬಾಂಬ್ ಸ್ಫೋಟದ ಕುರಿತು ತನಿಖೆಯನ್ನು ಸೇರಿಸಲಾಯ್ತು. 5 ವರ್ಷ ವಿಚಾರಣೆ ನಡೆಸಿದ ಆಯೋಗದ ವರದಿ ಬಾಳ ಠಾಕರೆಯನ್ನು ಆರೋಪಿ ಎಂದಿದೆ. 'ಸಾಮ್ನಾದಲ್ಲಿ' ಠಾಕರೆ ಬರೆದ ಲೇಖನಗಳು ದಂಗೆಕೋರರಿಗೆ ನಿರ್ದೇಶನ ನೀಡಿದವು. ಸುಧಾಕರ ನಾಯಕ್ ನೇತೃತ್ವದ ಕಾಂಗ್ರೆಸ್ ಸರ್ಕಾರ ಸೇನೆಯನ್ನು ಬಳಸಲು 4 ದಿನ ತೆಗೆದುಕೊಂಡಿತು. ಪೋಲಿಸರು ದಂಗೆಯನ್ನು ಹತ್ತಿಕ್ಕಲು ತೆಗೆದುಕೊಂಡ ಕ್ರಮಗಳು ಅಸಮರ್ಪಕವಾಗಿದ್ದವು, ಗೂಢಚಾರ ವ್ಯವಸ್ಥೆ ಕುಸಿದಿತ್ತು. ಪೋಲಿಸರು ಹಿಂದುಪರ ನಿಲುವು ತಳೆದು, ಕೆಲವು ಕಡೆ ದಂಗೆಕೋರರನ್ನು ಬೆಂಬಲಿಸಿ, ಪ್ರೇಕ್ಷಕರಂತೆ ನೋಡಿದ್ದಾರೆ ಎಂದಿದೆ.

**'ಕಾಶ್ಮೀರದಲ್ಲಿ ಹಿಂದೂಗಳನ್ನು ರಕ್ಷಿಸಲು ಯಾವ ಸರ್ಕಾರವೂ ಮನಸ್ಸು ಮಾಡಿಲ್ಲ' ಎನ್ನುತ್ತಿದ್ದ ಅಡ್ವಾಣಿ ಅದೇ ಕೆಲಸ ಮಾಡುವಲ್ಲಿ ವಿಫಲರಾಗಿದ್ದಾರೆ.**

ಮುಖ್ಯಮಂತ್ರಿ ಜೋಷಿ ತಾವು ನಿರುದ್ಯೋಗಿಯಾಗುವೆ ಎನ್ನುವ ಭೀತಿಯಿಂದ ಠಾಕರೆಯ ಮೇಲೆ ಯಾವುದೇ ಕ್ರಮ ಕೈಗೊಳ್ಳುವುದಿಲ್ಲ ಎಂದಿದ್ದಾರಲ್ಲದೆ 'ವರದಿ ಹಿಂದೂ ವಿರೋಧಿ, ಜನವರಿ 93 ರ ಜೋಗೇಶ್ವರಿ ಸ್ಲಂನ ಗಲಾಟೆ ಹಾಗೂ ಹಮಾಲಿಗಳ ಹತ್ಯೆಯಿಂದ ಹಿಂದೂಗಳು ದಂಗೆ ಎದ್ದರು. ಸರಣಿ ಸ್ಫೋಟ ನಡೆಸಿ ಮುಂಬೈನ ನಾಶಕ್ಕೆ ಯತ್ನಿಸಿದವರ ಬಗ್ಗೆ ವರದಿ ಏನನ್ನೂ ಹೇಳಿಲ್ಲ' ಎಂದು ಹೇಳಿ ವರದಿಯನ್ನು ಕಸದ ಬುಟ್ಟಿಗೆ ಹಾಕಿದ್ದಾರೆ. ದೇಶವೊಂದರ ಅಂತರ್ಯುದ್ಧದಲ್ಲಿ ಸಾಯುವಷ್ಟು ಜನ ಮುಂಬೈನಲ್ಲಿ ಆಗ ಸತ್ತಿದ್ದರು. ಆದರೆ ಅವರ ಹಂತಕರು ಗದ್ದಿಗೆಯ ಮೇಲೆ ಕುಳಿತು ತಮ್ಮ ರಕ್ತಸಿಕ್ತ ಕೈಗಳು 'ಪವಿತ್ರ' ಎನ್ನುತ್ತಿದ್ದಾರೆ.

ಮುಂಬೈ ಪೋಲಿಸರು ನಡೆಸುವ ಎನ್‌ಕೌಂಟರ್ ವಿರುದ್ಧ ಮುಂಬೈ ಶ್ರೇಷ್ಠ ನ್ಯಾಯಾಲಯದಲ್ಲಿ 3 ದೂರುಗಳಿವೆ. ಫಿರ್ಯಾದಿಗಳ ಪ್ರಕಾರ ಈ ಮುಖಾಮುಖಿಗಳು ನ್ಯಾಯಾಂಗದ ಕಣ್ಣು ತಪ್ಪಿಸಿ ನಡೆಸಿದ ಕೊಲೆಗಳು. ಸರ್ಕಾರ ನೀಡಿದ ದಾಖಲೆಗಳ ಪ್ರಕಾರ 1995-96 ಹಾಗೂ 97 ರಲ್ಲಿ ನಡೆದ 99 ಮುಖಾಮುಖಿಗಳಲ್ಲಿ 135 ಜನ ಹತ್ಯೆಗೊಳಗಾಗಿದ್ದಾರೆ. ಇವರೆಲ್ಲ ಪೋಲಿಸರ ಗುಂಡಿನಿಂದ ಸತ್ತವರಾಗಿದ್ದು, ಪೋಲಿಸರು ಈ ಮುಖಾಮುಖಿಗಳಲ್ಲಿ ಸತ್ತಿಲ್ಲ. ಆಸ್ಪತ್ರೆಗೆ ಸೇರಿಸುವ ಮೊದಲೇ ಸಾವು ಸಂಭವಿಸಿದ್ದು, ನಿಜ ಸಂಗತಿಯನ್ನು ತಿಳಿಸಲು ಸತ್ತವರಿಗೆ ಸಾಧ್ಯವಾಗಿಲ್ಲ. ಆಂಧ್ರ, ಪಂಜಾಬ್, ಜಮ್ಮು ಮತ್ತು ಕಾಶ್ಮೀರಗಳಲ್ಲಿ ನಡೆಯುವ ಮುಖಾಮುಖಿಗಳಲ್ಲಿ ಪೋಲಿಸರೂ ಸಾಯುತ್ತಾರೆ. ಮುಂಬೈನಲ್ಲಿ ಸತ್ತವರು ಗುಂಡೇಟು ಅತೀ ಸನಿಹದಿಂದ ಎದೆ, ತಲೆಗೆ ತಾಗಿ ಸತ್ತಿದ್ದಾರೆ. ಈ ಎಲ್ಲ ಪ್ರಕರಣಗಳಲ್ಲಿ ಪೋಲಿಸರು ಭಾರತೀಯ ಕ್ರಿಮಿನಲ್ ಕಾಯ್ದೆಯ 46ನೇ ಸೆಕ್ಷನ್ ಅಥವಾ ಭಾರತೀಯ ದಂಡ ಸಂಹಿತೆಯ 100ನೇ ಸೆಕ್ಷನ್‌ನಡಿ ರಕ್ಷಣೆ ಪಡೆದಿದ್ದಾರೆ. ಜೀವಾವಧಿ ಶಿಕ್ಷೆಗೆ ಅರ್ಹವಾದ ಅಪರಾಧ ಮಾಡಿದ ವ್ಯಕ್ತಿ ಶರಣಾಗಲು ಒಪ್ಪದಿದ್ದಲ್ಲಿ

ಪೋಲಿಸರು ಆತನ ಮೇಲೆ ಗುಂಡು ಹಾರಿಸುವ ಅಧಿಕಾರವನ್ನು 46ನೇ ಸೆಕ್ಷನ್ ನೀಡಿದಲ್ಲಿ, 100ನೇ ಸೆಕ್ಷನ್ ಪೋಲಿಸರ ಜೀವಕ್ಕೆ ಆಪತ್ತಿದ್ದಾಗ ಗುಂಡು ಹಾರಿಸುವ ಅಧಿಕಾರ ನೀಡುತ್ತದೆ. ಮೇಲಿನ 99 ಪ್ರಕರಣಗಳಲ್ಲಿ ಒಬ್ಬ ಪೋಲಿಸ್ ಕೂಡಾ ಸತ್ತಿಲ್ಲ. ದುಷ್ಕರ್ಮಿಗಳ ಬಳಿ ಅತ್ಯಾಧುನಿಕ ಶಸ್ತ್ರಾಸ್ತ್ರವಿದ್ದು, ಅವರೇ ಮೊದಲು ಗುಂಡು ಹಾರಿಸಿದರೂ ಸಹಾ ಅವರನ್ನು ಕೊಲ್ಲಲೆಂದೇ ಪೋಲಿಸರು ಎದೆ ಅಥವಾ ತಲೆಗೆ ಗುಂಡು ಹಾರಿಸಿ ಕೊಂದಿದ್ದಾರೆ. ಅವರು ಯಾವುದೇ ಕಾನೂನಿನಡಿ ರಕ್ಷಣೆಗೆ ಅರ್ಹರಲ್ಲ. ತಾವೇ ಗುಂಡು ಹಾರಿಸಿ, ತಮ್ಮ ಜೀವ ಆಪತ್ತಿನಲ್ಲಿತ್ತು ಎಂದು ಪೋಲಿಸರು ಹೇಳಿದರೆ ಸರ್ಕಾರ ಅದನ್ನು ನಂಬಿ, ಅವರ ವಿರುದ್ಧ ಮೊಕದ್ದಮೆ ಹೂಡುವುದನ್ನು ಕೈಬಿಡಬೇಕೇ? ಆರೋಪಿಗಳೇ ತಮ್ಮನ್ನು ನಿರ್ದೋಷಿಗಳೆಂದು ಘೋಷಿಸಿಕೊಂಡಿರುವುದರಿಂದ, ನ್ಯಾಯಾಂಗದ ಸಾಂವಿಧಾನಿಕ ಇರುವಿಕೆಗೇ ಕುತ್ತು ಬರುತ್ತದೆ. ಸಂವಿಧಾನದ ಪರಿಚ್ಛೇಧ 14 ಮತ್ತು 21 ಸಾಮಾಜಿಕ ಅಂತಸ್ತನ್ನು ಗಣಿಸದೆ, ಎಲ್ಲರಿಗೂ ಸಮಾನವಾದ ಕಾನೂನಿನ ರಕ್ಷಣೆ ಹಾಗೂ ಕ್ರಿಮಿನಲ್ ಮೊಕದ್ದಮೆಗಳನ್ನು ಬಗೆಹರಿಸುವಾಗ ಎಲ್ಲರಿಗೂ ಅನ್ವಯಿಸುವ ಹಾಗೂ ನ್ಯಾಯಬದ್ಧ ವಿಧಿವಿಧಾನಗಳನ್ನು ಖಾತರಿ ಮಾಡಿದೆ. ಮುಖಾಮುಖಿಯಂತಹ ಕ್ರಿಮಿನಲ್ ಮೊಕದ್ದಮೆಗಳಲ್ಲಿ ಪೋಲಿಸರನ್ನು ಸಂಪೂರ್ಣವಾಗಿ ಸಂರಕ್ಷಿಸುವುದು ಸಾಂವಿಧಾನಿಕ ಕ್ರಮಗಳ ಉಲ್ಲಂಘನೆ ಯಾಗುತ್ತದೆ.

ನಾಗರೀಕ ಹಕ್ಕು ಎನ್ನುವುದು ರಾಜ್ಯದ ದಮನಕಾರಿ ನೀತಿಯನ್ನು ವಿರೋಧಿಸುವ ಹಕ್ಕು ಹಾಗೂ ವೈಯಕ್ತಿಕ ಹಕ್ಕುಗಳನ್ನು ಅನುಭವಿಸುವ ಹಕ್ಕು ಎರಡನ್ನು ಒಳಗೊಂಡಿದೆ. ನಮಗೆ ರಾಜ್ಯದಿಂದ ಸ್ವಾಯತ್ತೆ ಹಾಗೂ ಸ್ವತಂತ್ರವನ್ನು ಹೊಂದುವ ಹಕ್ಕು ಇದೆ. ಇವುಗಳನ್ನು ಯಾರೂ ಉಲ್ಲಂಘಿಸಬಾರದು. ಒಂದು ವೇಳೆ ಕಾನೂನನ್ನು ಜಾರಿಮಾಡುವ ಸರ್ಕಾರವೇ ಇದನ್ನು ಉಲ್ಲಂಘಿಸಿದಲ್ಲಿ ಅದು ಹೇಯ, ಅದನ್ನು ಅತ್ಯುಗ್ರವಾಗಿ ಖಂಡಿಸಬೇಕು, ಅದರ ವಿರುದ್ಧ ದನಿಯೆತ್ತಬೇಕು.

### ಆಮ್ನೆಸ್ಟಿ ಇಂಟರ್‌ನ್ಯಾಷನಲ್

ಯಾವುದೇ ಭಾವಾತಿರೇಕ ಹಾಗೂ

## ಭಯೋತ್ಪಾದನೆ ಮತ್ತು ನಾಗರಿಕ ಹಕ್ಕುಗಳ ಉಲ್ಲಂಘನೆ

1984ರಲ್ಲಿ ಮಾನವ ಹಕ್ಕುಗಳ ಘೋಷಣೆ ನಂತರ 4ನೇ ಜಿನೇವಾ ಸಮಾವೇಶ ಹಾಗೂ ಹೇಗ್‌ನ ಪ್ರೋಟೋಕಾಲ್‌ಗಳು ಅಂತಾರಾಷ್ಟ್ರೀಯ ಹಾಗೂ ದೇಶದ ಆಂತರಿಕ ಸಂಘರ್ಷಗಳನ್ನು ನಿಭಾಯಿಸುವ ಬಗ್ಗೆ ಸ್ಪಷ್ಟ ಕಟ್ಟುಪಾಡು ವಿಧಿಸಿವೆ. ರಷ್ಯಾದ ಪತನದ ನಂತರ ಜಗತ್ತಿನಲ್ಲಿ, ಪ್ರಾಂತೀಯ ಹಾಗೂ ಸಣ್ಣ ಪ್ರಮಾಣದ ಪ್ರಾಕ್ಸಿ ಯುದ್ಧಗಳು ಪ್ರಾರಂಭವಾಗಿದ್ದು, ಇದರಲ್ಲಿ ದೇಶವೊಂದನ್ನು ದುರ್ಬಲಗೊಳಿಸಲು ಹೊರಗಿನ ಶಕ್ತಿಗಳು ವಿಚ್ಛಿದ್ರಕಾರಕ ಶಕ್ತಿಗಳಿಗೆ ಉತ್ತೇಜನ ನೀಡುತ್ತಿವೆ. ಹಣ, ಶಸ್ತ್ರಾಸ್ತ್ರ ಹಾಗೂ ಹಂತಕರನ್ನು ಪೂರೈಸುತ್ತಿವೆ. ಜಮ್ಮು ಮತ್ತು ಕಾಶ್ಮೀರದಲ್ಲಿ 1978ರಿಂದ ಜಿಯಾಉಲ್ ಹಕ್ ಕಾಲದಿಂದ ಆತಂಕವಾದಿಗಳ ಕಾಟ ಪ್ರಾರಂಭವಾಗಿದ್ದು, ಅಲ್ಲಿ ಐಎಸ್ಐ ತರಬೇತಿ ಶಿಬಿರಗಳನ್ನು ನಡೆಸುತ್ತಿದೆ. 1987ರ ಟಾಡಾ ಕಾಯ್ದೆ (ಅದನ್ನೀಗ ತೆಗೆದುಹಾಕಲಾಗಿದೆ) ಪೋಲಿಸ್ ಹಾಗೂ ಸೈನಿಕರಿಗೆ ಪ್ರಶ್ನಾತೀತ ಅಧಿಕಾರವನ್ನು ನೀಡಿತ್ತು. ಪಂಜಾಬ್, ಜಮ್ಮು ಮತ್ತು ಕಾಶ್ಮೀರದ ಏಳು ಸೋದರಿಯರ ನಾಡಿನ ಜನರು ಸೈನ್ಯ ಹಾಗೂ ಭಯೋತ್ಪಾದಕರ ನಡುವೆ ಸಿಲುಕಿ ನಲುಗಿ ಹೋಗಿದ್ದಾರೆ. ಇಲ್ಲಿ ನಡೆಯುತ್ತಿರುವ ಪ್ರಾಕ್ಸಿ ಯುದ್ಧದಲ್ಲಿ ತಟಸ್ಥ ಪ್ರಜೆಗಳು ಇರುವುದು ಸಾಧ್ಯವಿಲ್ಲ. ಬಂದೂಕಿನ ಭಯದಿಂದ ಜನ ಯಾವುದಾದರೊಂದು ಗುಂಪನ್ನು ಬೆಂಬಲಿಸಲೇಬೇಕಾಗಿ ಬರುತ್ತದೆ. ಜನರ ಹಕ್ಕುಗಳು, ಅವರ ಚಲನೆಯ ಸ್ವಾತಂತ್ರ್ಯ ಕಡಿಮೆಯಾಗುತ್ತದೆ. ಅಗತ್ಯ ಮಾಹಿತಿಗಳು ಸುಲಭವಾಗಿ ಲಭಿಸುವುದಿಲ್ಲ. ಕರ್ಫ್ಯೂ, ಶೋಧನೆ ಹಾಗೂ ಸೆರೆವಾಸ ಜನರನ್ನು ತೊಂದರೆಗೀಡು ಮಾಡುತ್ತವೆ.

ಭಯೋತ್ಪಾದಕತೆ ಮಾನವ ಹಕ್ಕುಗಳನ್ನು ಉಲ್ಲಂಘಿಸುತ್ತದೆ. ಅಷ್ಟೇ ಅಲ್ಲ ಹಕ್ಕುಗಳನ್ನು ಕುರಿತು ಎಚ್ಚರ ಮೂಡಿಸುವ ಕೆಲಸಕ್ಕೂ ಅಡ್ಡಿ ಹಾಕುತ್ತದೆ. ಕಾಶ್ಮೀರದಲ್ಲಿ ನಡೆದ ನಿರಂತರ ಹತ್ಯೆಗಳಿಂದಾಗಿ ಅಲ್ಲಿದ್ದ ಹಿಂದೂಗಳೆಲ್ಲ ಯಾವುದೇ ಸ್ಪಷ್ಟ ಕಾರ್ಯಕ್ರಮ ಹಾಕಿಕೊಳ್ಳುವುದು ಇನ್ನೂ ಸಾಧ್ಯವಾಗಿಲ್ಲ. ಅಡ್ವಾಣಿ ಕಾಶ್ಮೀರದಲ್ಲಿ ಹತ್ಯೆ ನಿಲ್ಲದಿದ್ದರೆ ನಾನು ರಾಜೀನಾಮೆ ಕೊಡುತ್ತೇನೆ ಎಂದು ಹೇಳಿದ ನಂತರ ಹತ್ಯೆಯ ಪ್ರಮಾಣ ಇನ್ನೂ ಹೆಚ್ಚಿದೆ. 1997 ರಿಂದ ಆಗಸ್ಟ್ 4, 98 ರವರಗೆ 190 ನಾಗರೀಕರು ಕೊಲ್ಲಲ್ಪಟ್ಟಿದ್ದಾರೆ. ಜುಲೈ 27ರಿಂದ ಆಗಸ್ಟ್ 4ರ ಅವಧಿಯಲ್ಲಿ 31 ನಾಗರೀಕರು, ಬಿಎಸ್‌ಎಫ್‌ನ 4 ಹಾಗೂ ಸೇನೆಯ 10 ಜನ ಸತ್ತಿದ್ದಾರೆ. 158 ಜನ ಗಾಯಗೊಂಡಿದ್ದಾರೆ. ಅಡ್ವಾಣಿಯವರ pro-active policy ಘೋಷಿಸಲ್ಪಟ್ಟು 3 ತಿಂಗಳಾದರೂ, ಇನ್ನೂ ಬಾಯಿಯಿಂದ ಕೃತಿಗಿಳಿದಿಲ್ಲ. ಆ ನೀತಿ ಹಾಸ್ಯಾಸ್ಪದವೆನ್ನಿಸಿ ಬಿಟ್ಟಿದೆ. ಕಾಶ್ಮೀರದಲ್ಲಿ ಪ್ರಕ್ಷುಬ್ಧತೆ ಕಡಿಮೆಯಾಗಲು ಜನರ ಸಹಕಾರಬೇಕು. ಕ್ಷೋಭೆಯಿಂದ ತುಂಬಿದ್ದ ಪಂಜಾಬ್‌ನಲ್ಲಿ ಶಾಂತಿ ಮರಳಿ ಬರಲು ಸೈನ್ಯ ಕಾರಣವಲ್ಲ, ಬದಲಿಗೆ ಭಯೋತ್ಪಾದಕತೆಯಿಂದ ಬೇಸತ್ತ ಜನ ಶಾಂತಿಗಾಗಿ ಹಂಬಲಿಸಿದ್ದು. ಇಂದಿರಾಗಾಂಧಿ ಹತ್ಯೆಯ ನಂತರ ಉರಿದ ಮುಂಬೈ ಶಾಂತವಾದದ್ದು ಪೋಲಿಸರಿಂದಲ್ಲ, ರಾಜಕಾರಣಿಗಳಿಂದಲ್ಲ, ಬದಲಿಗೆ ಜನ ತಾವೇ ಸಂಘಟಿತರಾಗಿ 'ಮೊಹಲ್ಲಾ ಸಮಿತಿ'ಗಳನ್ನು ರಚಿಸಿಕೊಂಡು ಧರ್ಮಭೇದ ಮರೆತು ಒಂದಾಗಿದ್ದು. ಕೆ.ಪಿ.ಎಸ್.ಗಿಲ್ ಸೋತಲ್ಲಿ ಜನ ಗೆದ್ದರು.

ಜನರ ಅತೃಪ್ತಿಯನ್ನು ತೊಡೆಯಲು ಅವರ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ಪ್ರಯತ್ನಿಸಬೇಕು. ಅಭಿಪ್ರಾಯಭೇದ ಸಹಜ. ಅದನ್ನು ಮಾತುಕತೆಯ ಮೂಲಕವಷ್ಟೆ ಬಗೆಹರಿಸಬೇಕು. ದಿಲ್ಲಿಯ ಅರಸರಿಗೆ ಮೇಘಾಲಯದ ಸಮಸ್ಯೆಗಳು ಅರ್ಥವಾಗುವುದಿಲ್ಲ. ಅದಕ್ಕೆ ಅನೇಕ ಕಾರಣಗಳಿವೆ. ಅದರಲ್ಲಿ ಅತೀತತೆಯೂ ಒಂದು. ಮೇಘಾಲಯದಲ್ಲಿ ಬೊಂಬು ಹೂಬಿಟ್ಟರೆ, ದೆಹಲಿಯಲ್ಲಿ ಯಾವ ತಲ್ಲಣವೂ ಉಂಟಾಗದು. ಆದರೆ ಅದು ಮೇಘಾಲಯದಲ್ಲಿ ಬರದ ತಲ್ಲಣ ಹುಟ್ಟು ಹಾಕುತ್ತದೆ. ಭಯೋತ್ಪಾದನೆ ಎಂಬುದು ಬಹುಮುಖಿ ಪ್ರಯತ್ನಗಳ ಮೂಲಕ ಬಗೆಹರಿಸಲು ಸಾಧ್ಯವಾಗುವ ಸಮಸ್ಯೆ, ಬಂದೂಕು ಮಾತ್ರ ಅದನ್ನು ಬಗೆಹರಿಸಲಾರದು, ಬಗೆಹರಿಸಿಲ್ಲ. ಪ್ಯಾಲೆಸ್ಟೈನ್, ಐರ್ಲೆಂಡ್ ಸಮಸ್ಯೆಗಳನ್ನು ಬಂದೂಕಿನ ಮೂಲಕ ಬಗೆಹರಿಸಲು ಸಾಧ್ಯವಾಗಲಿಲ್ಲ. ಬಂದೂಕು ಸೋತಲ್ಲಿ ಪ್ರೀತಿ ಗೆದ್ದಿತು.

ಜನಾಂಗೀಯ ಭೇದಭಾವಗಳಿಲ್ಲದ ಗುಂಪೊಂದು ಆಮ್ನೆಸ್ಟಿಯನ್ನು ಸ್ಥಾಪಿಸಿತು. ಮೊದಲು ಹಣಕಾಸಿನ ತೊಂದರೆ, ಸೀಮಿತ ಪ್ರಭಾವಗಳಿದ್ದ ಸಂಸ್ಥೆ ಇದು. ಇವರೆಷ್ಟೇ ಕೂಗಿದರೂ ಪೋಲ್‌ಪೇಟ್ ತನ್ನದೇ ದೇಶದ ಲಕ್ಷಾಂತರ ಜನರನ್ನು ಕೊಲ್ಲುವುದನ್ನು, ಈದಿ ಅಮೀನ್, ಸಾನಿ ಅಬಾಕಾ ನಂತಹ ನರಭಕ್ಷಕರನ್ನು ತಡೆಯುವುದಾಗಲಿಲ್ಲ. ಅಮೇರಿಕನ್ನರು ಜಗತ್ತಿನಾದ್ಯಂತ ದ್ವೇಷದ ಮಳೆ ಸುರಿಸಿದರು. ಇಂಡೋಚೈನಾದ ಕಾಡುಗಳ ಮೇಲೆ ರಸಾಯನಿಕಗಳನ್ನು ಸುರಿದರು. ವಿಯಟ್ನಾಂನ ಮೇಲೆ ಎಲ್ಲ ಅಸ್ತ್ರಗಳನ್ನು ಬಳಸಿದರು, ಇರಾಕನ್ನು ದಿಗ್ಬಂಧನದಲ್ಲಿಟ್ಟರು. ವ್ಯಾಪಾರನಿಷೇಧದಂತಹ ಆರ್ಥಿಕ ನಿರ್ಬಂಧಗಳನ್ನು ಹೇರಿ ತೃತೀಯ ಜಗತ್ತಿನ ಜನರನ್ನು ಸಾವಿನಂಚಿಗೆ ತಳ್ಳಿದರು. ಇಂದು ಆಮ್ನೆಸ್ಟಿಯನ್ನು ಮನಕುಲದ ಪ್ರಜ್ಞೆ ಎನ್ನುತ್ತಾರೆ. ಮನುಷ್ಯನ ಉಳಿವಿಗೆ ಆತನದೇ ಸಂತತಿಯವರ ಅತ್ಯಾಚಾರ ನಿಲ್ಲಿಸುವುದು ಅಗತ್ಯ ಎಂದು ತಿಳಿಯುವವರ ಸಂಖ್ಯೆ ಹೆಚ್ಚಲು ಆಮ್ನೆಸ್ಟಿ ಕಾರಣವಾಗಿದೆ.

ಭಾರತ ಸರ್ಕಾರ ಜಮ್ಮು ಮತ್ತು ಕಾಶ್ಮೀರಕ್ಕೆ ಭೇಟಿ ನೀಡಲು ಆಮ್ನೆಸ್ಟಿ ಹಾಗೂ ಹ್ಯೂಮನ್ ರೈಟ್ಸ್‌ವಾಚ್ (ಏಷಿಯಾ)ಗೆ ಅನುಮತಿ ನೀಡಲಿಲ್ಲ. ಅವು ಜಮ್ಮು ಕಾಶ್ಮೀರದಲ್ಲಿ ಮಾನವ ಹಕ್ಕುಗಳ ದಮನವಾಗುತ್ತಿದೆ ಎನ್ನುವಂತಹ ವರದಿ ನೀಡಿದವು. ಅದನ್ನು ಪಾಕ್ ಅಂತರಾಷ್ಟ್ರೀಯ ವೇದಿಕೆಗಳಲ್ಲಿ ದುರುದ್ದೇಶ ಸಾಧನೆಗೆ ಬಳಸಿಕೊಂಡಿತು. ಪೀಪಲ್ಸ್ ಯೂನಿಯನ್ ಫಾರ್ ಸಿವಿಲ್ ಲಿಬರ್ಟೀಸ್ ಸಂಸ್ಥೆಗೆ, ಮಾಜಿ ನ್ಯಾಯಾಮೂರ್ತಿಗಳಾದ ವಿ.ಎಂ. ತಾರ್ಕುಂಡೆ ಹಾಗೂ ರಾಜೇಂದರ್ ಸಚ್ಚಾರ್‌ಗೆ ಕೂಡಾ ಜಮ್ಮು-ಕಾಶ್ಮೀರ ಭೇಟಿಗೆ ಸರ್ಕಾರ ಅನುಮತಿ ನೀಡಲಿಲ್ಲ. ಸರ್ಕಾರದ ಈ ಅಸೂಕ್ಷ್ಮ ನಡವಳಿಕೆಯಿಂದ ಅಂತರಾಷ್ಟ್ರೀಯ ಮಟ್ಟದಲ್ಲಿ ಟೀಕೆ ಎದುರಿಸಬೇಕಾಗಿ ಬಂತು.

ಆಮ್ನೆಸ್ಟಿ, ಹ್ಯೂಮನ್ ರೈಟ್ಸ್ ವಾಚ್‌ನಂತಹ ಸಂಸ್ಥೆಗಳ ವಿರುದ್ಧ ಇರುವ ಬಹು ದೊಡ್ಡ ಅಪಾದನೆ ಅವು ಭಯೋತ್ಪಾದಕರಿಂದಾಗುವ ಮಾನವ ಹಕ್ಕುಗಳ ಉಲ್ಲಂಘನೆ ವಿರುದ್ಧ ದನಿ ಎತ್ತುವುದಿಲ್ಲ ಎಂಬುದು. ಪ್ರಜಾಪ್ರಭುತ್ವವೊಂದು ಪ್ರಾಕ್ಸಿ ಯುದ್ಧದಿಂದ ನಾಶವಾದಲ್ಲಿ, ದನಿಯಿಲ್ಲದ ಬಹುಸಂಖ್ಯೆಯ ಜನರ ಹಕ್ಕುಗಳನ್ನು ರಕ್ಷಿಸುವವರಾರು? ಅತಂತ್ರವಾದಿಗಳ ಹಕ್ಕು ಜನತೆಯ ಬದುಕುವ ಹಕ್ಕಿಗಿಂತ ಹೇಗೆ ಮುಖ್ಯ? ಪಾಕಿಸ್ತಾನದಂತಹ ವಿದ್ರೋಹಿ ಕೃತ್ಯಗಳನ್ನು ಬೆಂಬಲಿಸುತ್ತಿರುವ ದೇಶಗಳಿಗೆ ಆಮ್ನೆಸ್ಟಿ ಯಾವ ಶಿಕ್ಷೆ ನಿಷೇಧ ವಿಧಿಸಿದೆ? ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅನೇಕ ದೋಷಗಳಿದ್ದರೂ, ಪಾಕಿಸ್ತಾನದ ಪ್ರಜಾಪ್ರಭುತ್ವ, ಚೀನಾದ ಸರ್ಕಾರಗಳಿಗಿಂತ ಉತ್ತಮ ಎನ್ನುವುದನ್ನು ನಾವು ಒಪ್ಪಲೇಬೇಕು.

ಆಮ್ನೆಸ್ಟಿ ಸದುದ್ದೇಶವುಳ್ಳ ಸಂಸ್ಥೆ. ಆದರೆ ಅದರ ವರದಿಗಳನ್ನು ಪಾಶ್ಚಿಮಾತ್ಯ ದೇಶಗಳು ದುರ್ಬಳಕೆ ಮಾಡಿವೆ. ಪಾಕ್ ಬೆಂಬಲಿತ ಹಿಜ್ಬುಲ್ ಮುಜಾಹಿದ್ದೀನ್‌ನ ಆಲಿ ಮೊಹಮ್ಮದ್ ದರ್‌ನನ್ನು ಶ್ರೀನಗರದಲ್ಲಿ ಪೋಲಿಸರು ಇತ್ತೀಚೆಗೆ ಕೊಂದರು. ಅದನ್ನು ಆಮ್ನೆಸ್ಟಿ ಕಠಿಣ ಪದಗಳಲ್ಲಿ ಖಂಡಿಸಿದೆ. ವಿದೇಶಿ ಹಂತಕರನ್ನು ಕೊಲ್ಲಬೇಕೆಂದು ಅಡ್ವಾಣಿ ಹೇಳಿದ್ದನ್ನು ಟೀಕಿಸಿರುವ ಆಮ್ನೆಸ್ಟಿ, ಕಾಶ್ಮೀರ ಕಣಿವೆಯಲ್ಲಿ ಹಲವಾರು ವರ್ಷಗಳಿಂದ ನೂರಾರು ಜನರನ್ನು ಕೊಂದಿರುವ ಆಲಿ ಮೊಹಮ್ಮದ್ ದರ್‌ನನ್ನು ಇನ್ಯಾವ ಪದದಿಂದ ವರ್ಣಿಸಬೇಕೆಂದು ಅಪೇಕ್ಷಿಸುತ್ತದೆ?

ಹಿಂದಿನ ವರ್ಷ ವಿದೇಶಿ ಹಂತಕರನ್ನು ಮುಗಿಸಬೇಕು ಎಂದಿದ್ದ ಫಾರೂಕ್ ಅಬ್ದುಲ್ಲಾರನ್ನು, ಆಮ್ನೆಸ್ಟಿ 'ನಿರಂಕುಶಮತಿ' ಎಂದು ಟೀಕಿಸಿತ್ತು. ಇತ್ತೀಚೆಗೆ ಮೊತ್ತಮೊದಲ ಬಾರಿ (ಮೇಲಿನ ವರದಿಯಲ್ಲಿ) ಭಯೋತ್ಪಾದಕರು (ಇವರನ್ನು ಶಸ್ತ್ರ ಸಜ್ಜಿತ ವಿರೋಧಿ ಗುಂಪು ಎಂದು ಅದು ಕರೆಯುತ್ತದೆ) ನಡೆಸಿದ ಹಿಂದೂ, ಮುಸ್ಲಿಮರ ಹತ್ಯಾಕಾಂಡವನ್ನು ಆಮ್ನೆಸ್ಟಿ ಮೆದುವಾಗಿ ಟೀಕಿಸಿದೆ. ಭಾರತದ ರಾಜಕಾರಣಿಗಳು ಆಮ್ನೆಸ್ಟಿ ವರದಿಗೆ ಮೂರುಕಾಸಿನ ಬೆಲೆಯನ್ನು ಕೊಡದೇ ಇರಲು ಒಂದರ್ಥದಲ್ಲಿ ಅದೂ ಕಾರಣಕರ್ತ. ಅಡ್ವಾಣಿಯ ನೀತಿಗಳನ್ನು ನೀವು ಒಪ್ಪದೇ ಇರಬಹುದು, ಆದರೆ ಸಾವಿರ ಜನರನ್ನು ಕೊಂದ ಹಂತಕನನ್ನು ಕೊಲ್ಲಬೇಕೆಂದು ಅಡ್ವಾಣಿ ಹೇಳಿದ್ದನ್ನು ನೀವು ಒಪ್ಪದೇ ಇರುವುದು ಸಾಧ್ಯವಿಲ್ಲ. ಆಮ್ನೆಸ್ಟಿಯ ಮಾತಿಗೆ ಬೆಲೆ ಬರಬೇಕಿದ್ದಲ್ಲಿ, ಅದು ಭಾರತದ ವಿಶಿಷ್ಟ ಸನ್ನಿವೇಶ, ವಾಸ್ತವವನ್ನು ಗ್ರಹಿಸಬೇಕು. ■

## ಅಂತರ

ದೇಶದ ಅಭಿವೃದ್ಧಿ
ಯುವಕರ ಕೈಯಲ್ಲಿದೆ.
ದೇಶದ ಆಪತ್ತು
ರಾಜಕಾರಣಿ ಕೈಯಲ್ಲಿದೆ

**- ಉಮಾ ಬೆಳ್ತಂಗಡಿ**

## ಮಾನವ ಹಕ್ಕುಗಳ ವಿಶ್ವವಿದ್ಯಾಲಯ

**ಬೆಂ**ಗಳೂರಿನ ನ್ಯಾಷನಲ್ ಲಾ ಸ್ಕೂಲ್ (NLSIU)ನಲ್ಲಿ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ (ಎನ್ ಎಚ್ ಆರ್ ಸಿ)ವು ಮಾನವ ಹಕ್ಕುಗಳ ಕ್ಷೇತ್ರದಲ್ಲಿ ಶಿಕ್ಷಣ, ಸಂಶೋಧನೆ ಮತ್ತು ದಾಖಲೀಕರಣಕ್ಕಾಗಿ ವಿದ್ಯಾಲಯವೊಂದನ್ನು ತೆರೆಯಲು ಯೋಚಿಸಿದೆ. ಎನ್ ಎಚ್ ಆರ್ ಸಿಯ ಮೂಲಗಳ ಪ್ರಕಾರ ಈ ಕುರಿತು ಶೀಘ್ರದಲ್ಲೇ ಒಪ್ಪಂದವೊಂದಕ್ಕೆ ಸಹಿಹಾಕಲು ನಿರ್ಧರಿಸಲಾಗಿದೆ.

ಯೋಜಿತ ವಿದ್ಯಾಲಯವು ಎನ್ ಎಚ್ ಆರ್ ಸಿಗೆ ಶಾಸನ ಸಂಬಂಧಿ ಕೆಲಸಗಳನ್ನು ನಿರ್ವಹಿಸಲು ಸಹಕರಿಸುತ್ತದೆ. ಮಾನವ ಹಕ್ಕುಗಳ ಕ್ಷೇತ್ರದಲ್ಲಿ ಸಂಶೋಧನೆ, ಸಂವಿಧಾನದತ್ತ ಹಕ್ಕುಗಳನ್ನು ರಕ್ಷಿಸಲು ಮಾಡಬೇಕಾದ ಕೆಲಸಗಳನ್ನು ಪುನರ್ ಪರಿಶೀಲಿಸುವುದು, ಮಾನವ ಹಕ್ಕು ಕುರಿತು ಸಾಹಿತ್ಯ ಮುದ್ರಣ, ಸೆಮಿನಾರ್, ಮಾಧ್ಯಮಗಳ ಮೂಲಕ ಜನರಿಗೆ ಅವರ ಹಕ್ಕುಗಳನ್ನು ರಕ್ಷಿಸಿಕೊಳ್ಳಲು ಮಾಹಿತಿ ಪೂರೈಸುವುದು ವಿದ್ಯಾಲಯದ ಆಶಯವಾಗಿದೆ. ಮಾನವ ಹಕ್ಕುಗಳು, ಮೂಲಭೂತ ಕರ್ತವ್ಯಗಳು, ರಾಷ್ಟ್ರೀಯ, ಅಂತರಾಷ್ಟ್ರೀಯ ಮಾನವ ಹಕ್ಕು ಸಮಸ್ಯೆಗಳು - ಈ ಕುರಿತು ವಿದ್ಯಾಲಯವು ಸ್ನಾತಕೋತ್ತರ, ಪದವಿ ಪೂರ್ವ ಕೋರ್ಸ್‌ಗಳನ್ನು ಪ್ರಾರಂಭಿಸಲು ಯೋಜಿಸಿದೆ. ಇಷ್ಟಲ್ಲದೆ ಸ್ವಯಂ ಸೇವಾ ಸಂಸ್ಥೆಗಳು, ಕಾನೂನು ಶಿಕ್ಷಕರಿಗೆ ವಿಶೇಷ ಶಿಕ್ಷಣ ವ್ಯವಸ್ಥೆಯನ್ನು, ರಾಜಕಾರಣಿಗಳು, ಕಾರ್ಮಿಕ ಸಂಘಟನೆಗಳು ಹಾಗೂ ಪತ್ರಕರ್ತರಿಗೆ ಹಕ್ಕುಗಳನ್ನು ಪ್ರೋತ್ಸಾಹಿಸಲು ಕೋರ್ಸ್‌ಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ.

ಹಿರಿಯ ಪ್ರೊಫೆಸರ್ ಇಲ್ಲವೇ ನಿವೃತ್ತ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರು ಈ ಸಂಸ್ಥೆಯ ಮುಖ್ಯಸ್ಥರಾಗಿರುವರು. ಅವರ ಅಧಿಕಾರಾವಧಿ 3 ವರ್ಷ. ಇವರನ್ನು ಎನ್ ಎಚ್ ಆರ್ ಸಿಯ ಮುಖ್ಯಸ್ಥ, ಲಾ ಸ್ಕೂಲ್‌ನ ನಿರ್ದೇಶಕ ಮತ್ತು ಎನ್ ಎಚ್ ಆರ್ ಸಿಯ ಕಾರ್ಯದರ್ಶಿ ಇರುವ ಸಮಿತಿ ಆಯ್ಕೆ ಮಾಡುತ್ತದೆ.

ಎನ್ ಎಚ್ ಆರ್ ಸಿ ಈ ವಿದ್ಯಾಲಯಕ್ಕೆ ರೂ. 30 ಲಕ್ಷ ನೀಡಲು ಒಪ್ಪಿದ್ದು, ಉಳಿದ ವೆಚ್ಚವನ್ನು ಲಾ ಸ್ಕೂಲ್ ಭರಿಸುತ್ತದೆ.

ವಿಶ್ವಸಂಸ್ಥೆ (ಯುಎನ್‌ಒ) ಮಾನವ ಹಕ್ಕುಗಳನ್ನು ಕುರಿತು, 'ವಿಶ್ವ ಮಾನವ ಹಕ್ಕುಗಳ ಘೋಷಣೆ' ಯನ್ನು ಹೊರಡಿಸಿ 50 ವರ್ಷ ಆಗಿದ್ದು, ವಿಶ್ವಸಂಸ್ಥೆ 1995-2004ನ್ನು 'ಮಾನವ ಹಕ್ಕು ಶಿಕ್ಷಣ ದಶಕ' ಎಂದು ಘೋಷಿಸಿದೆ. ಈ ಸಂದರ್ಭದಲ್ಲಿ ಎನ್ ಎಚ್ ಆರ್ ಸಿ - ಲಾ ಸ್ಕೂಲ್‌ಗಳ ಈ ಪ್ರಯತ್ನ ಸ್ತುತ್ಯಾರ್ಹ.

# ಹಾರಾಡುವ ತಟ್ಟೆಗಳು

ಭಾಗ - 8

■ ನಾರಾಯಣ ಎಂ. ಭಟ್



ಕಿಂಗ್ ಐಲ್ಯಾಂಡ್ ಸೇರಲು ಒಬ್ಬಂಟಿಗನಾಗಿ Cessna 182 ಹೆಸರುಳ್ಳ ವಿಮಾನದಲ್ಲಿ ಹೊರಟ ಎಫ್. ವೆಲೆನ್‌ಟಿಕ್ ಎಂಬಾತನಿಗೆ ಆಕಾಶದಲ್ಲಿ ಹಸಿರು ಹಾಗೂ ಲೋಹದ ಹೊಳಪುಳ್ಳ ವಸ್ತುವೊಂದು ಗೋಚರಿಸಿತು. ಅದು ತನ್ನನ್ನು ಹಿಂಬಾಲಿಸುತ್ತಿದೆ ಎಂದೆನಿಸಿ ಕೂಡಲೇ ಭೂಮಿಯ ಕಂಟ್ರೋಲ್ ರೂಮಿಗೆ ಸುದ್ದಿ ಮುಟ್ಟಿಸಿದ. ಪ್ರಚಂಡ ವೇಗದಲ್ಲಿ ಚಲಿಸುವ ಆ ವಸ್ತುವು ಏನೆಂದು ಆತನಿಗೆ ತಿಳಿಯಲಿಲ್ಲ.

''ಇಲ್ಲಾ! ಅದು ಖಂಡಿತವಾಗಿ ವಿಮಾನವಲ್ಲ, ಅದೇನೆಂದರೆ....''

ಮಾತು ಮುಗಿಸುವ ಮುನ್ನವೇ ಕಂಟ್ರೋಲ್ ರೂಮ್‌ನ ಸಂಪರ್ಕ ಸ್ಥಗಿತವಾಯಿತು!

ಕಂಟ್ರೋಲ್ ರೂಮಿನಲ್ಲಿದ್ದವರ ಮುಖದಲ್ಲಿ ಗಾಬರಿ, ಚಿಂತೆ, ಭಯ ಏಕಕಾಲದಲ್ಲಿ ಮೂಡಿದವು.

ವೈಮಾನಿಕನಾದ ವೆಲೆನ್‌ಟಿಕ್‌ನಿಂದ ಬರುತ್ತಿದ್ದ ಸಂದೇಶ ಕಡಿದದ್ದಾದರೂ ಹೇಗೆ? ಯಾರಿಗೂ ಅರ್ಥವಾಗಲಿಲ್ಲ. ಸುಮಾರು ಎರಡು ನಿಮಿಷಗಳ ನಂತರ ಪುನಃ ವೆಲೆನ್‌ಟಿಕ್‌ನ ಧ್ವನಿ ಬಂದಿತು.

''ನಾನು ಪರಿಭ್ರಮಿಸುತ್ತಿರುವಂತೆಯೇ ನನ್ನ ವಿಮಾನದ ಮೇಲೆ ಆ'ವಸ್ತು'ವು ಸುತ್ತುತ್ತಿದೆ... ಅದರ ಸುತ್ತಲು ಹರಡಿರುವ ಬೆಳಕು ಹಸಿರು ಬಣ್ಣದ್ದು....''

''ಹಲೋ... ಹಲೋ... ಕಂಟ್ರೋಲ್ ರೂಮ್.... ನನ್ನ ವಿಮಾನದ ಎಂಜಿನ್‌ನಲ್ಲಿ ಅಡಚಣೆಯಾಗುತ್ತಿದೆ.... ಹಲೋ ಆ'ವಸ್ತು'ವು ನನ್ನ ಮೇಲೆಯೇ ಠಳಾಯಿಸುತ್ತಿದೆ.... ಹಲೋ ಕಂಟ್ರೋಲ್ ರೂಮ್....''

''ಹಲೋ.....''

ಸಂಪರ್ಕದಲ್ಲಿ ಕರ್ಕಶವಾದ ಸದ್ದು ಮೂಡಿ ಬಂತು. ವಿಮಾನದೊಂದಿಗೆ ಸಂಪರ್ಕ ಸಂಪೂರ್ಣ ಕಡಿದು ಹೋಯಿತು.

ಇದಾದನಂತರ ವೆಲೆನ್‌ಟಿಕ್‌ನನ್ನು ಸಜೀವವಾಗಿ ಯಾರೂ ನೋಡಲೇ ಇಲ್ಲಾ!

ಇದು 1978ರ ಆಕ್ಟೋಬರ್ 24ರ The Times ಪತ್ರಿಕೆಯಲ್ಲಿ ಬಂದ ವರದಿ.

## ಫ್ಲೈಯಿಂಗ್ ಸಾಸರ್ಸ್ (U.F.O)

ವೆಲೆನ್‌ಟಿಕ್‌ನ ನಾಪತ್ತೆಗೆ ಕಾರಣವಾದ ವಸ್ತುವು U.F.O. ಅಂದರೆ Unidentified Flying Object ಆಗಿರಬಹುದೇ? ಯಾಕೆಂದರೆ ಆಕಾಶದಲ್ಲಿ ತಟ್ಟೆಯಾಕಾರದ ಹಾರಾಡುವ ಯಂತ್ರಗಳು ಹಲವಾರು ನಿಗೂಢ ಪ್ರಶ್ನೆಗಳನ್ನು ಮಾನವನ ಮುಂದಿರಿಸಿವೆ. ಒಮ್ಮಿಂದೊಮ್ಮೆಲೆ ಪ್ರತ್ಯಕ್ಷವಾಗುವ, ಸೆಕೆಂಡಿಗೆ ಸಾವಿರಾರು ಮೈಲು ವೇಗದಲ್ಲಿ ಯಾವ ದಿಕ್ಕಿಗೆ ಬೇಕಾದರೂ ತಿರುಗಿ ಪರಿಭ್ರಮಣ ಮಾಡುವ ವಸ್ತುಗಳು ಏನೆಂದು ಮತ್ತು ಎಲ್ಲಿಂದ ಬರುತ್ತವೆ ಎಂದು ಇಲ್ಲಿಯವರೆಗೆ ಯಾರಿಗೂ ಖಚಿತವಾಗಿ ಗೊತ್ತಿಲ್ಲ.

ಆದ್ದರಿಂದ ಇವುಗಳನ್ನು ಗುರುತಿಸಲಾಗದ ಹಾರಾಡುವ ವಸ್ತುಗಳು (Unidentified Flying Object) ಎಂದು ಕರೆದಿರುವುದರಲ್ಲಿ ಆಶ್ಚರ್ಯವಿಲ್ಲ.

ಅನಾದಿಕಾಲದಿಂದಲೂ ಆಕಾಶವೆನ್ನುವುದು ಮಾನವನ ಪಾಲಿಗೆ ಎಂದೂ ಮುಗಿಯದ ಕುತೂಹಲದ ಭಂಡಾರವಾಗಿದೆ. ಆಕಾಶದಿಂದ ಬರುವ ಚಿತ್ರ-ವಿಚಿತ್ರ ವಸ್ತುಗಳು ಅವನನ್ನು ಭಯ-ಭೀತಿಗೊಳಿಸಿವೆ. ಕೆಲವು ಅವನ ಜಿಜ್ಞಾಸೆ ಹಾಗೂ ಬುದ್ಧಿ ಸಾಮರ್ಥ್ಯಕ್ಕೆ ಸವಾಲು ಒಡ್ಡಿವೆ.

ಕಳೆದ 4 ದಶಕಗಳಲ್ಲಿ ಜಾಗತಿಕವಾಗಿ U.F.O.ಗಳ ಬಗ್ಗೆ ನಡೆದ ವಾದ ವಿವಾದಗಳಿಗೆ ಸರಿಸಾಟಿಯಾದದು ಯಾವುದೂ ಇಲ್ಲ ಎಂದರೆ ಎಳ್ಳಷ್ಟು ಉತ್ಪ್ರೇಕ್ಷೆಯಿಲ್ಲ.

U.F.O.ಗಳನ್ನು 'ಫ್ಲೈಯಿಂಗ್ ಸಾಸರ್' ಎಂದೂ ಕರೆಯಲಾಗುತ್ತದೆ. ಕಾರಣವೇನೆಂದರೆ ಈ ವಿಚಿತ್ರ ವಸ್ತುಗಳು ಆಕಾಶದಲ್ಲಿ ಟೀ ಸಾಸರ್‌ಗಳನ್ನು ಒಂದರ ಮೇಲೊಂದು ಬೋರಲಾಗಿ ಇಟ್ಟಂತೆ ಕಾಣುತ್ತವಂತೆ.

ನಿಗೂಢ ಜಗತ್ತಿನ ಅನ್ವೇಷಕರು ಇಂತಹ ವಿಚಿತ್ರ ವಸ್ತುಗಳು ಆಕಾಶದಲ್ಲಿ ಕಾಣಿಸಿಕೊಂಡಿದ್ದರ ಬಗ್ಗೆ ಹಲವಾರು ಶತಮಾನಗಳ ಹಿಂದೆಯೇ ದಾಖಲೆ ಇಟ್ಟಿದ್ದರೂ, ವಿಶ್ವ ಯುದ್ಧದ ನಂತರ 'ಫ್ಲೈಯಿಂಗ್ ಸಾಸರ್'ಗಳು ಒಮ್ಮಿಂದೊಮ್ಮೆಲೇ ಹೆಚ್ಚಾಗಿ ಜನರಿಗೆ ಗೋಚರಿಸತೊಡಗಿದವು. ಇದಕ್ಕೆ ಹಲವು ಕಾರಣಗಳಿರಬಹುದು. ಯುದ್ಧ ತಂತ್ರಜ್ಞಾನ, ವಿಮಾನ, ರಾಕೆಟ್, ಬಾಂಬರ್ ಇತ್ಯಾದಿಗಳಲ್ಲಿ ಹೊಸ ಹೊಸ ಅನ್ವೇಷಣೆಗಳು ನಡೆದು ಪ್ರತಿಯೊಂದು ರಾಷ್ಟ್ರವು ಇನ್ನೊಂದು ರಾಷ್ಟ್ರವನ್ನು ಸದೆ ಬಡೆಯಲು ವಾಯು ಮಾರ್ಗವನ್ನು ಹೆಚ್ಚು ಹೆಚ್ಚಾಗಿ ಅವಲಂಬಿಸಲು ಶುರುಮಾಡಿತು. ಹೀಗಾಗಿ ವೈರಿಯ ದಾಳಿ ಆಕಾಶದ ಯಾವ ಕಡೆಯಿಂದ ಮತ್ತು ಯಾವ ರೂಪದಲ್ಲಿ ಬರಬಹುದೆಂಬ ಸ್ಪಷ್ಟ ಕಲ್ಪನೆಯಿಲ್ಲದ ಮಿಲಿಟರಿ ಅಧಿಕಾರಿಗಳು, ವಿಮಾನ ಪೈಲೆಟ್‌ಗಳು ಹಾಗೂ ಜನ ಸಾಮಾನ್ಯರು ಕಣ್ಣಲ್ಲಿ ಕಣ್ಣಿಟ್ಟು ಆಕಾಶವನ್ನೇ ನೋಡತೊಡಗಿದರು. ಆಗಲೇ, ಈ ಹಾರಾಡುವ ತಟ್ಟೆಗಳ ಅಸಂಖ್ಯ ಪ್ರಕರಣಗಳು ಬೆಳಕಿಗೆ ಬಂದವು. ನೀರವತೆಯಿಂದ

ಇದ್ದ ರಾತ್ರಿ ಆಕಾಶವು ಒಮ್ಮಿಂದೊಮ್ಮೆಲೇ ವಿಚಿತ್ರ ಆಕಾರದ ಹಾರಾಡುವ ತಟ್ಟೆಗಳ ನರ್ತನದಿಂದ ಜನ ಸಾಮಾನ್ಯರಲ್ಲಿ ಅಪರಿಮಿತ ಕುತೂಹಲ ಹಾಗೂ ನಿಗೂಢ ಪ್ರಶ್ನೆಗಳ ಜೊತೆಗೆ ಭಯ-ಭೀತಿಯನ್ನು ಮೂಡಿಸಿತು.

ಕಳೆದ ದಶಕಗಳಲ್ಲಿ ಹಾರಾಡುವ ತಟ್ಟೆಗಳ ಪ್ರಕರಣ ಎಷ್ಟು ನಡೆದಿವೆ ಎಂದರೆ, ಪ್ರತಿಯೊಂದನ್ನು ವಿವರವಾಗಿ ಹೇಳಬೇಕೆಂದರೆ ಒಂದು ದೊಡ್ಡ Encyclopediaವನ್ನೇ ಬರೆಯಬೇಕಾದಿತು. ಆದರೂ ಇಲ್ಲಿ ಕೆಲವು ತುಂಬಾ ರೋಚಕ ಹಾಗೂ ನಿಗೂಢವಾದ ಪ್ರಕರಣಗಳನ್ನು ದಾಖಲಿಸುವ ಪ್ರಯತ್ನ ಮಾಡುತ್ತೇನೆ.

### Pascagoulaನಲ್ಲಿ ನಡೆದ ಅಪಹರಣ!

1973ರಲ್ಲಿ ಪ್ಯಾಸ್ಕಾಗೌಲ ಎಂಬ ಸ್ಥಳದಲ್ಲಿ ಅತ್ಯಂತ ನಿಗೂಢ ಘಟನೆಯೊಂದು ನಡೆಯಿತು. ಮಿಸ್ಸಿಸ್ಸಿಪ್ಪಿ (Mississippi)ಯ ಹಡಗು ನಿರ್ಮಾಣ ಕೇಂದ್ರದಲ್ಲಿ ಕೆಲಸಕ್ಕಿದ್ದ ಚೌಲ್ಸ್ ಹಿಕ್‌ಸನ್ (42 ವರುಷ) ಹಾಗೂ ಕಾಲವಿನ್ ಪಾರ್ಕರ್ (19 ವರುಷ) ಎಂಬಿಬ್ಬರು Pascagoulaದಲ್ಲಿನ ನದಿಯಲ್ಲಿ ಮೀನು ಹಿಡಿಯಲು ರಾತ್ರಿ ಹೋದಾಗ ಅವರಿಗೆ ತಮಗೆ ಬಂದೆರಗಲಿರುವ ಆಘಾತದ ಕುರಿತು ಪರಿವೆಯೇ ಇರಲಿಲ್ಲ. ಅಂದು ಅಕ್ಟೋಬರ್ ತಿಂಗಳ 11ನೇ ತಾರೀಖು, ನದಿಯ ದಂಡೆಯಲ್ಲಿ ಮೀನು ಹಿಡಿಯುತ್ತಿದ್ದ ಇವರಿಬ್ಬರ ಎದುರು 'ಫ್ಲೈಯಿಂಗ್ ಸಾಸರ್' ಒಂದು ಬಂದು ನಿಂತಿತು.

ಅದರೊಳಗಿಂದ ವಿಚಿತ್ರವಾಗಿ ಕಾಣುತ್ತಿದ್ದ ಮೂರು ಪ್ರಾಣಿಗಳು ಹೊರಬಂದವು. ಹಿಕ್‌ಸನ್ ಮತ್ತು ಪಾರ್ಕರ್ ಈ ದೃಶ್ಯ ನೋಡಿ ಚಕಿತರಾದರು. ಆ ಮೂರು ಜೀವಿಗಳು ಇವರಿಬ್ಬರನ್ನು ಸುತ್ತುವರಿದು ಬಿಟ್ಟವು. ಆಗಲೇ ಅವರಿಬ್ಬರಿಗೆ ಗೊತ್ತಾಗಿದ್ದು, ತಾವು ಅಪಹರಣಕ್ಕೆ ಒಳಗಾಗಿದ್ದೇವೆಂದು.

U.F.O.ನೊಳಗೆ ಇವರಿಬ್ಬರನ್ನು ಕರೆದುಕೊಂಡು, ಪರೀಕ್ಷೆ ನಡೆಸಿದ ಆ ಜೀವಿಗಳು, ನಂತರ ಪುನಃ ಭೂಮಿಗೆ ತಂದು ಬಿಟ್ಟವು!

ಅನ್ಯಲೋಕದ ಜೀವಿಗಳ ಈ 'ಅಪಹರಣ'ದ ಪ್ರಕರಣವು ಇಡೀ ವಿಶ್ವದಲ್ಲಿಯೇ ಕೋಲಾಹಲವನ್ನು ಉಂಟುಮಾಡಿತು. ಜನ ಭಯಭೀತರಾದರು. ಅನ್ಯಲೋಕದ ಜೀವಿಗಳು ಹಾರಾಡುವ ತಟ್ಟೆಗಳ ಸಹಾಯದಿಂದ ಯಾರನ್ನು ತಮ್ಮ ಮುಂದಿನ ಪ್ರಯೋಗ ಪಶುಗಳಾಗಿ ಆಯ್ಕೆ ಮಾಡುತ್ತವೆಯೋ ಯಾರಿಗೂ ತಿಳಿಯದಂತಾಗಿತ್ತು.



ಇಷ್ಟೆಲ್ಲಕ್ಕೆ ಕಾರಣ ವೇನೆಂದರೆ ಅಪಹರಣಕ್ಕೆ ಒಳಗಾದ 'ಹಿಕ್‌ಸನ್'ನು Polygraph-ಪರೀಕ್ಷೆಯಲ್ಲಿ ಜಯಶಾಲಿಯಾಗಿದ್ದ. (Polygraph Testನಿಂದ ಒಬ್ಬ ವ್ಯಕ್ತಿ ಸುಳ್ಳು ಹೇಳುತ್ತಿರುವುದನ್ನು ಪತ್ತೆ ಹಚ್ಚಬಹುದು!) ಅಂದರೆ ಹಿಕ್‌ಸನ್ ಹೇಳುತ್ತಿರುವುದು ಸುಳ್ಳಲ್ಲ. ಅವನ ಅಪಹರಣದ ಘಟನೆ ನಿಜವಾಗಿಯೂ ನಡೆದದ್ದು ಎಂದು ಅನೇಕ ವಿಜ್ಞಾನಿಗಳು, ಮಿಲಿಟರಿ ಅಧಿಕಾರಿಗಳು ನಂಬಿದರು. ಆದರೂ, ಈ ಪ್ರಕರಣದಲ್ಲಿ ಕೆಲವು ಅನುಮಾನಾಸ್ಪದ ಸಂಗತಿಗಳಿವೆ. ಅವುಗಳೆಂದರೆ, ಮೊದಲನೆಯದಾಗಿ Polygraph ಪರೀಕ್ಷೆ 100ಕ್ಕೆ 100ರಷ್ಟು ಖಚಿತವಾದ ಪರಿಣಾಮ ನೀಡುವುದಿಲ್ಲ. ಹಾಗೂ ಹಿಕ್‌ಸನ್‌ನನ್ನು ಪರೀಕ್ಷೆಗೆ ಒಳಪಡಿಸಿದ Polygraphistವೃತ್ತಿನಿರತ ವ್ಯಕ್ತಿಯಾಗಿರಲಿಲ್ಲ. ಎರಡನೆಯದಾಗಿ ಜನರಲ್ಲಿ U.F.O.ದ ಬಗ್ಗೆ ಇರುವ ಹುಚ್ಚು ಕಲ್ಪನೆಗಳನ್ನು ಹೇಗೆ ಬಂಡವಾಳವಾಗಿ ಮಾಡಿ ಲಾಭಮಾಡಿಕೊಳ್ಳಬೇಕೆಂಬ ವಿಚಾರವೂ ಹಿಕ್‌ಸನ್‌ಗೆ ಇತ್ತು ಎನ್ನುವುದು ಫಿಲಿಫ್ ಜೆ. ಕ್ಲಾಸ್ ಎಂಬಾತನು ನಡೆಸಿದ ವಿಚಾರಣೆಯಿಂದ ಮುಂದೊಂದು ದಿನ ಸ್ಪಷ್ಟವಾಯಿತು. ಅದೇ ಅಲ್ಲದೇ, ತಾವು ಅಪಹರಣಗೊಂಡಿದ್ದಾಗ ಎಷ್ಟು ವೇಳೆಯಾಗಿತ್ತು ಎನ್ನುವುದರ ಬಗ್ಗೆ ಹಿಕ್‌ಸನ್ ಮತ್ತು ಪಾರ್ಕರ್ ಹಲವು ಕಡೆ ಹಲವು ಸಮಯಗಳನ್ನು ಉಲ್ಲೇಖಿಸಿದರು.

### ರೇಡಾರ್ ಪರದೆಯ ಮೇಲೆ

'ಹಾರಾಡುವ ತಟ್ಟೆಗಳು' ಅನೇಕ ಸಲ ಜನ ಸಾಮಾನ್ಯರ ಭ್ರಾಂತಿಯಿಂದ ಉಂಟಾದವು. ವಾತಾವರಣ ಹಾಗೂ ಹವಾಮಾನ ಪರೀಕ್ಷೆಗಳಿಗೆ ಹಾರಿಬಿಟ್ಟ 'ಬೆಲೂನ್'ಗಳು ಹಾರಾಡುವ ತಟ್ಟೆಗಳಾಗಿ ಅನೇಕರಿಗೆ ಕಂಡರೆ, ಇನ್ನು ಕೆಲವರಿಗೆ ದೂರದಲ್ಲಿ ಹಾರುವ ರಾಕೆಟ್‌ಗಳು U.F.O.ಗಳಂತೆ ಕಂಡವು. ಇನ್ನು ಕೆಲವು 'ಪೋಕರಿ' ಹುಡುಗರು 'ಗಾಳಿ ಪಟಕ್ಕೆ' ದೀಪಕಟ್ಟಿ ರಾತ್ರಿ ವೇಳೆಯಲ್ಲಿ ಆಕಾಶದಲ್ಲಿ ಹಾರಿಬಿಟ್ಟು ಅವುಗಳೇ U.F.O.ಗಳೆಂದು ಜನರನ್ನು ನಂಬಿಸಿಬಿಟ್ಟರು!



ಹೀಗೆಯೇ ಜನರ ಭ್ರಾಂತಿ ಎಷ್ಟರಮಟ್ಟಿಗೆ ಹೋಯಿತೆಂದರೆ, ದೂರದಲ್ಲಿ ಹೋಗುತ್ತಿದ್ದ, Oil Tankerಗಳು ಬಿಸಿಲಿನಿಂದ ಹೊಳೆದಾಗಲೂ, ಅವುಗಳು ಅನ್ಯಲೋಕದ ಯಂತ್ರಗಳಾಗಿಯೇ ಇರಬೇಕು ಎನ್ನುವ ಅನುಮಾನ ಕಾಡತೊಡಗಿತು.

ಅಮೆರಿಕಾವು U.F.O.ಗಳ ಬಗ್ಗೆ ಅಧ್ಯಯನ ನಡೆಸಲು ಹಲವಾರು ಕಮಿಟಿಗಳನ್ನು ರಚಿಸಿತು. ಆದರೆ ಇಲ್ಲಿಯವರೆಗೆ U.F.O.ಗಳ ಬಗ್ಗೆ ಅಂತಿಮ ನಿರ್ಧಾರಕ್ಕೆ ಬರಲು ಸಾಧ್ಯವಾಗಿಲ್ಲ.

ಯಾಕೆಂದರೆ, ಜನರ ಕಣ್ಣಿಗೆ ಮೋಸವಾಗಿರಬಹುದು, ಇಲ್ಲವೇ ಎಲ್ಲರೂ ಒಂದಲ್ಲ ಒಂದು ಭ್ರಾಂತಿಯಿಂದ ನರಳುತ್ತಿರಬಹುದು. ಆದರೆ, ರೇಡಾರ್ ಪರದೆಗಳ ಮೇಲೆ ತಟ್ಟೆಯಂತಿರುವ ಸ್ವಯಂ ಪ್ರಕಾಶಮಾನವಾಗಿರುವ ಅಪರಿಮಿತ ವೇಗದಲ್ಲಿ ಮುನ್ನುಗ್ಗುವ ಹಾಗು ಕ್ಷಣ ಮಾತ್ರದಲ್ಲಿ ಕಣ್ಣಿಗೆ ಕಾಣದಂತೆ ಮಾಯವಾಗುವ ವಸ್ತುಗಳನ್ನು ಭ್ರಾಂತಿ ಎಂದಾಗಲಿ ಅಥವಾ ಕಿಡಿಗೇಡಿಗಳ ಚೇಷ್ಟೆಯೆಂದಾಗಲಿ ತಳ್ಳಿಹಾಕಲಾಗದು! ಮನುಷ್ಯನಿಗೆ ಭ್ರಾಂತಿ ಇರಬಹುದು. ಆದರೆ ರೇಡಾರ್‌ಗಳಿಗೆ ಯಾವ ಭ್ರಾಂತಿ ಇದೆ!

ಹೀಗಾಗಿ U.F.O.ಗಳನ್ನು ಸಾರಾಸಗಟಾಗಿ 'ಸುಳ್ಳು' ಎನ್ನುವಂತಿಲ್ಲ. ಈ ಬಗ್ಗೆ ಕೊನೆಯ ನಿರ್ಧಾರಕ್ಕೆ ಬರಲು ವಿಶ್ವದ ಅನೇಕ ಕಡೆ ಶೋಧ-ಪರೀಕ್ಷೆಗಳು ನಡೆಯುತ್ತಿವೆ. ಆ ಬಗ್ಗೆ ಇನ್ನಷ್ಟು ವಿವರಗಳು ಮುಂದಿನ ಬಾರಿ.

ಅಂದ ಹಾಗೆ ನಿಮಗೆ 10,000 ಡಾಲರ್ ಗಳಿಸುವ ಆಸೆ ಇದೆಯೇ? ಹಾಗಿದ್ದರೆ ಮುಂದಿನ ಸಂಚಿಕೆಯನ್ನು ತಪ್ಪದೇ ಎದುರುಕಾಯಿರಿ! ■

# ವೈವಾಹಿಕ-ವರ್ಗೀಕೃತ ಜಾಹೀರಾತು

## ವೈವಾಹಿಕ

**ವಧು ಬೇಕು**

ಭಜಂತ್ರಿ, ಕನ್ನಡಿಗ, ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಉದ್ಯೋಗ, ಸಂಬಳ 3900/-, ಎತ್ತರ 170 ಸೆ.ಮೀ, ಎಣ್ಣೆ ಕೆಂಪು, 32 ವರ್ಷ. ವರ್ಗಾವಣೆ ಹೊಂದುವ ಉದ್ಯೋಗದಲ್ಲಿರುವ ಅಥವಾ ತಾಂತ್ರಿಕ ವಿಷಯ ಪೂರ್ಣ ಮಾಡಿರುವವರು ಬೇಕಾಗಿದ್ದಾರೆ. ಜಾತಿ ನಿರ್ಬಂದನೆ ಇಲ್ಲ ಕ್ಷಮಿಸಿ. ಜಾತಕದೊಂದಿಗೆ ಫೋಟೋ ಸಹಿತ ಬರೆಯಿರಿ. ಫೋಟೋ ಹಿಂತಿರುಗಿಸಲಾಗುವುದು. ಸಂಪರ್ಕಿಸಿ: ಜಾಹೀರಾತು ಸಂಖ್ಯೆ : 0002.C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು -79.

## ಆಟೋ ಕನ್ಸಲ್‌ಟೆಂಟ್ಸ್

D.P. NAGARAJ
&
D.P. RAVICHANDRA

Transacting:
All types of RTO jobs &
Motor Vehicle Insurance
Auto Consultants for three
& four wheelers for
Commission Basis

No.9, R.V. I Cross, Pattabi
Ramaiah Street
Bangalore - 4
Phone No. 6612131

## ಔಷಧಿ

Wish you Speedy Recovery

ಶ್ರೀ ವೀರಭದ್ರೇಶ್ವರ ಮೆಡಿಕಲ್ಸ್ &
ಜನರಲ್ ಸ್ಟೋರ್ಸ್
ಅಲ್ತಾಫ ಕಾಂಪ್ಲೆಕ್ಸ್, ಪಿ.ಬಿ. ರೋಡ್
ರಾಣೇಬೆನ್ನೂರ - 581 115

S.P. TOGARISIMALEMATH
Doddapeth
Ranebennur

## ಔಷಧಿ

Wish you speedy recovery

SRI GURU KOTTURESHWAR
MEDICAL STORES
Opp. to K.E.B
P.B. Road
Ranebennur

ಮತ್ತು

Raghavendra Textiles
Ranebennur

Ramesh P.T
Vishwanath P.T
Ph. No. 69539, 67531, 68887

## ಶುಭಾಶಯಗಳು

NISHANT BUILDERS &
PROMOTERS LTD

The presidency, Ist floor
82, St. Mark's Road
Bangalore- 560 001
Ph. 2218947

## ಶುಭಾಶಯಗಳು

with best Compliments from
a well wishers

Jamnadas Devida
Bangalore

## ಶುಭಾಶಯಗಳು

With best compliments from

Bombay Engg Corpn
Bangalore

## ಶುಭಾಶಯಗಳು

With best compliments from

Jamnadas Balilal
Bangalore

## ವೈವಾಹಿಕ

**ವಧು ಬೇಕು**

ಪಂಚಮಸಾಲಿ ಲಿಂಗಾಯತ ಕ್ಲಾಸ್ II ಆಫೀಸರ್ ಮಗ, ವಯಸ್ಸು 28 ವರ್ಷ, ಎತ್ತರ 5'-4", ಬಿ.ಎ., ಎಲ್.ಎಲ್.ಬಿ. ಅಡ್ವೊಕೇಟ್, ಪ್ರಾಕ್ಟೀಸ್ ಮಾಡುತ್ತಿರುವವರಿಗೆ ವಧು ಬೇಕಾಗಿದೆ. ಲಿಂಗಾಯತ ಲಾ ಪದವೀಧರೆಯಾಗಿರಬೇಕು.

ಸಂಪರ್ಕಿಸಿ:

ಜಾಹೀರಾತು ಸಂಖ್ಯೆ: 0003. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

# ವೈವಾಹಿಕ-ವರ್ಗೀಕೃತ ಜಾಹೀರಾತು

## ವೈವಾಹಿಕ

### ವಧು ಬೇಕು

ಕೆ.ಇ.ಬಿ. ನೌಕರಿಯಲ್ಲಿರುವ ಚಲವಾದಿ ವರನಿಗೆ (ವೇತನ 4 ಸಾವಿರ, ಎತ್ತರ 5'.3", 33 ವರ್ಷ) ಸುಶಿಕ್ಷಿತ ಹಾಗೂ ಸುಸಂಸ್ಕೃತ ಸುಂದರ ಕನ್ಯೆ ಬೇಕಾಗಿದೆ. ನೌಕರಿಯಲ್ಲಿದ್ದರೆ ಆದ್ಯತೆ.

ಸಂಪರ್ಕಿಸಿ

ಜಾಹೀರಾತು ಸಂಖ್ಯೆ: 0004. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

## ವೈವಾಹಿಕ

### ವರ ಬೇಕು

ಸುಂದರ ಆಕರ್ಷಕ ಪದವೀಧರೆ ಕನ್ಯೆಗೆ (26 ವರ್ಷ, 5.2 ಅಡಿ ಎತ್ತರ) ಮಾಧ್ವ ಬ್ರಾಹ್ಮಣ ವರ ಬೇಕಾಗಿದೆ. ಸರ್ಕಾರಿ ನೌಕರಿ ಇಲ್ಲವೇ ಬಿಸಿನೆಸ್ ಮಾಡುತ್ತಿರುವವರಿಗೆ ಆದ್ಯತೆ.

ಸಂಪರ್ಕಿಸಿ

ಜಾಹೀರಾತು ಸಂಖ್ಯೆ: 0007. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

## ವೈವಾಹಿಕ

### BRIDE WANTED

Lecturer, 33 years Vishwakarma Vegetarian with M.Tech qualifications requires a suitable bride with BE/MSc qualification

Apply box No. 0010
C/o Ankura Prakashana
P.B. No. 7951
Basaveshwaranagar
Bangalore - 560 079

## ವೈವಾಹಿಕ

### ವರ ಬೇಕು

ಖಾಸಗಿ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿರುವ ವಧುವಿಗೆ (35 ವರ್ಷ, 5'.1" ಎತ್ತರ) ಬ್ರಾಹ್ಮಣವರ್ಗದ ಸರ್ಕಾರಿ ನೌಕರಿಯಲ್ಲಿರುವ ವರ ಬೇಕಾಗಿದೆ.

ಸಂಪರ್ಕಿಸಿ

ಜಾಹೀರಾತು ಸಂಖ್ಯೆ: 0005. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

## ವೈವಾಹಿಕ

### ವಧು ಬೇಕು

ಖಾಸಗಿ ಕಂಪನಿಯಲ್ಲಿ ಉದ್ಯೋಗಿಯಾಗಿರುವ ವರನಿಗೆ (ವಯಸ್ಸು 29, 5'.5." ಎತ್ತರ, ವೇತನ 5 ಸಾವಿರ) ಯಾವುದೇ ಜಾತಿಯ ಸುಸಂಸ್ಕೃತ, ಸುಂದರ ಪದವೀಧರ ವಧು ಬೇಕಾಗಿದೆ.

ಸಂಪರ್ಕಿಸಿ:

ಜಾಹೀರಾತು ಸಂಖ್ಯೆ: 0008. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

## ಉದ್ಯೋಗಾವಕಾಶ

ಹೈಕೋರ್ಟ್ ವಕೀಲರ ಕಚೇರಿಯಲ್ಲಿ ಕೆಲಸ ಮಾಡಲು ಟೈಪಿಸ್ಟ್ ಕಂ ಸ್ಟೆನೋಗ್ರಾಫರ್ ಬೇಕಾಗಿದ್ದಾರೆ. ಕಂಪ್ಯೂಟರ್ ಜ್ಞಾನವಿರುವ ಯುವತಿಯರಿಗೆ ಆದ್ಯತೆ.

ಸಂಪರ್ಕಿಸಿ

ಜಾಹೀರಾತು ಸಂಖ್ಯೆ: 0011. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

## ವೈವಾಹಿಕ

### ವಧು ಬೇಕು

ಎಸ್.ಬಿ.ಐ. ನೌಕರಿಯಲ್ಲಿರುವ ವರನಿಗೆ (ವೇತನ 6 ಸಾವಿರ, ಎತ್ತರ 5'.2", 34 ವರ್ಷ) ಒಳ್ಳೆಯ ಮನೆತನದ ಸುಂದರ ವಧು ಬೇಕಾಗಿದೆ. ಜಾತಿ, ಮತ ಯಾವುದಾದರೂ ಆಗಿರಬಹುದು.

ಸಂಪರ್ಕಿಸಿ

ಜಾಹೀರಾತು ಸಂಖ್ಯೆ: 0006. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

## ವೈವಾಹಿಕ

### ವಧು ಬೇಕು

ಸ್ವಂತ ಉದ್ದಿಮೆ ನಡೆಸುತ್ತಿರುವ ವರನಿಗೆ (ವಯಸ್ಸು 28, ಎತ್ತರ 5'.4") ಜಾತಿ ಮತ ಅಡ್ಡಿಯಿಲ್ಲದ ವಿಶಾಲ ಮನೋಭಾವದ ಕನ್ಯೆ ಬೇಕಾಗಿದೆ. ಸರಳ ವಿವಾಹಕ್ಕೆ ಆದ್ಯತೆ.

ಸಂಪರ್ಕಿಸಿ

ಜಾಹೀರಾತು ಸಂಖ್ಯೆ: 0009. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79

## ಉದ್ಯೋಗ ಬೇಕು

ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಬಿ.ಇ. (ಸಿವಿಲ್) 3ನೇ ದರ್ಜೆಯಲ್ಲಿ ಪಾಸಾಗಿದೆ. 3 ವರ್ಷ ರಸ್ತೆ ನಿರ್ಮಾಣದಲ್ಲಿ ಅನುಭವ. ಅಪೇಕ್ಷಿಸುವ ಸಂಬಳ ರೂ. 5000 (ಮಾಸಿಕ).

ಸಂಪರ್ಕಿಸಿ

ಜಾಹೀರಾತು ಸಂಖ್ಯೆ: 0012. C/o ಅಂಕುರ ಪ್ರಕಾಶನ, 473, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ, ಬಸವೇಶ್ವರ ನಗರ ಮೈನ್‌ರೋಡ್, ಬೆಂಗಳೂರು-79



ಸಮಸ್ಯೆಯ ಪರಿಹಾರಕ್ಕೆ ಕೈಗೊಳ್ಳಲಾದ ಸರಿಯಾದ ನಿರ್ಧಾರವನ್ನು ತಪ್ಪಾಗಿ ಅನುಷ್ಠಾನಗೊಳಿಸಿದರೆ ಸಮಸ್ಯೆ ಇನ್ನಷ್ಟು ಬಿಗಡಾಯಿಸುತ್ತದೆ ಎಂಬುದಕ್ಕೆ ಇತಿಹಾಸದಲ್ಲಿ ಬೇಕಾದಷ್ಟು ಉದಾಹರಣೆಗಳಿವೆ. ಆದರೆ ಇತಿಹಾಸದಿಂದ ನಮ್ಮ ದೇಶದ ರಾಜಕಾರಣಿಗಳು ಪಾಠ ಕಲಿಯುವುದಿಲ್ಲ ಎನ್ನುವುದಕ್ಕೆ ಹೊಚ್ಚ ಹೊಸ ಉದಾಹರಣೆಯೆಂದರೆ ಬಿಜೆಪಿ ನೇತೃತ್ವದ ಕೇಂದ್ರ ಸರ್ಕಾರ ಉತ್ತರಾಂಚಲ, ವನಾಂಚಲ ಮತ್ತು ಛತ್ತಿಸ್‌ಗಢ ರಾಜ್ಯ ರಚನೆ ಹಾಗೂ ದೆಹಲಿಗೆ ರಾಜ್ಯದ ಸ್ಥಾನಮಾನ ನೀಡಲು ನಿರ್ಧರಿಸಿದ್ದು.

# ರಾಜ್ಯಗಳ ಮರುವಿಂಗಡಣೆ : ಮಾನದಂಡ ಏನು?

ಪ್ರತ್ಯೇಕ ರಾಜ್ಯ ಸೃಷ್ಟಿ ಭಾರತದ ಒಕ್ಕೂಟ ವ್ಯವಸ್ಥೆಗೆ ಅನುಗುಣವಾಗಿರಬೇಕು. ಯಾವುದೇ ರಾಜ್ಯದ ಜನರ ಭಾವನೆಗಳಿಗೆ ಧಕ್ಕೆ ತರುವಂತಹದ್ದಾಗಿರಬಾರದು. ಜನಾಂಗೀಯ ಮತ್ತು ಸಾಂಸ್ಕೃತಿಕ ಅಭಿಲಾಷೆಗೆ ಅನುಗುಣವಾಗಿರಬೇಕು. ಆಡಳಿತಕ್ಕೆ ಅನುಕೂಲವಾಗಿರಬೇಕು ಮತ್ತು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸಹಕಾರಿಯಾಗಿರಬೇಕು. ಆದರೆ ಈಗ ಕೇಂದ್ರ ಸರ್ಕಾರ ಕೈಗೊಂಡ ಈ ನಿರ್ಧಾರ ಈ ಯಾವುದೇ ಕಾರಣದಿಂದ ಅಲ್ಲ ಎನ್ನುವುದು ಸ್ಪಷ್ಟ.



ಸಮಸ್ಯೆಯ ಪರಿಹಾರಕ್ಕೆ ಕೈಗೊಳ್ಳಲಾದ ಸರಿಯಾದ ನಿರ್ಧಾರವನ್ನು ತಪ್ಪಾಗಿ ಅನುಷ್ಠಾನಗೊಳಿಸಿದರೆ ಸಮಸ್ಯೆ ಇನ್ನಷ್ಟು ಬಿಗಡಾಯಿಸುತ್ತದೆ ಎಂಬುದಕ್ಕೆ ಇತಿಹಾಸದಲ್ಲಿ ಬೇಕಾದಷ್ಟು ಉದಾಹರಣೆಗಳಿವೆ. ಆದರೆ ಇತಿಹಾಸದಿಂದ ನಮ್ಮ ದೇಶದ ರಾಜಕಾರಣಿಗಳು ಪಾಠ ಕಲಿಯುವುದಿಲ್ಲ ಎನ್ನುವುದಕ್ಕೆ ಹೊಚ್ಚ ಹೊಸ ಉದಾಹರಣೆಯೆಂದರೆ ಬಿಜೆಪಿ ನೇತೃತ್ವದ ಕೇಂದ್ರ ಸರ್ಕಾರ ಉತ್ತರಾಂಚಲ, ವನಾಂಚಲ ಮತ್ತು ಛತ್ತೀಸ್‌ಗಢ ರಾಜ್ಯ ರಚನೆ ಹಾಗೂ ದೆಹಲಿಗೆ ರಾಜ್ಯದ ಸ್ಥಾನಮಾನ ನೀಡಲು ನಿರ್ಧರಿಸಿದ್ದು.

ಕಳೆದ ಜೂನ್ 29ರಂದು ಕೇಂದ್ರ ಸಚಿವ ಸಂಪುಟ ಈ ನಿರ್ಧಾರವನ್ನು ಕೈಗೊಂಡ ಮರುಕ್ಷಣದಲ್ಲಿಯೇ ರಾಜ್ಯಗಳ ಪುನರ್‌ವಿಂಗಡಣೆಯ ಸಮಸ್ಯೆ ಮತ್ತಷ್ಟು ಉಲ್ಬಣಗೊಂಡಿದೆ. ಕೇಂದ್ರ ಗೃಹ ಸಚಿವ ಎಲ್.ಕೆ. ಅಡ್ವಾಣಿ ಅವರು ಸಂಪುಟದ ನಿರ್ಧಾರವನ್ನು ಪ್ರಕಟಿಸಿ ಬಾಯಿ ಮುಚ್ಚುವುದರೊಳಗಾಗಿಯೇ ಪುದುಚೆರಿಗೂ ರಾಜ್ಯದ ಸ್ಥಾನಮಾನ ನೀಡಬೇಕೆಂಬ ಹುಯಿಲು ಆರಂಭವಾಯಿತು. ದೆಹಲಿಗೆ ರಾಜ್ಯದ ಸ್ಥಾನಮಾನ ಸಿಗುವುದಾದರೆ ಪುದುಚೆರಿಗೆ ಏಕೆ ಬೇಡ ಎಂದು ಪುದುಚೇರಿಯ ರಾಜಕಾರಣಿಗಳು ಗುಲ್ಲೆಬ್ಬಿಸಿ

# ಪ್ರತ್ಯೇಕ ರಾಜ್ಯ ಬೇಡಿಕೆ ಎಲ್ಲೆಲ್ಲಿ?

**ಕಾಶ್ಮೀರ :**

ರಾಜ್ಯ ಸರ್ಕಾರದ ಬಹುತೇಕ ಎಲ್ಲ ಕಲ್ಯಾಣ ಕಾರ್ಯಕ್ರಮಗಳು ಕಾಶ್ಮೀರಕ್ಕೇ ದೊರಕುತ್ತಿವೆ, ಹಣಕಾಸಿನ ನೆರವು ಮತ್ತು ಉದ್ಯೋಗ ಲಭ್ಯವಾಗುತ್ತಿಲ್ಲ ಎಂಬ ಕಾರಣಕ್ಕಾಗಿ ಜಮ್ಮು ಮತ್ತು ಲಡಖ್‌ನಲ್ಲಿ ಪ್ರತ್ಯೇಕ ರಾಜ್ಯ ಚಳವಳಿ ಆರಂಭವಾಗಿದೆ. ಬಹಳ ಕಾಲದ ಹೋರಾಟದ ನಂತರ 1995ರಲ್ಲಿ ಲಡಖ್ ಸ್ವಾಯತ್ತ ಗುಡ್ಡಗಾಡು ಮಂಡಳಿ ಸ್ಥಾಪನೆಯಾಗಿದೆಯಾದರೂ ಪ್ರತ್ಯೇಕ ರಾಜ್ಯ ಚಳವಳಿ ನಿಂತಿಲ್ಲ.

**ಬಿಹಾರ :**

ದಕ್ಷಿಣ ಬಿಹಾರ, ಒರಿಸ್ಸಾ, ಮಧ್ಯಪ್ರದೇಶ ಮತ್ತು ಪಶ್ಚಿಮಬಂಗಾಲದ ಕೆಲವು ಜಿಲ್ಲೆಗಳನ್ನು ಸೇರಿಸಿ ಜಾರ್ಖಂಡ್ ಅಥವಾ ವನಾಂಚಲ ರಾಜ್ಯ ರಚನೆಗೆ ಒತ್ತಾಯ. 1997ರಲ್ಲಿ ಪ್ರತ್ಯೇಕ ರಾಜ್ಯ ರಚನೆಗೆ ಬಿಹಾರ ವಿಧಾನಸಭೆ ಒಪ್ಪಿಗೆ. 1998 ಜುಲೈ 29ರಂದು ಕೇಂದ್ರ ಸರ್ಕಾರವೂ ಒಪ್ಪಿಗೆ ನೀಡಿದೆ. ಆದರೆ ಈಗ ಬಿಹಾರದ ರಾಬ್ಡಿದೇವಿ ಸರ್ಕಾರ ಪ್ರತ್ಯೇಕ ರಾಜ್ಯ ರಚನೆ ವಿರೋಧಿಸುತ್ತಿದ್ದು ಜಾರ್ಖಂಡ್ ಸ್ವಾಯತ್ತ ಮಂಡಳಿಯನ್ನೂ ವಿಸರ್ಜಿಸಿದೆ. ಜಾರ್ಖಂಡ್ ಪ್ರದೇಶದಲ್ಲಿ ಪ್ರತ್ಯೇಕ ರಾಜ್ಯ ಚಳವಳಿ ಬಿರುಸಾಗಿದೆ. ಕಠಿಸಾರ್‌ನಲ್ಲಿ ಕಳೆದ ಏಪ್ರಿಲ್ ತಿಂಗಳಿನಲ್ಲಿ ನಡೆದ 5ನೇ ಅಂತರರಾಷ್ಟ್ರೀಯ ಮೈಥಿಲ ಸಮ್ಮೇಳನ ಪ್ರತ್ಯೇಕ ಮಿಥಿಲ ರಾಜ್ಯಕ್ಕೆ ಒತ್ತಾಯಿಸಿದೆ. 21 ಜಿಲ್ಲೆಗಳನ್ನು ಸೇರಿಸಿ ಮಧ್ಯಾಂಚಲ ರಾಜ್ಯ ರಚಿಸಬೇಕೆನ್ನುವ ಬೇಡಿಕೆಯೂ ಇದೆ.

**ಅಸ್ಸಾಂ:**

1971ರಿಂದಲೂ ಬೊಡೊಲ್ಯಾಂಡ್ ಅಥವಾ ಉದಯಾಚಲ ರಾಜ್ಯ ಬೇಡಿಕೆ ಇದೆ. 1993ರಲ್ಲಿ ಬೊಡೊ ಸ್ವತಂತ್ರ ಮಂಡಳಿ ರಚನೆಯಾದ ನಂತರ ಚಳವಳಿ ಇನ್ನಷ್ಟು ಚುರುಕಾಗಿದೆ. 1979ರಲ್ಲಿ ಸ್ಥಾಪನೆಯಾದ ಉಲ್ಫಾ 'ಸ್ವಾಧೀನ ಅಸ್ಸಾಂ' ಗಾಗಿ ಎಕೆ-47, ಎಕೆ-56 ಮುಂತಾದವುಗಳನ್ನು ಹಿಡಿದು ಹಿಂಸಾತ್ಮಕ ಹೋರಾಟ ನಡೆಸುತ್ತಿದೆ. ಸಣ್ಣ ರಾಜ್ಯ ರಚಿಸಲು ಒಲವು ತೋರಿರುವ ಬಿಜೆಪಿ ಸರ್ಕಾರ ತಮ್ಮ ಬೇಡಿಕೆಯನ್ನು ಈಡೇರಿಸಬಹುದು ಎಂಬ ವಿಶ್ವಾಸವನ್ನು ಅಖಿಲ ಬೊಡೊ ವಿದ್ಯಾರ್ಥಿ ಒಕ್ಕೂಟ ಮತ್ತು ಪೀಪಲ್ಸ್ ಡೆಮಾಕ್ರಟಿಕ್ ಫ್ರಂಟ್‌ಗಳು ವ್ಯಕ್ತಪಡಿಸಿವೆ.

**ನಾಗಾಲ್ಯಾಂಡ್ :**

ಮಣಿಪುರ, ಮ್ಯಾನ್ಮಾರ್ ಮತ್ತು ನಾಗಾಲ್ಯಾಂಡ್ ಸೇರಿಸಿ ಸಂಪೂರ್ಣ ನಾಗಾಲ್ಯಾಂಡ್ ರಚನೆಗೆ ನಾಗಾಗಳ ಹೋರಾಟ.

**ಪಶ್ಚಿಮ ಬಂಗಾಳ :**

ಗುಡ್ಡಗಾಡು ಜನಾಂಗದವರನ್ನು ನಿರ್ಲಕ್ಷಿಸಲಾಗುತ್ತಿದೆ ಎಂಬ ಆರೋಪದಿಂದ ಇಲ್ಲಿ 1970 ರಿಂದಲೂ ಗೋರ್ಖಾಲ್ಯಾಂಡ್‌ಗಾಗಿ ಹೋರಾಟ ನಡೆಯುತ್ತಿದೆ. ಗೋರ್ಖಾ ರಾಷ್ಟ್ರೀಯ ವಿಮೋಚನಾ ರಂಗ ಹೋರಾಟದ ನೇತೃತ್ವ ವಹಿಸಿದೆ. 1988ರಲ್ಲಿ ಡಾರ್ಜಿಲಿಂಗ್ ಗೋರ್ಖಾ ಗುಡ್ಡಗಾಡು ಅಭಿವೃದ್ಧಿ ಮಂಡಳಿ ಸ್ಥಾಪನೆಯಾಗಿದೆಯಾದರೂ ಅದು ಜನರ ಆತ್ಮತೃಪ್ತಿಯನ್ನು ಹೋಗಲಾಡಿಸಿಲ್ಲ.

**ಆಂಧ್ರಪ್ರದೇಶ :**

1956ರಿಂದಲೂ ಪ್ರತ್ಯೇಕ ತೆಲಂಗಾಣ ರಾಜ್ಯಕ್ಕಾಗಿ ಚಳವಳಿ. ತೆಲಂಗಾಣ ಜನ ಸಭಾ ರಚನೆಯಾದ ನಂತರ ಹೋರಾಟ ಚುರುಕು. ಈಗ ಕೇಂದ್ರ ಸರ್ಕಾರ ರಚಿಸಿರುವ ಮೂರು ರಾಜ್ಯಗಳಿಗಿಂತಲೂ ತೆಲಂಗಾಣ ದೊಡ್ಡದು.

**ಕರ್ನಾಟಕ :**

ಸಂವಿಧಾನದ 371ನೇ ವಿಧಿ ಪ್ರಕಾರ ಕೊಡಗು ಪ್ರತ್ಯೇಕ ರಾಜ್ಯಕ್ಕಾಗಿ ಕೊಡಗು ರಾಜ್ಯ ಮುಕ್ತಿ ಮೋರ್ಚಾ ಹೋರಾಟ ನಡೆಸಿದೆ.

**ಮಹಾರಾಷ್ಟ್ರ :**

1956ರಲ್ಲಿ ಮಧ್ಯಪ್ರದೇಶದಿಂದ ಬೇರೆಯಾಗಿ ಮಹಾರಾಷ್ಟ್ರ ಸೇರಿದ ವಿದರ್ಭ ವಲಯದ 8 ಜಿಲ್ಲೆಯ ಜನರು ಇನ್ನೂ ಅಸಂತುಷ್ಟರಾಗಿದ್ದು ಪ್ರತ್ಯೇಕ ವಿದರ್ಭ ರಾಜ್ಯಕ್ಕೆ ಒತ್ತಾಯಿಸುತ್ತಿದ್ದಾರೆ. ಆಡಳಿತದಲ್ಲಿರುವ ಶಿವಸೇನೆ ಪ್ರತ್ಯೇಕ ರಾಜ್ಯಕ್ಕೆ ವಿರೋಧವಾಗಿರುವುದರಿಂದ ಬಿಜೆಪಿ ಇಕ್ಕಟ್ಟಿಗೆ ಸಿಲುಕಿದೆ.

**ಮಧ್ಯಪ್ರದೇಶ :**

ಛತ್ತೀಸ್‌ಗಢ ರಾಜ್ಯಕ್ಕಾಗಿ 1970ರಲ್ಲಿ ಹೋರಾಟ ಆರಂಭ. ಮಧ್ಯಪ್ರದೇಶದ ಮಾಜಿ ಸಚಿವ, ಕವಿ ಪವನ್ ದಿವಾನ್ ಅವರು ಪ್ರತ್ಯೇಕ ರಾಜ್ಯಕ್ಕಾಗಿ ಮೊದಲು ಧ್ವನಿ ಎತ್ತಿದರು. ಛತ್ತೀಸ್‌ಗಢ ರಾಜ್ಯ ರಚನೆಗೆ ಕೇಂದ್ರ ಸರ್ಕಾರ ಒಪ್ಪಿಗೆ ನೀಡಿದೆ. ಆದರೆ ಸದ್ಯಕ್ಕೆ ರಾಜ್ಯದಲ್ಲಿ ಚುನಾವಣೆ ಬಂದಿರುವುದರಿಂದ ರಾಜ್ಯ ಸರ್ಕಾರ ಈ ಕುರಿತಂತೆ ಯಾವುದೇ ನಿರ್ಧಾರ ಕೈಗೊಂಡಿಲ್ಲ. ಮಧ್ಯಪ್ರದೇಶದ ಮತ್ತು ಉತ್ತರಪ್ರದೇಶದ ಕೆಲವು ಜಿಲ್ಲೆಗಳನ್ನು ಸೇರಿಸಿ ಬಂದೇಲಖಂಡ ರಾಜ್ಯ ರಚನೆಯ ಆಗ್ರಹವೂ ಇದೆ.

**ಉತ್ತರ ಪ್ರದೇಶ :**

1969ರಲ್ಲಿ ಉತ್ತರಖಂಡ ಕ್ರಾಂತಿ ದಳ ಪ್ರತ್ಯೇಕ ಉತ್ತರಖಂಡ ರಾಜ್ಯಕ್ಕೆ ಹೋರಾಟ ಆರಂಭಿಸಿತು. ಉತ್ತರ ಪ್ರದೇಶದ 12 ಜಿಲ್ಲೆಗಳನ್ನು ಸೇರಿಸಿ ಉತ್ತರಾಂಚಲ ರಚಿಸಲು ಕೇಂದ್ರ ಸರ್ಕಾರ ಒಪ್ಪಿದೆ. ಉತ್ತರಾಂಚಲ ರಚನೆಗೆ ಅವಕಾಶ ನೀಡುವ ಉತ್ತರಪ್ರದೇಶ ಮರುವಿಂಗಡಣಾ ಮಸೂದೆಗೆ ರಾಜ್ಯ ವಿಧಾನಸಭೆ ಒಪ್ಪಿಗೆ ನೀಡಿದೆ. ಆದರೆ ಹರದ್ವಾರವನ್ನು ಉತ್ತರಪ್ರದೇಶದಲ್ಲಿಯೇ ಉಳಿಸಿಕೊಂಡಿದೆ. ಉಧಾಂಸಿಂಗ್‌ನಗರ ಜಿಲ್ಲೆ ಯಾವ ರಾಜ್ಯದಲ್ಲಿರಬೇಕು ಎನ್ನುವುದು ಇನ್ನೂ ವಿವಾದದಲ್ಲಿ ಇದೆ.

ದರು. ಕೇಂದ್ರ ಸರ್ಕಾರಕ್ಕೆ ಬೆಂಬಲ ನೀಡುತ್ತಿರುವ ಎಐಎಡಿಎಂಕೆ ನಾಯಕಿ ಜಯಲಲಿತಾ ಕೂಡ ಪುದುಚೆರಿಗೆ ರಾಜ್ಯದ ಸ್ಥಾನಮಾನ ನೀಡುವಂತೆ ಒತ್ತಾಯಿಸಿದರು. ಪುದುಚೆರಿ ಕಾಂಗ್ರೆಸ್ ಸದಸ್ಯರು ರಾಜೀನಾಮೆ ನೀಡುವ ಬೆದರಿಕೆ ಹಾಕಿದರು.

ಉತ್ತರಾಂಚಲ, ವನಾಂಚಲ, ಛತ್ತಿಸ್‌ಗಢ ರಾಜ್ಯವಾಗಬಹುದಾದರೆ ಕಾಶ್ಮೀರದ ಲಡಾಖ್ ಏಕೆ ಪ್ರತ್ಯೇಕ ರಾಜ್ಯವಾಗಬಾರದು? ಬಿಹಾರದ ಮಿಥಿಲ, ಅಸ್ಸಾಮಿನ ಉದಯಾಚಲ ಅಥವಾ ಬೊಡೋಲ್ಯಾಂಡ್, ಪಶ್ಚಿಮ ಬಂಗಾಲದ ಗೋರ್ಖಾಲ್ಯಾಂಡ್, ಆಂಧ್ರಪ್ರದೇಶದ ತೆಲಂಗಾಣ, ಗುಜರಾತಿನ ಸೌರಾಷ್ಟ್ರ, ಕರ್ನಾಟಕದ ಕೊಡಗು, ಮಹಾರಾಷ್ಟ್ರದ ವಿದರ್ಭ, ಬಿಹಾರದ ಮಧ್ಯಾಂಚಲ ಪ್ರದೇಶಗಳು ಏಕೆ ಪ್ರತ್ಯೇಕ ರಾಜ್ಯಗಳಾಗಬಾರದು ಎಂಬ ಪ್ರಶ್ನೆ ಉದ್ಭವವಾಗಿ ಅವುಗಳ ಬೇಡಿಕೆಯೂ ಬಿರುಸು ಪಡೆದುಕೊಳ್ಳುತ್ತವೆ.

ಕೊಡಗಿಗೆ ಪ್ರತ್ಯೇಕ ರಾಜ್ಯದ ಸ್ಥಾನಮಾನ ನೀಡಬೇಕೆಂದು ಕೇಂದ್ರ ಪೆಟ್ರೋಲಿಯಂ ಸಚಿವ ವಾಳಪ್ಪಾಡಿ ರಾಮಮೂರ್ತಿ ಅವರು ಕೇಂದ್ರಕ್ಕೆ ಪತ್ರ ಬರೆದು ಈ ಸಮಸ್ಯೆ ಇನ್ನಷ್ಟು ಹೆಚ್ಚಲು ಕಾರಣರಾದರೆ ಮಧ್ಯಪ್ರದೇಶದ ವಿಧಾನಸಭಾಧ್ಯಕ್ಷರು ವಿಂಧ್ಯಾಂಚಲ ರಾಜ್ಯಕ್ಕೆ ಒತ್ತಾಯಿಸಿದರು. ಉತ್ತರಪ್ರದೇಶ ಮತ್ತು ಮಧ್ಯಪ್ರದೇಶದ ಕೆಲವು ಜಿಲ್ಲೆಗಳನ್ನು ಸೇರಿಸಿ ಬುಂದೇಲಖಂಡ ಎಂಬ ರಾಜ್ಯ ಸ್ಥಾಪನೆಗೂ ಒತ್ತಾಯ ಕೇಳಿಬರುತ್ತಿದೆ.

## ತಿರುಗಿ ಬಿದ್ದ ಲಾಲೂ

1997ರಲ್ಲಿ ವನಾಂಚಲ ಸ್ಥಾಪನೆಗೆ ಒಪ್ಪಿಗೆ ನೀಡಿ ಈ ಕುರಿತ ಮಸೂದೆಯನ್ನು ಬಿಹಾರ ವಿಧಾನಸಭೆಯಲ್ಲಿ ಸರ್ವಾನುಮತದಿಂದ ಒಪ್ಪಿಗೆ ಪಡೆದ ಲಾಲೂ ಪ್ರಸಾದ್ ಯಾದವ್ ಅವರು ಈಗ 'ಆತ್ಮ ತ್ಯಾಗಕ್ಕೂ ಸಿದ್ಧ, ಆದರೆ ಬಿಹಾರವನ್ನು ವಿಭಜಿಸಿ ಪ್ರತ್ಯೇಕ ರಾಜ್ಯ ಸ್ಥಾಪನೆಗೆ ಅವಕಾಶ ನೀಡುವುದಿಲ್ಲ'

ಅವಳ ದನಿ
ನನಗಾಯ್ತು ಜೇನಹನಿ
ಅವಳಿಗೆ ಸಿಟ್ಟು ಬಂದಾಗ
ನನಗಾಯ್ತು ಮಾನ ಹಾನಿ.

**– ಯು.ವಿ.ತಾರಿಣಿರಾವ್**

## ಕೊಡಗು : ರಾಮಮೂರ್ತಿ ಕಿಡಿಗೇಡಿತನ

ಕೊಡಗು ಸಣ್ಣ ಜಿಲ್ಲೆಯಾದರೂ ಕರ್ನಾಟಕದ ಶ್ರೀಮಂತ ಜಿಲ್ಲೆ. ಕಾಫಿಯ ಸವಿಯನ್ನು ವಿಶ್ವಕ್ಕೆಲ್ಲಾ ಹಂಚಿದ ಈ ಜಿಲ್ಲೆಗೆ ಸ್ವತಂತ್ರ ಲೋಕಸಭಾ ಕ್ಷೇತ್ರವಿಲ್ಲ. ಹೊರಗಿನಿಂದ ಬಂದ ಜನರು ಇಲ್ಲಿಯ ಜನಪ್ರತಿನಿಧಿಗಳಾಗುತ್ತಾರೆ ಎಂಬ ಅಸಮಾಧಾನವೂ ಇಲ್ಲಿಯ ಪ್ರಜೆಗಳಿಗಿದೆ. ಕೊಡಗು ಸಂಪದ್ಭರಿತ ಜಿಲ್ಲೆಯಾದರೂ ಅದರ ಪಾಲು ಜಿಲ್ಲೆಗೆ ದೊರಕದೇ ಅಭಿವೃದ್ಧಿ ಕಾರ್ಯಗಳು ಸೂಕ್ತ ರೀತಿಯಲ್ಲಿ ನಡೆಯುತ್ತಿಲ್ಲ ಎನ್ನುವುದೂ ಸತ್ಯ. ಆದರೆ ಈ ಕಾರಣಕ್ಕಾಗಿ ಪ್ರತ್ಯೇಕ ರಾಜ್ಯ ಬೇಡುವುದು ಮಾತ್ರ ಸರಿಯಲ್ಲ.

ಬ್ರಿಟಿಷರ ಆಳ್ವಿಕೆಯಲ್ಲಿ ಕೊಡಗು ಬ್ರಿಟಿಷ್ ರಾಣಿಯ ನೇರ ಆಡಳಿತಕ್ಕೆ ಒಳಪಟ್ಟಿತ್ತು. ಭಾರತ ಸ್ವತಂತ್ರವಾದ ನಂತರವೂ ಕೊಡಗನ್ನು ಪ್ರತ್ಯೇಕ ರಾಜ್ಯ ಎಂದೇ ಪರಿಗಣಿಸಲಾಗಿತ್ತು. ಕರ್ನಾಟಕ, ಕೇರಳ ಅಥವಾ ತಮಿಳುನಾಡಿನ ಸಂಬಂಧ ಕೊಡಗಿಗೆ ಇರಲಿಲ್ಲ. ಸ್ವತಂತ್ರ ಕೊಡಗಿನ ಮೊದಲ ಮುಖ್ಯಮಂತ್ರಿಯಾಗಿ ಸಿ. ಎಂ. ಪೂಣಚ್ಚ ಅವರು ಅಧಿಕಾರ ವಹಿಸಿಕೊಂಡಿದ್ದರು.

ಎ.ಸಿಂಗಾರವೇಲು ಮೊದಲಿಯಾರ್ ಅವರು ಬರೆದ 'ಅಭಿದಾನ ಚಿಂತಾಮಣಿ' ಕೃತಿಯಲ್ಲಿ ಕೊಡಗು ಸ್ವತಂತ್ರ ರಾಜ್ಯ ಎಂದೇ ಪರಿಗಣಿಸಲಾಗಿದೆ. ತಿರುಕ್ಕುರುವಳ್ ಅವರೂ ಸಹ ಕೊಡಗನ್ನು ಕೋಡಿಮಲೈನಾಡ್ ಎಂದು ವರ್ಣಿಸಿದ್ದಾರೆ ಎಂದು ಕೊಡಗು ಪ್ರತ್ಯೇಕ ರಾಜ್ಯ ಹೋರಾಟಗಾರರು ವಾದಿಸುತ್ತಾರೆ. ಆದರೆ ಸಾವಿರಾರು ವರ್ಷಗಳ ಹಿಂದೆ ಕೊಡಗು ಏನಾಗಿತ್ತು ಎನ್ನುವುದಕ್ಕಿಂತ ಈಗ ಅದು ಕರ್ನಾಟಕದ ಅವಿಭಾಜ್ಯ ಅಂಗ ಎನ್ನುವುದು ಮುಖ್ಯ.

1991ರ ಅಕ್ಟೋಬರ್ 17ರಂದು ತಲಕಾವೇರಿಯಲ್ಲಿ ಲಿವಾಕ್ (ಲಿಬರೇಷನ್ ವಾರಿಯರ್ಸ್ ಆಫ್ ಕೊಡಗು) ಆರಂಭವಾದ ಮೇಲೆ ಪ್ರತ್ಯೇಕ ಕೊಡಗು ರಾಜ್ಯದ ಕೂಗು ಹೆಚ್ಚಾಯಿತು. ಲಿವಾಕ್‌ನ ಪ್ರಧಾನ ಸಂಚಾಲಕ ಎನ್. ಯು. ನಾಚಪ್ಪ ಈ ಚಳವಳಿಯನ್ನು ರಾಷ್ಟ್ರಮಟ್ಟಕ್ಕೂ ಹೆಚ್ಚಿಸಿದರು. ಸಂವಿಧಾನದ 371ನೇ ವಿಧಿ ಪ್ರಕಾರ ಜನಾಂಗೀಯ ರಾಜ್ಯ ಬೇಡಿಕೆಯನ್ನು ಅವರು ಮುಂದಿಟ್ಟಿದ್ದಾರೆ. ಈಗ ಲಿವಾಕ್ ವಿಸರ್ಜನೆಯಾಗಿ ಕೊಡಗು ಮುಕ್ತಿ ಮೋರ್ಚಾದಿಂದ ಪ್ರತ್ಯೇಕ ರಾಜ್ಯಕ್ಕೆ ಚಳವಳಿ ನಡೆಯುತ್ತಿದೆ.

1956ರಲ್ಲಿ ಭಾಷಾವಾರು ರಾಜ್ಯಗಳ ವಿಂಗಡಣೆಯಾದ ಸಂದರ್ಭದಲ್ಲಿ ಕೊಡಗು ಕರ್ನಾಟಕಕ್ಕೆ ಸೇರಿತು. ಅಲ್ಲಿಂದ ಇಲ್ಲಿಯವರೆಗೆ ಕರ್ನಾಟಕದ ಜನರು ಕೊಡಗನ್ನು ತಮ್ಮ ರಾಜ್ಯದ ಕಾಶ್ಮೀರ ಎಂದೇ ಪರಿಗಣಿಸಿ ಅದಕ್ಕಾಗಿ ಹೆಮ್ಮೆ ಪಡುತ್ತಿದ್ದಾರೆ. ಕರ್ನಾಟಕದ ಜೀವ ನದಿ ಕಾವೇರಿ ಹುಟ್ಟುವ ಕೊಡಗು ಬೇರೆ ರಾಜ್ಯ ಎಂಬ ಕನಸನ್ನೂ ಕರ್ನಾಟಕದ ಜನರು ಕಾಣಲಾರರು. ಈ ಮಧ್ಯೆ ಕೇಂದ್ರದಲ್ಲಿ ಪೆಟ್ರೋಲಿಯಂ ಸಚಿವರಾಗಿರುವ ವಾಳಪ್ಪಾಡಿ ರಾಮಮೂರ್ತಿ ಅವರು ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರಿಗೆ ಪತ್ರವೊಂದನ್ನು ಬರೆದು ಕೊಡಗಿಗೆ ಪ್ರತ್ಯೇಕ ರಾಜ್ಯದ ಸ್ಥಾನಮಾನ ನೀಡುವಂತೆ ಒತ್ತಾಯಿಸಿ ಉರಿಯುವ ಬೆಂಕಿಗೆ ತುಪ್ಪ ಹಾಕಿದ್ದಾರೆ. ತಮಿಳು ಗ್ರಂಥಗಳಲ್ಲಿ ಬರುವ ವಾಕ್ಯಗಳನ್ನು ಉದಾಹರಿಸಿರುವ ಅವರು ಪ್ರತ್ಯೇಕ ಕೊಡಗು ಅನಿವಾರ್ಯ, ಸಣ್ಣ ರಾಜ್ಯಗಳ ಒಲವನ್ನು ಹೊಂದಿರುವ ಬಿಜೆಪಿ ಉತ್ತರಾಂಚಲ, ವನಾಂಚಲ ಮತ್ತು ಛತ್ತಿಸ್‌ಗಢ ರಚಿಸಿದಂತೆ ಕೊಡಗನ್ನೂ ಪ್ರತ್ಯೇಕ ರಾಜ್ಯವನ್ನಾಗಿಸಬೇಕು ಎಂದು ಅವರು ಒತ್ತಾಯಿಸಿದ್ದಾರೆ. ಜೊತೆಗೆ ಕೊಡಗು ಮುಕ್ತಿ ಮೋರ್ಚಾದ ಮನವಿ ಪತ್ರವನ್ನೂ ಲಗತ್ತಿಸಿದ್ದಾರೆ. ಇದು ಕರ್ನಾಟಕದವರಲ್ಲದ, ಕೊಡಗಿನ ಬಗ್ಗೆ ತಿಳುವಳಿಕೆ ಇಲ್ಲದ ವ್ಯಕ್ತಿಯೊಬ್ಬರು ಮಾಡಿದ ಕಿಡಿಗೇಡಿತನವಲ್ಲದೆ ಮತ್ತೇನೂ ಅಲ್ಲ.

ರಾಮಮೂರ್ತಿ ಅವರ ಪತ್ರಕ್ಕೆ ರಾಜ್ಯ ಸರ್ಕಾರ ಕಟುವಾಗಿಯೇ ಉತ್ತರಿಸಿದೆ. ರಾಮಮೂರ್ತಿ ಅವರ ಪತ್ರವನ್ನು ಖಂಡಿಸಿ ಸಚಿವ ಸಂಪುಟದಲ್ಲಿ ಕೈಗೊಳ್ಳಲಾದ ನಿರ್ಣಯವನ್ನು ಕೇಂದ್ರ ಸರ್ಕಾರಕ್ಕೆ ಕಳಿಸಿಕೊಡಲಾಗಿದೆ. ಕರ್ನಾಟಕದಾದ್ಯಂತ ತೀವ್ರ ವಿರೋಧವೂ ವ್ಯಕ್ತವಾಗಿದೆ. ಕೇಂದ್ರ ಸಚಿವರ ಪತ್ರಕ್ಕೆ ಪರೋಕ್ಷವಾಗಿ ಉತ್ತರ ನೀಡಿದ ಬಿಜೆಪಿ ಪ್ರಧಾನ ಕಾರ್ಯದರ್ಶಿ ವೆಂಕಯ್ಯನಾಯ್ಡು ಅವರು ಕೊಡಗಿಗೆ ಪ್ರತ್ಯೇಕ ರಾಜ್ಯದ ಸ್ಥಾನಮಾನ ನೀಡುವ ವಿಚಾರ ಬಿಜೆಪಿಗಾಗಲಿ ಅಥವಾ ಕೇಂದ್ರ ಸರ್ಕಾರಕ್ಕಾಗಲೀ ಇಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಕೊಡಗನ್ನು ಪ್ರತ್ಯೇಕ ರಾಜ್ಯವನ್ನಾಗಿ ಮಾಡಬೇಕೆನ್ನುವುದು ಕನ್ನಡಿಗರ ಭಾವನೆಯಲ್ಲ. ಕೊಡಗಿನವರ ಭಾವನೆಯೂ ಅಲ್ಲ. ಆದರೂ ಅಲ್ಲಿ ಕೊಂಚ ಪ್ರಮಾಣದಲ್ಲಿ ಈ ಭಾವನೆ ಉಂಟಾಗಿದೆ ಎನ್ನುವುದು ಸತ್ಯ. ಇದಕ್ಕೆ ಕಾರಣಗಳನ್ನು ತಿಳಿಯುವ ಯತ್ನವನ್ನು ರಾಜ್ಯ ಸರ್ಕಾರ ಮಾಡಬೇಕು. ಕನಿಷ್ಠ ಕೊಡಗಿಗೆ ಪ್ರತ್ಯೇಕ ಲೋಕಸಭಾ ಕ್ಷೇತ್ರವನ್ನಾದರೂ ನೀಡಿ ಅಲ್ಲಿನ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ನೀಡಬೇಕು. ಪಂಚಾಯತ್ ವ್ಯವಸ್ಥೆಯನ್ನು ಬಲಪಡಿಸಬೇಕು. ಹೊರಗಿನವರು ಬಂದು ಹಣ ಮಾಡಿಕೊಂಡು ಅಲ್ಲಿನ ಜನಪ್ರತಿನಿಧಿಗಳಾಗುವುದನ್ನು ತಪ್ಪಿಸಿದರೆ ಕೊಡಗು ಪ್ರತ್ಯೇಕ ರಾಜ್ಯ ಚಳವಳಿ ತನ್ನಷ್ಟಕ್ಕೆ ತಾನೇ ಬಂದ್ ಆಗಬಹುದು.

ಎಂದು ಪ್ರಕಟಿಸಿದರು. ಅಲ್ಲದೆ ಬಿಹಾರ ರಾಜ್ಯ ಪುನರ್ ವಿಂಗಡಣಾ ಮಸೂದೆಗೆ ವಿಧಾನಸಭೆಯಲ್ಲಿ ಒಪ್ಪಿಗೆ ದೊರೆಯಲಿಲ್ಲ. ಉತ್ತರ ಪ್ರದೇಶ ವಿಧಾನಸಭೆಯಲ್ಲಿ ಉತ್ತರಾಂಚಲ ರಾಜ್ಯ ರಚನೆಗೆ ಅಂಗೀಕಾರ ದೊರಕಿತಾದರೂ ಈ ರಾಜ್ಯದಿಂದ ಹರದ್ವಾರವನ್ನು ಹೊರಗಿಡುವ ನಿರ್ಣಯ ಕೈಗೊಳ್ಳಲಾಯಿತು. ಉಧಾಂಸಿಂಗ್ ನಗರ ಜಿಲ್ಲೆಯನ್ನು ಉತ್ತರಾಂಚಲಕ್ಕೆ ಸೇರಿಸಿದರೆ ಕೇಂದ್ರಕ್ಕೆ ನೀಡಿರುವ ಬೆಂಬಲ ವಾಪಸು ಪಡೆಯುವುದಾಗಿ ಅಕಾಲಿ ದಳ ಬೆದರಿಕೆ ಹಾಕಿದ್ದರಿಂದ ಬಿಜೆಪಿ ಇಕ್ಕಟ್ಟಿಗೆ ಸಿಲುಕಿತು. ಈ ಕುರಿತಂತೆ ರಾಜ್ಯ ಸರ್ಕಾರ ಯಾವುದೇ ನಿರ್ಧಾರ ಕೈಗೊಳ್ಳದೆ ತಲೆನೋವನ್ನು ಕೇಂದ್ರ ಸರ್ಕಾರಕ್ಕೆ ವರ್ಗಾಯಿಸಿತು. ಕೇಂದ್ರದ ನಿರ್ಧಾರಕ್ಕೆ ಬದ್ಧ ಎಂದೂ ಹೇಳಿ ತನ್ನ ಜವಾಬ್ದಾರಿಯಿಂದ ನುಣುಚಿಕೊಂಡಿತು.

## ಗಿರಣಿ ಊರಿಗೆ ಗಿರಕಿ

ಉತ್ತರಾಂಚಲ ರಾಜ್ಯ ಸ್ಥಾಪನೆಗಿಂತ ಉಧಾಂಸಿಂಗ್ ನಗರ ಜಿಲ್ಲೆಯನ್ನು ಯಾವ ರಾಜ್ಯಕ್ಕೆ ಸೇರಿಸಬೇಕು ಎನ್ನುವುದೇ ಕಗ್ಗಂಟಾಗಿದೆ. ಎರಡು ವರ್ಷಗಳ ಹಿಂದೆ ಉಧಾಂಸಿಂಗ್ ನಗರ ನೈನಿತಾಲ್ ಜಿಲ್ಲೆಯಲ್ಲಿತ್ತು. ಬಹುಜನ ಸಮಾಜ ಪಕ್ಷದ ನಾಯಕಿ ಮಾಯಾವತಿ ಉತ್ತರಪ್ರದೇಶದ ಮುಖ್ಯ ಮಂತ್ರಿಯಾದಾಗ ಇದನ್ನು ಪ್ರತ್ಯೇಕ ಜಿಲ್ಲೆಯನ್ನಾಗಿ ಮಾಡಿದರು. ಉಧಾಂಸಿಂಗ್ ನಗರದಲ್ಲಿ ಸುಮಾರು 300 ಅಕ್ಕಿ ಗಿರಣಿಗಳಿವೆ. ಹತ್ತು ಸಕ್ಕರೆ ಕಾರ್ಖಾನೆ ಇವೆ. 300 ಅಕ್ಕಿ ಗಿರಣಿಗಳಲ್ಲಿ ಬಹುತೇಕ ಗಿರಣಿಗಳು ಬಾಸಮತಿ ಅಕ್ಕಿ ಗಿರಣಿಗಳಾದ್ದರಿಂದ ಆರ್ಥಿಕವಾಗಿ ಇವು ಹೆಚ್ಚು ಮಹತ್ವವನ್ನು ಪಡೆದುಕೊಂಡಿವೆ. ಅಲ್ಲದೆ ಇಲ್ಲಿ ಶೇ. 40ರಷ್ಟು ಸಿಖ್ ಜನರು ಇದ್ದಾರೆ. ಉಧಾಂಸಿಂಗ್‌ನಗರ ಜಿಲ್ಲೆ ಉತ್ತರಾಂಚಲಕ್ಕೆ ಸೇರಿದರೆ ತಮ್ಮ ಪ್ರಾಬಲ್ಯಕ್ಕೆ ಕತ್ತರಿ ಬಿದ್ದೀತು ಎಂಬ ಭಯ ಸಿಖ್‌ರನ್ನು ಕಾಡುತ್ತಿದೆ. ಅಲ್ಲದೆ ಉತ್ತರಾಂಚಲಕ್ಕೆ ಸೇರುವ 12 ಜಿಲ್ಲೆಗಳಲ್ಲಿ 11 ಜಿಲ್ಲೆಗಳು ಗುಡ್ಡಗಾಡು ಪ್ರದೇಶದ್ದಾದರೆ ಉಧಾಂಸಿಂಗ್‌ನಗರ ಮಾತ್ರ ಬಯಲು ಪ್ರದೇಶ ದಲ್ಲಿದೆ. ಸಿಖ್‌ರ ವಿರೋಧವಿರುವುದರಿಂದಲೇ ಪಂಜಾಬ್ ಮುಖ್ಯಮಂತ್ರಿ ಅಕಾಲಿದಳ (ಬಾದಲ್) ನಾಯಕ ಪ್ರಕಾಶ್ ಸಿಂಗ್ ಬಾದಲ್ ಅವರು ಇದನ್ನು ಉತ್ತರಾಂಚಲಕ್ಕೆ ಸೇರಿಸಲು ವಿರೋಧ ವ್ಯಕ್ತಪಡಿಸುತ್ತಿದ್ದಾರೆ. ಉತ್ತರಾಂಚಲಕ್ಕೆ ಸೇರಿಸಿದರೆ ಕೇಂದ್ರ ಸರ್ಕಾರಕ್ಕೆ ನೀಡಿರುವ ಬೆಂಬಲ ವಾಪಸು ಪಡೆಯುವ ಬೆದರಿಕೆಯನ್ನೂ ಹಾಕಿದ್ದಾರೆ. ಈ ವಿಷಯ ರಾಜಕೀಯ ಬಿಕ್ಕಟ್ಟನ್ನೇ ಉಂಟು ಮಾಡಿದ್ದರಿಂದ ಕೇಂದ್ರ ಸರ್ಕಾರ ಉನ್ನತ ಮಟ್ಟದ ಸಮಿತಿಯನ್ನು ರಚಿಸಿ ಬೀಸೋ ದೊಣ್ಣೆಯಿಂದ ಪಾರಾಗಿದೆ.




ಬಿಜೆಪಿ ಸರ್ಕಾರ ಮೂರು ಹೊಸ ರಾಜ್ಯಗಳ ಸೃಷ್ಟಿಗೆ ಯತ್ನಿಸಿತಾದರೂ ಮೂರು ರಾಜ್ಯಗಳು ಈಗ ಅನಿಶ್ಚಿತ ಸ್ಥಿತಿ ಯಲ್ಲಿವೆ. ಇದರೆಲ್ಲದರ ಒಟ್ಟಿನರ್ಥ ಬಿಜೆಪಿ ಸರ್ಕಾರ ರಾಜ್ಯಗಳ ಪುನರ್ ವಿಂಗಡಣೆಯನ್ನು ದೂರದರ್ಶಿತ್ವದಿಂದ ಮಾಡಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ.

ಪ್ರತ್ಯೇಕ ರಾಜ್ಯ ಸೃಷ್ಟಿ ಭಾರತದ ಒಕ್ಕೂಟ ವ್ಯವಸ್ಥೆಗೆ ಅನುಗುಣವಾಗಿರಬೇಕು. ಯಾವುದೇ ರಾಜ್ಯದ ಜನರ ಭಾವನೆಗಳಿಗೆ ಧಕ್ಕೆ ತರುವಂತಹದ್ದಾಗಿರಬಾರದು. ಜನಾಂಗೀಯ ಮತ್ತು ಸಾಂಸ್ಕೃತಿಕ ಅಭಿಲಾಷೆಗೆ ಅನುಗುಣವಾಗಿರಬೇಕು. ಆಡಳಿತಕ್ಕೆ ಅನುಕೂಲವಾಗಿರಬೇಕು ಮತ್ತು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸಹಕಾರಿಯಾಗಿರಬೇಕು. ಆದರೆ ಈಗ ಕೇಂದ್ರ ಸರ್ಕಾರ ಕೈಗೊಂಡ ಈ ನಿರ್ಧಾರ ಈ ಯಾವುದೇ ಕಾರಣದಿಂದ ಅಲ್ಲ ಎನ್ನುವುದು ಸ್ಪಷ್ಟ.

## ರಾಜ್ಯ ರಚನೆಗೆ ಏನು ಆಧಾರ?

ಯಾವ ಆಧಾರದಲ್ಲಿ ಕೇಂದ್ರ ಸರ್ಕಾರ ಮೂರು ರಾಜ್ಯಗಳ ಸ್ಥಾಪನೆಗೆ ನಿರ್ಧರಿಸಿತು? ಆಡಳಿತದ ಅನುಕೂಲದ ಕಾರಣವೇ? ಹಾಗಾದರೆ ಉತ್ತರಪ್ರದೇಶ, ಬಿಹಾರ, ಮಧ್ಯಪ್ರದೇಶ ಮತ್ತು ಮಹಾರಾಷ್ಟ್ರಗಳನ್ನು ತಲಾ 4-5 ರಾಜ್ಯಗಳನ್ನಾಗಿ ವಿಂಗಡಿಸಬೇಕಾಗುತ್ತದೆ. ಆಡಳಿತದ ನಿರ್ಲಕ್ಷವೇ ಪ್ರತ್ಯೇಕ ರಾಜ್ಯಕ್ಕೆ ಮಾನದಂಡವಾದರೆ ಬಿಹಾರದ ಎಲ್ಲ ಜಿಲ್ಲೆಗಳನ್ನೂ ಪ್ರತ್ಯೇಕ ರಾಜ್ಯವನ್ನಾಗಿ ಮಾಡಬೇಕಾದೀತು. ಜನಾಂಗೀಯ ವಾದವಾದರೆ ಈ ಮೂರು ರಾಜ್ಯಗಳೇ ಏಕೆ, ಡಾರ್ಜಿಲಿಂಗ್ ಅಥವಾ ಬೊಡೊಲ್ಯಾಂಡ್‌ನ್ನು ಪ್ರತ್ಯೇಕ ರಾಜ್ಯವನ್ನಾಗಿ ಯಾಕೆ ಮಾಡಿಲ್ಲ? ಪ್ರಾಂತೀಯ ಅಸಮಾನತೆಯೇ ಕಾರಣ ವಾದರೆ ವಿದರ್ಭ, ಸೌರಾಷ್ಟ್ರ, ತೆಲಂಗಾಣ ಮತ್ತು ಲಡಾಖ್ ಪ್ರದೇಶಗಳನ್ನು ಯಾಕೆ ಬಿಡಲಾಯಿತು?

ಸಣ್ಣ ರಾಜ್ಯಗಳ ರಚನೆ ಬಿಜೆಪಿಯ ಪ್ರಣಾಳಿಕೆ ಯಾಗಿತ್ತು. ಅದನ್ನು ರಾಷ್ಟ್ರೀಯ ಕಾರ್ಯಕ್ರಮ ದಲ್ಲಿಯೂ ಸೇರಿಸಲಾಗಿತ್ತು ಎನ್ನುವುದು ನಿಜ. ಅಲ್ಲದೆ ಸಣ್ಣ ರಾಜ್ಯಗಳು ಅಭಿವೃದ್ಧಿಯ ದೃಷ್ಟಿ ಯಿಂದ, ಆಡಳಿತದ ದೃಷ್ಟಿಯಿಂದ ಅನುಕೂಲವೂ ಹೌದು. ಆದರೆ ಈಗ ಕೇಂದ್ರ ಸರ್ಕಾರ ಕೈಗೊಂಡ ಕ್ರಮದಿಂದ ಉಂಟಾಗಿರುವ ಪರಿಸ್ಥಿತಿ ಗಮನಿಸಿದರೆ ರಾಜ್ಯಗಳನ್ನು ಮರುವಿಂಗಡಿಸಿದ ವಿಧಾನ ಮಾತ್ರ ತಪ್ಪು ಎಂಬ ಶಂಕೆ ಮೂಡುತ್ತದೆ. ಭೌಗೋಳಿಕ, ಜನಾಂಗೀಯ ಒತ್ತಾಸೆ, ಭಾಷೆಮತ್ತು ಸಂಸ್ಕೃತಿ, ಆರ್ಥಿಕ ಸ್ಥಿತಿ, ಆಡಳಿತ ಅನುಕೂಲತೆ ಈ ಯಾವುದೇ ಕಾರಣದಿಂದ ಈ ಮೂರು ರಾಜ್ಯಗಳನ್ನು ಸ್ಥಾಪಿಸಲಾಗಿಲ್ಲ. ಪ್ರತ್ಯೇಕ ರಾಜ್ಯ ಸ್ಥಾಪಿಸದೇ ಹೋದರೆ ಬಿಜೆಪಿಯನ್ನು ತ್ಯಜಿಸು ವುದಾಗಿ ಜಾರ್ಖಂಡ್ ಪ್ರದೇಶದ 12 ಬಿಜೆಪಿ ಎಂಪಿಗಳು ಬೆದರಿಕೆ ಹಾಕಿದ್ದರಿಂದ ಕೇಂದ್ರ ಸರ್ಕಾರ ತರಾತುರಿಯ ನಿರ್ಧಾರವನ್ನು ಕೈಗೊಳ್ಳಬೇಕಾಯಿತು.

ಒಕ್ಕೂಟ ವ್ಯವಸ್ಥೆಯಲ್ಲಿ ಈ ರೀತಿಯ

ಕ್ರಮದಿಂದ ಏನಾಗುತ್ತದೆ ಎನ್ನುವುದನ್ನು ಹಿಂದಿನ ಸೋವಿಯತ್ ಒಕ್ಕೂಟ, ಯುಗೊಸ್ಲಾವಿಯ, ಆಫ್ರಿಕಾ ದೇಶಗಳ ಉದಾಹರಣೆ ನಮ್ಮ ಮುಂದೆ ಇದೆ. ರುವಾಂಡಾ, ಪೆರುಗಳಲ್ಲಿಯ ಜನಾಂಗೀಯ ಹೋರಾಟದ ಉದಾಹರಣೆ ಇದೆ. ಶ್ರೀಲಂಕಾದಲ್ಲಿ ನಡೆಯುತ್ತಿರುವ ಆಂತರಿಕ ಕದನ ಕೂಡಾ ಇದೇ ಉದ್ದೇಶದಿಂದ ಎನ್ನುವುದು ನಮಗೆ ತಿಳಿದಿದೆ. ಎಲ್‌ಟಟಿಇ ಉಗ್ರರ ಹಿಂಸಾಚಾರದ ಹಿನ್ನೆಲೆಯೂ ಇದೇ ಆಗಿದೆ.

1956ರಲ್ಲಿ ಭಾಷಾವಾರು ರಾಜ್ಯಗಳ ಸ್ಥಾಪನೆಯಿಂದ ಉಂಟಾದ ಅತೃಪ್ತಿಯನ್ನು ಇನ್ನೂ ಹೋಗಲಾಡಿಸಲು ಸಾಧ್ಯವಾಗದ ನಮ್ಮ ದೇಶದ ಉದಾಹರಣೆಯೇ ಇದೆ. ಆದರೂ ನಮಗೆ ಇದು ಯಾವುದೂ ಪಾಠವಾಗಲಿಲ್ಲ.

## ಸ್ವಾತಂತ್ರ್ಯಕ್ಕಿಂತ ಮೊದಲೇ

ಪ್ರತ್ಯೇಕ ರಾಜ್ಯ ರಚನೆಯ ಒತ್ತಾಯ ಭಾರತ ಸ್ವತಂತ್ರವಾಗುವುದಕ್ಕಿಂತಲೂ ಮೊದಲೇ ಕೇಳಿಬಂದ ಕೂಗು. 1938ರಲ್ಲಿಯೇ ಆದಿವಾಸಿ ಮಹಾಸಭಾ ಪ್ರತ್ಯೇಕ ಜಾರ್ಖಂಡ್ ರಾಜ್ಯಕ್ಕೆ ಒತ್ತಾಯಿಸಿತ್ತು. 1938ರಲ್ಲಿಯೇ ಉತ್ತರಖಂಡ ಸ್ವಾಯತ್ತತೆ ಹೋರಾಟವೂ ಆರಂಭವಾಯಿತು. ಗಢ್‌ವಾಲ್‌ನ ಶ್ರೀನಗರದಲ್ಲಿ ನಡೆದ ವಿಶೇಷ ಕಾಂಗ್ರೆಸ್ ಸಮಾವೇಶದಲ್ಲಿ ಜವಾಹರಲಾಲ್ ನೆಹರೂ, ಗೋವಿಂದ ವಲ್ಲಭ ಪಂತ್ ಅವರ ಉಪಸ್ಥಿತಿಯಲ್ಲಿಯೇ ಉತ್ತರಖುಂಡಕ್ಕೆ ಸ್ವಾಯತ್ತತೆ ನೀಡುವಂತೆ ಕೆಲವು ಕಾಂಗ್ರೆಸ್ ಸದಸ್ಯರು ಒತ್ತಾಯಿಸಿದ್ದರು.

**ದುರ್ದರ್ಶನ**

ಗಳಿಗೆಗೊಮ್ಮೆ
'ಅಡಚಣೆಗಾಗಿ ಕ್ಷಮಿಸಿ'
ಎಂದು ದೂರದರ್ಶನದಲ್ಲಿ
ಹೇಳುವುದನ್ನು ಕೇಳಿದಾಗಲೆಲ್ಲ
ನನಗೆ ಅನಿಸುತ್ತದೆ, ಇದು
ದೂರದರ್ಶನವಲ್ಲ, ದುರ್ದಶನವೆಂದು.

**– ಮಹಾಲಿಂಗ ಯಾಳಗಿ**

## ಬೇಡಿಕೆಗೆ ಕಾರಣವೇನು?

ಪ್ರತ್ಯೇಕ ರಾಜ್ಯ ಚಳವಳಿಗೆ ಹಲವಾರು ಕಾರಣಗಳಿವೆ. ಆದರೆ ಮುಖ್ಯವಾದ ಕಾರಣವೆಂದರೆ ರಾಜ್ಯ ಸರ್ಕಾರಗಳು ತಮ್ಮನ್ನು ನಿರ್ಲಕ್ಷಿಸುತ್ತಿದೆ ಎಂಬ ಭಾವನೆ ಮತ್ತು ಅಧಿಕಾರ ಕೇಂದ್ರೀಕರಣ. ಅಭಿವೃದ್ಧಿ, ಉದ್ಯೋಗ, ಇತರ ಆಕರ್ಷಕ ಯೋಜನೆಗಳನ್ನು ತಮ್ಮ ಪ್ರದೇಶದಲ್ಲಿ ಅನುಷ್ಠಾನಗೊಳಿಸಲಾಗುತ್ತಿಲ್ಲ ಎಂಬ ಭಾವನೆ, ಬೇರೆ ಪ್ರದೇಶದ ಜನರು ಸಂಪತ್ತನ್ನು ಲೂಟಿ ಮಾಡುವುದು, ತಮ್ಮ ಪ್ರದೇಶದ ಉತ್ಪನ್ನಕ್ಕೆ ಸಮನಾದ ಸಂಪತ್ತಿನ ಭಾಗ ತಮ್ಮ ಪ್ರದೇಶದ ಅಭಿವೃದ್ಧಿಗೆ ಲಭ್ಯವಾಗದೇ ಇರುವುದು, ಮಲತಾಯಿ ಧೋರಣೆಯೂ ಪ್ರತ್ಯೇಕ ರಾಜ್ಯ ಬೇಡಿಕೆಗೆ ಕಾರಣ ವಾಗುತ್ತದೆ. ಜನಾಂಗೀಯ ಅಭಿಲಾಷೆ ಮತ್ತು ಭಾಷೆ, ಭೌಗೋಳಿಕ ಪರಿಸರವೂ ಪ್ರತ್ಯೇಕ ರಾಜ್ಯದ ಕೂಗನ್ನು ಎಬ್ಬಿಸುತ್ತದೆ. ರಾಜಕೀಯ ಅಧಿಕಾರ ಲಭ್ಯವಾಗದೇ ಇರುವುದು ಒಂದು ಕಾರಣ.

ಆರ್ಥಿಕ ಅಸಮಾನತೆ ಕಾರಣಕ್ಕಾಗಿ ಜಮ್ಮು ಮತ್ತು ಕಾಶ್ಮೀರದಲ್ಲಿ ಲಡಾಖ್ ರಾಜ್ಯದ ಬೇಡಿಕೆ ಬಂದರೆ ಜನಾಂಗೀಯ ಕಾರಣಕ್ಕಾಗಿ ಪ್ರತ್ಯೇಕ ಬೊಡೊಲ್ಯಾಂಡ್ ಹೋರಾಟ ಆರಂಭವಾಯಿತು. ಪ್ರಾಂತೀಯ ಅಸಮಾನತೆ ಕಾರಣಕ್ಕಾಗಿ ವಿದರ್ಭ, ಸೌರಾಷ್ಟ್ರ ಮತ್ತು ತೆಲಂಗಾಣ ಹೋರಾಟಗಳು ನಡೆಯುತ್ತಿವೆ.

## ಆಯೋಗ ರಚನೆ ಇಲ್ಲ

ಎರಡನೇ ರಾಜ್ಯ ಪುನರ್‌ವಿಂಗಡಣಾ ಆಯೋಗ ರಚಿಸುವುದಿಲ್ಲ ಎಂದು ಕೇಂದ್ರ ಗೃಹ ಸಚಿವ ಎಲ್.ಕೆ. ಅಡ್ವಾಣಿ ಅವರು ಪ್ರಕಟಿಸಿದ್ದಾರೆ. ಯಾವುದೇ ರಾಜ್ಯಗಳಿಂದ ಪ್ರತ್ಯೇಕ ರಾಜ್ಯ ರಚನೆ ಬೇಡಿಕೆ ಬಂದರೆ ಅದನ್ನು ಸಹಾನುಭೂತಿಯಿಂದ ಪರಿಶೀಲಿಸುವುದಾಗಿಯೂ ಅವರು ಹೇಳಿದ್ದಾರೆ.

ರಾಜ್ಯಗಳ ಪುನರ್‌ವಿಂಗಡಣೆಗೆ ಆಯೋಗದ ಶಿಫಾರಸು ಬೇಕಿಲ್ಲ ಎನ್ನುವುದಕ್ಕೂ ಉದಾಹರಣೆ ನಮ್ಮಲ್ಲಿ ಇದೆ. ಆಂಧ್ರಪ್ರದೇಶ, ಮಹಾರಾಷ್ಟ್ರ, ಪಂಜಾಬ್, ಹರಿಯಾಣ, ಹಿಮಾಚಲ ಪ್ರದೇಶ, ಮಿಜೋರಾಂ, ಗೋವಾ ರಾಜ್ಯಗಳನ್ನು ಯಾವುದೇ ಆಯೋಗದ ಶಿಫಾರಸುಗಳಿಲ್ಲದೆ ರಚಿಸಲಾಗಿದೆ. ಸಂವಿಧಾನದ 3 ಮತ್ತು 4ನೇ ವಿಧಿಯ ಪ್ರಕಾರ ಕೇಂದ್ರ ಸರ್ಕಾರ ಸಂಸತ್ತಿನಲ್ಲಿ ಸಾದಾ ನಿರ್ಣಯವನ್ನು ಮಂಡಿಸಿ ಒಪ್ಪಿಗೆ ಪಡೆದು ಪ್ರತ್ಯೇಕ ರಾಜ್ಯ ಸ್ಥಾಪಿಸಬಹುದು. ಇದಕ್ಕೆ ರಾಷ್ಟ್ರಪತಿ ಅವರ ಅಂಗಿತ ಅಗತ್ಯವಿದೆ. ಸಂವಿಧಾನದ 239ಎ ಎ ಮತ್ತು 239 ಎಬಿ ವಿಧಿಯ ಪ್ರಕಾರ ವಿಶೇಷ ಸ್ಥಾನಮಾನಗಳನ್ನು ಹೊಂದಿದ ಕೇಂದ್ರಾಡಳಿತ ಪ್ರದೇಶಕ್ಕೆ ರಾಜ್ಯದ ಸ್ಥಾನಮಾನ ನೀಡುವುದಕ್ಕೆ ಸಂವಿಧಾನದ ತಿದ್ದುಪಡಿ ಅಗತ್ಯ.

ಸರಳ ಬಹುಮತದಲ್ಲಿ ಪ್ರತ್ಯೇಕ ರಾಜ್ಯ ಸ್ಥಾಪಿಸಬಹುದು ಎನ್ನುವುದು ಸತ್ಯವಾದರೂ ಅದಕ್ಕೆ ದೂರದರ್ಶಿತ್ವ ಸಾರ್ವಜನಿಕ ಚರ್ಚೆ, ಜನಾಭಿಮತ ಸಂಗ್ರಹವಾದರೂ ನಡೆಯಬೇಕಲ್ಲವೇ?

ಅಗತ್ಯವಿದ್ದಲ್ಲಿ ಮತ್ತು ಅನಿವಾರ್ಯವಾದಲ್ಲಿ ಪ್ರತ್ಯೇಕ ರಾಜ್ಯ ರಚಿಸಬಹುದಾದರೂ ಒಕ್ಕೂಟ ವ್ಯವಸ್ಥೆಯನ್ನು ಹೊಂದಿದ ಭಾರತದಲ್ಲಿ ಯಾವುದೇ ರಾಜ್ಯ ಸ್ವತಂತ್ರವಾಗಿ ಇರಲು ಸಾಧ್ಯವಿಲ್ಲ. ಸಣ್ಣ ರಾಜ್ಯಗಳೆಲ್ಲ ಉತ್ತಮವಾಗಿರುವುದಿಲ್ಲ ಎನ್ನುವುದಕ್ಕೆ ಗೋವಾ, ಮಣಿಪುರ ರಾಜ್ಯಗಳ ಉದಾಹರಣೆ ಇದೆ. ಬೇರೆ ರಾಜ್ಯಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳದೆ ಯಾವುದೇ ರಾಜ್ಯ ಪ್ರತ್ಯೇಕವಾಗಿ ಇರಲಾಗದು. ಈ ಹಿನ್ನೆಲೆಯಲ್ಲಿ ಪ್ರತ್ಯೇಕ ರಾಜ್ಯ ಬೇಡಿಕೆಯನ್ನು ತಪ್ಪಿಸಲು ಯಾವ ಕ್ರಮ ಕೈಗೊಳ್ಳಬೇಕು ಎಂಬ ಕುರಿತು ಕೇಂದ್ರ ಸರ್ಕಾರ ಯೋಚಿಸಬೇಕಾಗಿದೆ. ಪ್ರತ್ಯೇಕ ರಾಜ್ಯ ಬೇಡಿಕೆ ಬಂದ ಪ್ರದೇಶಗಳಲ್ಲಿ ಸ್ವಾಯತ್ತ ಮಂಡಳಿಗಳನ್ನು ರಚಿಸುವುದರಿಂದ ಈ ಸಮಸ್ಯೆ ಬಗೆಹರಿಸಲು ಸಾಧ್ಯವಿಲ್ಲ.

ಆರ್ಥಿಕ ಮತ್ತು ಅಧಿಕಾರ ವಿಕೇಂದ್ರೀಕರಣ, ಪಂಚಾಯತ್ ವ್ಯವಸ್ಥೆ ಬಲಪಡಿಸುವುದರಿಂದ ಪ್ರತ್ಯೇಕ ರಾಜ್ಯ ಚಳವಳಿಯನ್ನು ತಡೆಯಬಹುದು. ಪಂಚಾಯತ್ ವ್ಯವಸ್ಥೆ ಸರಿಯಾಗಿ ಕೆಲಸ ಮಾಡಿದರೆ ಆಡಳಿತ ಅಥವಾ ಅಸಮಾನತೆಯ ಸಮಸ್ಯೆ ಉದ್ಭವವಾಗುವುದಿಲ್ಲ. ಆದರೆ ಬಿಹಾರದಲ್ಲಿ ಕಳೆದ 20 ವರ್ಷಗಳಿಂದಲೂ ಪಂಚಾಯ್ತಿ ಚುನಾವಣೆಯೇ ನಡೆದಿಲ್ಲ. ಅಲ್ಲಿ ಅಧಿಕಾರ ವಿಕೇಂದ್ರೀಕರಣದ ಮಾತನಾಡುವುದು ಹೇಗೆ? ಆದ್ದರಿಂದಲೇ ಬಿಹಾರದಲ್ಲಿ ಪ್ರತ್ಯೇಕ ರಾಜ್ಯದ ಬೇಡಿಕೆ ಹೆಚ್ಚು. ಜಾರ್ಖಂಡ್ ಅಥವಾ ಉತ್ತರಾಂಚಲ ಅಲ್ಲದೆ ಮಿಥಿಲಾ ಮತ್ತು ಮಧ್ಯಾಂಚಲ ಬೇಡಿಕೆ ಬಿಹಾರದಲ್ಲಿದೆ. ಜನರಿಗೆ ಅಧಿಕಾರ ನೀಡಬೇಕು ಎಂಬ ಬಗ್ಗೆ ರಾಜಕಾರಣಿಗಳು ನಿಜವಾಗಿಯೂ ಆಸಕ್ತಿ ವಹಿಸಿದರೆ ಮತ್ತು ಇದರಲ್ಲಿ ರಾಜಕೀಯ ಮಾಡದೇ ಹೋದರೆ ಪ್ರತ್ಯೇಕ ರಾಜ್ಯ ಚಳವಳಿ ತನ್ನ ಬಿಸಿಯನ್ನು ಕಳೆದುಕೊಂಡೀತು! ಈ ನಿಟ್ಟಿನಲ್ಲಿ ಆರ್ಥಿಕ ದುಸ್ಥಿತಿಯಿಂದ ಹೋಳಾದ ಸೋವಿಯತ್ ಒಕ್ಕೂಟ ಅಥವಾ ಜನಾಂಗೀಯ ಕಾರಣಕ್ಕಾಗಿ ವಿಭಜನೆ ಗೊಂಡ ಯುಗೊಸ್ಲಾವಿಯಗಳ ಹಿನ್ನೆಲೆಯಲ್ಲಿ ಗೋಡೆಯನ್ನು ಒಡೆದುಹಾಕಿ ಒಂದಾದ ಜರ್ಮನಿ ನಮಗೆ ಮಾದರಿಯಾಗಬೇಕು.

**■ ಎಂ.ಕೆ. ಧಾರಿಣಿ**

**ಹಳೆಯ ವಸ್ತು, ಹೊಸಬುದ್ಧಿ, ಆಧುನಿಕ ಜೀವನ ಸೌಲಭ್ಯ. ನೀವೂ ನಿಮ್ಮ ಮಹಡಿಗೆ ಇದನ್ನು ಅಳವಡಿಸಿ ನೋಡಬಾರದೇಕೆ?**

# ಮಲೆನಾಡ ಗೀಸರ್

ಇತ್ತೀಚೆಗೆ ಮಲೆನಾಡು ಪ್ರದೇಶಕ್ಕೆ ಭೇಟಿ ಕೊಟ್ಟಿದ್ದೆ. ಪ್ರಯಾಣದ ಆಯಾಸ, ಮೈಕೈನೋವು, ಜಿಟಿಜಿಟಿ ಮಳೆ. ಮೈಗೆ ಒಂದಿಷ್ಟು ಬಿಸಿ ಬಿಸಿ ನೀರು ಬಿದ್ದರೆ ''ಹಾಯ್'' ಎನಿಸುತ್ತದೆಂದು ಸುತ್ತಲೂ ನೋಡಿದೆ. ಎಲ್ಲಿಯೂ ಗೀಸರಾಗಲೀ, ಬಿಸಿನೀರ ಹಂಡೆಯಾಗಲೀ ಕಣ್ಣಿಗೆ ಬೀಳಲಿಲ್ಲ.

ಮನೆಯ ಯಜಮಾನರಾದ ಮೋಹನ್ ಮತ್ತೂರು 'ಒಂದ್ಹತ್ತು ನಿಮಿಷ ತಾಳಿ' ಎಂದವರೆ ಮಹಡಿಯಿಳಿದು ಹೋದರು. ಸ್ವಲ್ಪ ಹೊತ್ತಿನ ನಂತರ ಬರುವಾಗ ಕೈಯ್ಯಲ್ಲಿ ಬಿಸಿ ಬಿಸಿ ಕಾಫಿ.

ಹದಿನೈದಿಪ್ಪತ್ತು ನಿಮಿಷದಲ್ಲಿ ಮಹಡಿಯ ನಲ್ಲಿಯಲ್ಲಿ ಬಿಸಿ ಬಿಸಿ ನೀರು. ಗೀಸರೂ ಇಲ್ಲ, ಹಂಡೆಯೂ ಅಲ್ಲಿಲ್ಲ. ಈ ಮಧ್ಯೆ ವಿದ್ಯುತ್ತೂ ಇರಲಿಲ್ಲ. ಹತ್ತು ನಿಮಿಷದ ಹಿಂದೆ ನಲ್ಲಿಯಲ್ಲಿ ಬಂದ ತಣ್ಣೀರು ಈಗ ಕೈಸುಡುವಷ್ಟು ಬಿಸಿ.

''ಇದೇನು ಜಾದು?'' ಕೇಳಿದೆ.

''ಇದೇ ಮಲೆನಾಡಿನ ಗೀಸರಿನ ಮಹಾತ್ಮೆ'' ಕಣ್ಣು ಮಿಟುಕಿಸಿದರು. ಬಂದ ಕಾರ್ಯ ಮರೆತು ಆ ಗೀಸರಿನ ಬಗ್ಗೆ ವಿಚಾರಿಸತೊಡಗಿದೆ.

ಸುಂದರವಾದ ಮನೆಯ ಒಂದು ಕಡೆ ಬಚ್ಚಲು ಮನೆ, ಹೂತಿಟ್ಟ ಹಂಡೆ, ಉರಿಯುತ್ತಿರುವ ಬೆಂಕಿ, ಆದರೆ ಮನೆಯ ಬೇಕೆಂದ ಕಡೆ ನಳದ ಮೂಲಕ - ಬಿಸಿನೀರು.

ಇದು ಮಲೆನಾಡ ''ಅನಾಮಿಕ ಎಂಜಿನಿಯರ್''ನ ಜ್ಞಾನದ ಕೂಸು.

ಮನೆ ಎಷ್ಟೇ ಅಂತಸ್ತಿನದಿರಲಿ, ಮೇಲ್ಭಾಗದಲ್ಲಿ ಒಂದು ನೀರಿನ ಟ್ಯಾಂಕ್ ಇರುತ್ತದೆ. ಟ್ಯಾಂಕಿನಿಂದ ಒಂದು ಪೈಪು ನೇರವಾಗಿ ಹಂಡೆಗೆ ಬರುತ್ತದೆ. ಹಂಡೆಯಿಂದ ಹೊರಟ ಮತ್ತೊಂದು ಪೈಪು ಅವಶ್ಯಕತೆಯಿರುವ ಕಡೆಗೆ ಬಿಸಿ ನೀರನ್ನು ಒಯ್ಯುತ್ತದೆ. ಕೆಳಗೆ ಹಂಡೆಯಲ್ಲಿ ನೀರು ಬಿಸಿಯಾದಾಕ್ಷಣ ಸಂಪರ್ಕ ಹೋಗಿರುವ ಕಡೆಯಲ್ಲೆಲ್ಲಾ ಬಿಸಿ ನೀರು.

ಈ ವ್ಯವಸ್ಥೆಗೆ ಸಾಮಾನ್ಯವಾಗಿ ನಾವೆಲ್ಲಾ ಉಪಯೋಗಿಸುವ ಹಂಡೆಯೇ ಸಾಕು. ಆದರೆ ಬಾಯನ್ನು ಒಂದು ಕಬ್ಬಿಣದ ತಟ್ಟೆಯಂತಹ ಮುಚ್ಚಳದಿಂದ ಮುಚ್ಚಿ ನಟ್ಟು, ಬೋಲ್ಟುಗಳ ಸಹಾಯದಿಂದ ವಾಯುಬಂಧನ (Air Tight) ಮಾಡಿರುತ್ತಾರೆ. ಮುಚ್ಚಳದ ಮಧ್ಯಭಾಗದಲ್ಲಿ ಎರಡು ಪೈಪುಗಳು. ಒಂದು ನೀರು ಹಂಡೆಗೆ ಬರಲು, ಮತ್ತೊಂದು ಬಿಸಿನೀರು ಹೊರ ಹೋಗಲು. ನೀರು ಬರುವ ಪೈಪು ಹೊರಹೋಗುವ ಪೈಪಿಗಿಂತ ಸ್ವಲ್ಪ ಉದ್ದವಿರುತ್ತದೆ.

ಇನ್ನು ಒಲೆ. ಇದು ಯಾವುದೇ ಹಂಡೆಯನ್ನು ಹೂತು ಕಟ್ಟಿದ ಒಲೆಗಿಂತ ಭಿನ್ನವಿಲ್ಲ. ಆದರೆ ಒಲೆಯನ್ನು ಸರಳುಗಳ ಸಹಾಯದಿಂದ ಎರಡು ಭಾಗ ಮಾಡಿದರೆ, ಮೇಲಿನದು ಉರುವಲು ತುಂಬಲು, ಕೆಳಗಿನದು ಬೂದಿ ಸಂಗ್ರಹಿಸಲು ಬರುತ್ತದೆ. ಬೇಕಾದರೆ ಒಲೆಯ ಬಾಯಿಗೆ ಮುಚ್ಚಳ ಅಳವಡಿಸಬಹುದು.

ಓವರ್ ಹೆಡ್ ಟ್ಯಾಂಕಿನಿಂದ ಸದಾ ಕಾಲ ನೀರು ಪೂರೈಸುವ ವ್ಯವಸ್ಥೆ ''ನೀರು ತನ್ನ ಮಟ್ಟವನ್ನು ತಾನೇ ಕಾಯ್ದುಕೊಳ್ಳುತ್ತದೆ'' ಎಂಬ ಸರಳ ತತ್ವದ ಆಧಾರದ ಮೇಲೆ ಕೆಲಸ ಮಾಡುತ್ತದೆ.

ಆಯಾ ಪ್ರದೇಶದಲ್ಲಿ ದೊರೆಯುವ ಉರುವಲೇ ಇದಕ್ಕೆ ಸಾಕು. ಅಂದರೆ ತೆಂಗಿನ ಸಿಪ್ಪೆ, ಮರದ ಹೊಟ್ಟು, ಕಟ್ಟಿಗೆ, ಅಡಿಕೆ ಪಟ್ಟೆ, ಅಡಿಕೆ ಸಿಪ್ಪೆ ಇತ್ಯಾದಿ.

ಮತ್ತೂರಿನ ಮೋಹನ್, ಶಿವಮೊಗ್ಗೆಯ ಕುಮಾರಿ ವಾಣಿ ಇವರ ಅಭಿಪ್ರಾಯದಂತೆ ಈ ವ್ಯವಸ್ಥೆಗೆ ಅಂತಹ ವೆಚ್ಚವೇನೂ ತಗಲುವುದಿಲ್ಲ. ಇದಕ್ಕಾಗಿ ಮಾಡುವ ಹಂಡೆಯ ವಿಶೇಷ ಮುಚ್ಚಳ ಬಿಟ್ಟರೆ ಉಳಿದಂತೆ ಮನೆಗೆ ಹಾಕುವ ನಲ್ಲಿ ಪೈಪುಗಳೇ ಸಾಕು. ಇದರಿಂದ ಷವರ್ ಹಾಗೂ ಟಬ್‌ಗಳಿಗೂ ಸಂಪರ್ಕ ಕಲ್ಪಿಸಬಹುದು. ಹಂಡೆಯನ್ನು ಬಿಟ್ಟರೆ ಉಳಿದಂತೆ ಮಾಡುವ ಎಲ್ಲಾ ಕೆಲಸಗಳೂ ಶಾಶ್ವತವಾದವು. 40X 30ರಲ್ಲಿ ಕಟ್ಟಿದ ಎರಡು ಅಥವಾ ಮೂರಂತಸ್ತಿನ ಮನೆಗಳಿಗೆ ಪ್ರಾರಂಭದ ವೆಚ್ಚ ಸುಮಾರು 6-8 ಸಾವಿರ ರೂ ಆಗುತ್ತದೆ.



ಎಲ್ಲಾ ವ್ಯವಸ್ಥೆಯಲ್ಲಿರುವಂತೆ ಇದರಲ್ಲೂ ಸಹ ಅನುಕೂಲ ಹಾಗೂ ಅನಾನುಕೂಲ ಎರಡೂ ಇವೆ.

ಅನುಕೂಲಗಳೆಂದರೆ,

ಎಲ್ಲೋ ಒಂದು ಭಾಗದಲ್ಲಿ ಒಲೆ, ಹಂಡೆಯಿದ್ದರೂ ಮನೆಯಲ್ಲಿ ಬೇಕೆಂದ ಕಡೆ ಬಿಸಿನೀರಿಗೆ ಸಂಪರ್ಕ ಕೊಡಬಹುದು.

ಆಯಾ ಸ್ಥಳಗಳಲ್ಲಿ ದೊರೆಯುವ ಉರುವಲೇ ಸಾಕು. ಹೊಗೆಯಿಲ್ಲದ ಮನೆ ವಾತಾವರಣ, ಸ್ವಚ್ಛವಾದ ಬಚ್ಚಲು ಮನೆ.

ಹಂಡೆ ಹಳೆಯ ಮಾದರಿಯಾದರೂ, ಆಧುನಿಕ ಜೀವನಶೈಲಿಯ ವಿನ್ಯಾಸಕ್ಕೆ ಹೊಂದಿಕೆಯಾಗುತ್ತದೆ.

ಇದಕ್ಕೆ ವಿದ್ಯುತ್ತಿನ ಅವಶ್ಯಕತೆಯಿಲ್ಲ. ಪದೇ ಪದೇ ರಿಪೇರಿ ಅಥವಾ ಷಾರ್ಟ್ ಸರ್ಕಿಟನ ಅವಾಂತರಗಳು ಖಂಡಿತಾ ಇಲ್ಲ.

ಒಬ್ಬರು ನೀರನ್ನು ಉಪಯೋಗಿಸಿದ ನಂತರ ಮತ್ತೆ ಹಂಡೆಯನ್ನು ತುಂಬುವ ಕೆಲಸವೇ ಇಲ್ಲ. ಅದು ತಾನೇ ಟ್ಯಾಂಕಿನಿಂದ ನೀರನ್ನು ತುಂಬಿಸಿಕೊಳ್ಳುತ್ತದೆ.

ಇದರ ಅನಾನುಕೂಲತೆಯೆಂದರೆ,

ಹಂಡೆಯಿಂದ ನೇರವಾಗಿ ಬಿಸಿ ನೀರನ್ನು ತೆಗೆಯಲು ಬರುವುದಿಲ್ಲ.

ಸುಮಾರು 8-10 ವರ್ಷಗಳಿಗೊಮ್ಮೆ ಇಡೀ ಒಲೆಯನ್ನು ಒಡೆದು ಹಂಡೆಯನ್ನು ಹೊರತೆಗೆದು ಸ್ವಚ್ಛಮಾಡಿ ಮತ್ತೆ ಹೊಸ ಒಲೆಯನ್ನು ಕಟ್ಟಬೇಕಾಗುತ್ತದೆ.

ಈಗ ಮಾಡುವಂತೆ ಪದೇ ಪದೇ ಹಂಡೆಯನ್ನು ಶುಚಿಗೊಳಿಸಲಾಗದು.

ಎಲ್ಲಿಯವರೆಗೆ ನಾವು ಹಂಡೆಯನ್ನು ಬಿಸಿ ಮಾಡುತ್ತಿರುವೆವೋ ಅಲ್ಲಿಯವರೆಗೂ ಬಿಸಿ ನೀರು ಲಭ್ಯ. ಉಳಿದಂತೆ ಅದು ತಣ್ಣೀರೇ. ಮಲೆನಾಡಿನ ಗೀಸರ್ ವಿಷಯದಲ್ಲಿ ಎರಡು ಅಂಶಗಳನ್ನು ಯಾವತ್ತೂ ಗಮನದಲ್ಲಿಡಬೇಕು.

ಅವೆಂದರೆ,

ಓವರ್ ಹೆಡ್ ಟ್ಯಾಂಕ್ ಸದಾ ತುಂಬಿರಬೇಕು.

ಹಂಡೆಯಿಂದ ಬಿಸಿ ನೀರನ್ನು ಒಯ್ಯುವ ಪೈಪುಗಳು ಓವರ್ ಹೆಡ್ ಟ್ಯಾಂಕಿನಿಂದ ಕನಿಷ್ಟ ಐದು ಅಡಿಗಳಿಗಿಂತ ಕಡಿಮೆ ಎತ್ತರದಲ್ಲಿರಬೇಕು.

ಯಾವುದೇ ಕಾರಣಕ್ಕೆ ಪ್ಲಾಸ್ಟಿಕ್ ಪೈಪುಗಳನ್ನು ಉಪಯೋಗಿಸಬಾರದು.

ಹೇಗಿದೆ ನಮ್ಮ ಮಲೆನಾಡ ಜನರ 'ಗೀಸರ್'! ರೂಮಿಗೊಂದರಂತೆ ಗೀಸರಿನ ಗೊಡವೆ, ವಿದ್ಯುತ್ತಿಗಾಗಿ ಕಾಯುವುದು, ಹೊರೆಯಾಗುವ ವಿದ್ಯುತ್ತಿನ ಬಿಲ್ಲು, ಇವುಗಳಿಂದ ಪಾರಾಗಬಹುದಲ್ಲವೇ? ಹಳೆಯ ವಸ್ತು, ಹೊಸಬುದ್ಧಿ, ಆಧುನಿಕ ಜೀವನ ಸೌಲಭ್ಯ.

ನೀವೂ ನಿಮ್ಮ ಮಹಡಿಗೆ ಇದನ್ನು ಅಳವಡಿಸಿ ನೋಡಬಾರದೇಕೆ?

ಕೊನೆಯಲ್ಲಿ ಒಂದು ಸಣ್ಣ ಸಲಹೆ.

ಹಂಡೆ ಚಿಕ್ಕದಿದ್ದಷ್ಟೂ ಅದರ ಕಾರ್ಯ ಕ್ಷಮತೆ ಹೆಚ್ಚೆನ್ನುತ್ತಾರೆ ಮೋಹನ್.

**■ ಡಾ. ಎಚ್. ಎಸ್. ವೆಂಕಟೇಶ್**

# ಸೊಲ್ಲಾಪುರದ ವಿಶಿಷ್ಟ ಕಲಾವಿದ



"ಕಲೆ ಯಾರೊಬ್ಬರ ಸ್ವತ್ತು ಅಲ್ಲ. ಸಮಾಜದ ಎಲ್ಲ ವರ್ಗದ ಜನರಲ್ಲೂ ಒಂದೊಂದು ರೀತಿಯ ಕಲಾ ನೈಪುಣ್ಯ ಇರುವುದನ್ನು ನಾವು ಕಾಣಬಹುದು. ಇದು ಹೆಣ್ಣು - ಗಂಡು ಎಂಬ ಭೇದಭಾವವಿಲ್ಲದೇ ಎಲ್ಲರ ಮನದಲ್ಲಿ ಸುಪ್ತವಾಗಿ ಅಡಗಿರುತ್ತದೆ. ಮನದ ಬಾಗಿಲು ತೆರೆದರೆ ಮಾತ್ರ ಕಲೆ ಹೊರಬಂದು ಬೆಳಕು ಚೆಲ್ಲಲು ಸಾಧ್ಯ'' ಎನ್ನುತ್ತಾರೆ 28ರ ಹರೆಯದ ಸೊಲ್ಲಾಪುರದ ಯುವಕ ಸೋಮಶೇಖರ ಆಹೀರವಾಡಿಕರ್.

ಮದುವೆಯ ಮಂಟಪದಲ್ಲಿ ಸೊರಗಿದ ಸಾಮಾನುಗಳಲ್ಲಿ ಸೋಮಶೇಖರ ತಯಾರಿಸುವ ವಸ್ತುಗಳು ನೋಡುಗರ ಮನ ಸೆಳೆಯುತ್ತವೆ. ಸದಾ ಗಡಿಬಿಡಿಯಲ್ಲಿರುವ, ಏನಾದರೊಂದು ಹೊಸ ಹೊಸ ವಿನ್ಯಾಸದ ವಸ್ತುಗಳನ್ನು ತಯಾರಿಸುವ ವಿಚಾರ ಸೋಮಶೇಖರನದು.

ಜೀವನೋಪಾಯಕ್ಕಾಗಿ ಸಣ್ಣ ಕಾರ್ಖಾನೆಯಲ್ಲಿ ಕೆಲಸಕ್ಕಿರುವ ಈ ಹುಡುಗ ಮದುವೆಗಳಿಗೆ ಮಾತ್ರ ಈ ರೀತಿಯ ವಸ್ತುಗಳನ್ನು ತಯಾರಿಸಿ ಕೊಡುವನು. ಈ ವಸ್ತುಗಳ ತಯಾರಿಕೆಗೆ ಬಳಸುವ ಸಾಮಾನುಗಳು ಈ ರೀತಿ ಇವೆ.

ಒಂದು ದಪ್ಪವಾದ ರಟ್ಟನ್ನು ತೆಗೆದುಕೊಂಡು ಅದನ್ನು ಬೇಕಾದ ರೀತಿಯಲ್ಲಿ ಕತ್ತರಿಸಿ ಅದಕ್ಕೆ ವೆಲ್‌ವೆಟ್ ಕಾಗದ ಅಂಟಿಸಿದ ನಂತರ ಐಸ್‌ಕ್ರೀಮ್ ಚಮಚವನ್ನು ಸುತ್ತಲು ಬಳಸುತ್ತಾರೆ. ಬೆಂಕಿ ಕಡ್ಡಿಗಳಿಂದಲೇ ಮನೆ ತಯಾರಿಸಿದ್ದಾರೆ. ಇದಕ್ಕಾಗಿ ಅವರು ಬಳಸಿರುವ ಇನ್ನಿತರ ವಸ್ತುಗಳೆಂದರೆ ಪ್ಲಾಸ್ಟಿಕ್ ಬಾಟಲಿ, ಸಾಧಿಲೇಸ್,



ಹೂವಿನ ಲೇಸ್, ಬಳೆ, ವೆಲ್‌ವೆಟ್ ಕಾಗದ, ಬಾದಾಮಿ ಕಾಯಿಗಳು, ಹಸಿ ಕೊಬ್ಬರಿ ಇನ್ನೂ ಮುಂತಾದ ಸಣ್ಣಪುಟ್ಟ ಪದಾರ್ಥಗಳು.

**■ ಅಶೋಕ ಉಮರಾಣಿಕರ**

# ತಾಳ್ಮೆಗೆಟ್ಟು ತಾಳಿ ಕಟ್ಟಿದರೆ......

**ನಮ್ಮನ್ನು ಪ್ರೀತಿಸುವವರನ್ನು ನಾವು ಪ್ರೀತಿಸುತ್ತೇವೆ. ನಮಗೆ ಇಷ್ಟವಾಗದವರು ನಮ್ಮನ್ನು ಬಯಸರು. ಇದು ಸಹಜವಾದ ನಿಯಮ. ಆದರೂ ಸಹ ನನ್ನನ್ನು ಒಬ್ಬಾಕೆ ಎಷ್ಟು ಇಷ್ಟ ಪಡುತ್ತಾಳೋ ಅಷ್ಟೇ ಪ್ರಮಾಣದಲ್ಲಿ ನಾನೂ ಸಹ ಆಕೆಯನ್ನು ಇಷ್ಟಪಡುತ್ತೇನೆಂಬ ಕಡ್ಡಾಯ ಸಲ್ಲದ್ದು ಹಾಗೂ ಅಸಾಧ್ಯವಿರಬಹುದು.**

## ಹೆಜ್ಜೆ - 16

**ನಾ**ವು ಜನರನ್ನು ಏಕೆ ಪ್ರೀತಿಸುತ್ತೇವೆ ಎಂಬುದಕ್ಕೆ ಇರುವ ನಾಲ್ಕು ಪ್ರಚೋದನೆಗಳಲ್ಲಿ ಮೂರರ ಬಗೆಗೆ ಹಿಂದಿನ ಪಯಣದಲ್ಲಿ ತಿಳಿದು ಕೊಂಡಾಯಿತು. ನಾಲ್ಕನೆಯದು:'ಸ್ನೇಹಪರತೆಯ ಪಾರಸ್ಪರಿಕತೆ'. ಅಂದರೆ, 'ಸಮಾಜವೊಂದು ಕನ್ನಡಿಯ ಹಾಗೆ; ಅಲ್ಲಿ ಬಿಂಬದ ಕ್ರಿಯೆಗೆ, ಪ್ರತಿಬಿಂಬದ ಪ್ರತಿಕ್ರಿಯೆ ಕಾಣುವ' ಎಂದ ಹಾಗೆ. ಈ ವಿಚಾರದ ಬಗೆಗೆ ತಿಳಿಯುತ್ತ ನಿಗದಿತ ದಾರಿಯ ಮೊದಲ ತುಂಡನ್ನು ಈಗ ಸವೆಯಿಸೋಣ.

ನಮ್ಮನ್ನು ಪ್ರೀತಿಸುವವರನ್ನು ನಾವು ಪ್ರೀತಿಸುತ್ತೇವೆ. ನಮಗೆ ಇಷ್ಟವಾಗದವರು ನಮ್ಮನ್ನು ಬಯಸರು. ಇದು ಸಹಜವಾದ ನಿಯಮ. ಆದರೂ ಸಹ ನನ್ನನ್ನು ಒಬ್ಬಾಕೆ ಎಷ್ಟು ಇಷ್ಟ ಪಡುತ್ತಾಳೋ ಅಷ್ಟೇ ಪ್ರಮಾಣದಲ್ಲಿ ನಾನೂ ಸಹ ಆಕೆಯನ್ನು ಇಷ್ಟಪಡುತ್ತೇನೆಂಬ ಕಡ್ಡಾಯ ಸಲ್ಲದ್ದು ಹಾಗೂ ಅಸಾಧ್ಯವಿರಬಹುದು. ಅಪವಾದಾತ್ಮಕವಾಗಿ ತನ್ನ ಪ್ರೀತಿಯನ್ನು ಮರಳಿಸದವನನ್ನೂ ಒಬ್ಬಳು ಪ್ರೀತಿಸಬಹುದು. ಇದರ ಅರ್ಥ, 'ಆ ಪ್ರೀತಿ ಮರಳಿಸದವ' ಆಕೆಯನ್ನು ದ್ವೇಷಿಸುತ್ತಿದ್ದಾನೆ ಎಂದಲ್ಲ. 'ಅಪಕಾರ ಮಾಡಿದವನಿಗೆ ಉಪಕಾರಮಾಡು' ಎಂದು ಸಂತರು ಉಪದೇಶಿಸಬೇಕಾದರೆ ಅವರ ವ್ಯಕ್ತಿತ್ವದ ಎತ್ತರ ಎಂತಿರಬೇಡ? ಆ ಕಾರಣ ಯಾರೊಬ್ಬರ ವ್ಯಕ್ತಿತ್ವದ ಒಂದು ಮಾನದಂಡ ಆ ವ್ಯಕ್ತಿ ಎಷ್ಟು ಜನರನ್ನು ಪ್ರೀತಿಸಲು ಶಕ್ತ ಎಂಬುದು. ಇದು ಬಹು ಸರಳವಾದ ವಿಧಾನ. ಇಲ್ಲಿ ಒಂದು ಎಚ್ಚರಿಕೆ: ಸ್ನೇಹವೆಂದೂ ಮೋಹವಾಗಿ ಮಾರ್ಪಡಬಾರದು. ನಿಮ್ಮ ಅತ್ಯಂತ ಪ್ರೀತಿಪಾತ್ರನಾದ ಸ್ನೇಹಿತನು ಕೇಳಿದ್ದೆಲ್ಲವನ್ನೂ ನೀವು ದಾನಮಾಡುತ್ತಾ ಹೋದರೆ ನಿಮ್ಮದೆಲ್ಲದರ ಜೊತೆಗೆ ಆತನ ಗುಣವನ್ನೂ ಕಾಲಾಂತರದಲ್ಲಿ ನೀರಿನಲ್ಲಿ ತೇಲಿಸುವಿರೆಂಬುದು ನೆನಪಿರಲಿ.

ಗೆಳೆತನ ಮತ್ತು ಉದರಂಭರಣೆಗಳ ಸಂಬಂಧವನ್ನೀಗ ಪರೀಕ್ಷಿಸೋಣ. ಸ್ನೇಹ ಹೇಗೆ ಹೆಚ್ಚುತ್ತದೆ ಎಂಬುದನ್ನು ತಿಳಿಯುವುದು ಅತಿ ಮೋಜಿನದು. ಮೊದಲ ನೋಟದ ಆಕರ್ಷಣೆಯ ನಂತರ ಆಗಾಗ ಸಿಗತೊಡಗಿದ ನಿಮ್ಮ ಹೊಸ ಮಿತ್ರನ ಬಗೆಗೆ ಹೆಚ್ಚು ಹೆಚ್ಚು ವಿವರಗಳು ಲಭ್ಯವಾಗತೊಡಗಿದಂತೆ ಆತನನ್ನು ಹೇಗಾದರೂ ದೂರವಿಡಬೇಕೆಂಬ ಬಯಕೆ ನಿಮ್ಮದು. ಹೀಗೇಕೆ? ಮೊದಲ ನೋಟದಲ್ಲಿ ಆತನ ಕೆಲವು ವ್ಯಕ್ತಿತ್ವ ವೈಶಿಷ್ಟ್ಯಗಳು ನಿಮಗೆ ಹಿತವಾದವು. ನಂತರದ ದಿನಗಳಲ್ಲಿ ನಿಮಗೆ ಸೇರದಿರುವ ಬಹಳಷ್ಟು ಲಕ್ಷಣಗಳು ಆತನಲ್ಲಿ ಪ್ರಕಟಗೊಳ್ಳಲು ಪ್ರಾರಂಭಿಸಿದೊಡನೆ ಆತನ ಬಗೆಗಿನ ನಿಮ್ಮ ಸ್ನೇಹಪರತೆ ಕುಂದತೊಡಗಿತು. ನಿಮ್ಮ ಸ್ನೇಹಿತೆಯ ಬಗೆಗಿನ ನಿಮ್ಮ ಮೊದಲ ಪ್ರತಿಕ್ರಿಯೆ ಆಕೆಯ ಗೌರವರ್ಣವೋ, ಕೇಶಾಲಂಕಾರವೋ, ಆಕರ್ಷಕ ಪೋಷಾಕೋ ಕುರಿತಾದುದಾಗಿರಬಹುದು. ಶಾಶ್ವತ ಪ್ರತಿಕ್ರಿಯೆ ನಂತರ ಕಂಡುಬಂದ, ಬುದ್ಧಿ-ಹೃದಯಗಳ ಎತ್ತರವನ್ನೋ, ದೇಹಾರೋಗ್ಯವನ್ನೋ ಅವಲಂಬಿಸಿರಬಹುದು.

ಕೆಲವು ಸಂದರ್ಭಗಳು ಇದರ ವಿರುದ್ಧವೂ ಇರಬಹುದು. ವ್ಯಕ್ತಿಯೊಬ್ಬನೊಂದಿಗಿನ ಮೊದಲ ಭೇಟಿಯಲ್ಲಿ ಆತ ಪ್ರದರ್ಶಿಸಿದ ವೈಶಿಷ್ಟ್ಯಗಳು ಆತನ ಬಗೆಗಿನ ಅಪ್ರಿಯತೆಗೆ ಕಾರಣವಾಗಿ ಕ್ರಮೇಣ ಆತ ನಿಮಗೆ ಪ್ರಿಯವಾದ ಬಹಳಷ್ಟು ಗುಣಗಳನ್ನು ತೋರ್ಪಡಿಸುತ್ತಾ ನಡೆದಂತೆ ನಿಮ್ಮ ಪ್ರೀತಿಪಾತ್ರನಾಗಬಹುದು.

ಉದರಂಭರಣೆಗಾಗಿ ನಾವು ವೃತ್ತಿ-ಉದ್ಯೋಗಗಳನ್ನಾಯ್ಕೆ ಮಾಡಬೇಕಷ್ಟೇ. ಆಗ ನೆನಪಿಡಬೇಕಾದ ಕೆಲವು ಸಂಗತಿಗಳಿವೆ. ಎಲ್ಲ ವೃತ್ತಿ ಉದ್ಯೋಗಗಳಲ್ಲಿಯೂ ನಾವು ಇತರರೊಡನೆ ಹೊಂದಾಣಿಕೆ ಸ್ನೇಹಪರತೆಗಳೊಡನೆ ಸಾಗುವುದು ಅತ್ಯಾವಶ್ಯಕ. ಮೇಲೆ ವಿವರಿಸಿದ 'ಮೊದಲ ನೋಟದ ಪ್ರೇಮ-ದ್ವೇಷಗಳಿಗೆ' ಅಲ್ಲಿ ಯಾವ ಸ್ಥಾನವೂ ಇಲ್ಲ. 'ನಮ್ಮ 'ಬಾಸ್'ನನ್ನು ಮೊದಲ ಸಲ ನೋಡಿದಾಗಲೇ ನನ್ನ ಮೈಯುರಿಯಿತು' ಎಂಬುದಾಗಲೀ, 'ನನ್ನ ಸಹಾಯಕಿ ಹಾಗೂ ನಾನು ಎಷ್ಟೋ ಜನ್ಮಗಳ ಸಂಬಂಧಿಗಳು ಎಂಬ ಭಾವನೆ ಆಕೆಯನ್ನು ಮೊದಲ ಸಲ ಮಾತನಾಡಿಸಿದಾಗಲೇ ಬಂದಿತು' ಎಂಬುದಾಗಲೀ ಅತಿಶಯೋಕ್ತಿಗಳೆಂಬುದನ್ನು ಅಲಕ್ಷಿಸಲಾಗದು.

ನಿಮಗೆ ಬೇರೆಯವರೊಡನೆ ಕೂಡಲೇ ಸ್ನೇಹಪರತೆ ಒದಗುವುದಿಲ್ಲವೆಂದಿಟ್ಟುಕೊಳ್ಳಿ, ಅದಕ್ಕೆ ಸಾಕಷ್ಟು ಕಾಲವೇ ಬೇಕು ಎಂಬುದು ನಿಮ್ಮ ಅನುಭವ. ಇಂಥವರು ಪ್ರತಿದಿನ ಹೊಸಬರನ್ನೇ ಕಾಣಬೇಕಾಗಿರುವ, ಮನೆ-ಮನೆಗೆ ಹೋಗಿ ವಸ್ತುಗಳನ್ನು ಮಾರಬೇಕಾದಂಥ ನೇರ ಮಾರಾಟ ಪ್ರತಿನಿಧಿಗಳ ಸೇವೆಗಳಲ್ಲಿ ತೊಡಗದಿರುವುದು ಒಳ್ಳೆಯದು. ಒಂದೇ ಸ್ಥಳದಲ್ಲಿ ತಳವೂರಿ ನೋಡಿದ ಜನಗಳೊಡನೆಯೇ ಸಂಪರ್ಕ ಸಾಧಿಸಿ ಅವರ ಸೇವಾವಕಾಶವಿರುವ ಉದ್ಯೋಗಗಳಲ್ಲಿ ಪಾಲುಗೊಳ್ಳುವುದೊಳಿತು.

ನೀವು ಕಾರಖಾನೆಯಲ್ಲಿ ನೇಮಕಗೊಂಡಿರೆಂದು ಊಹಿಸಿ. ಮೊದಲ ದಿನವೇ ನಿಮ್ಮ ಮೇಲಾಧಿಕಾರಿಯ ಬಗೆಗೆ 'ತತ್‌ಕ್ಷಣದ ಒಲುಮೆ' ನಿಮ್ಮಲ್ಲಿ ಮೊಳಕೆಯೊಡೆಯಿತು. ಜೋಕೆ! ಒಂದೇ ವಾರದಲ್ಲಿ ನೀವು ಎರಡು ಧ್ರುವಗಳಾದೀರಿ! ಇದನ್ನೇ 'ತಾಳ್ಮೆಗೆಟ್ಟು ತಾಳೀ ಕಟ್ಟದರೆ ಶೇಷಾಯುಷ್ಯ ಪೂರ್ತಿ ಪರಿತಪಿಸುವಿ' ಎಂದೆನ್ನುವುದು. ಮಾನವ ಸಂಬಂಧಗಳ ಈ ಸೂಕ್ಷ್ಮತೆಯನ್ನರಿತಿರುವುದು ನಿಮ್ಮ ವೃತ್ತಿಯ ಆಯ್ಕೆ ಹಾಗೂ ನಂತರದ ಸಫಲತೆಗಳಿಗೆ ದಾರಿದೀಪ.

ಎಲ್ಲರೂ 'ಇವ ನಮ್ಮವ; ಇವ ನಮ್ಮವ' ಎನ್ನಬಹುದಾದ 'ಸರ್ವಾಂಗಸುಂದರನನ್ನು ನೀವು ಬಲ್ಲಿರಾ? ನೀವು ಕಂಡಿರಾ?' ಎಂಬ ಕೊನೆಯ ವಿಷಯದ ಬಗೆಗೆ ಚರ್ಚಿಸಿ ಇಂದಿನ ಪಯಣವನ್ನು

**ಮೊದಲ ನೋಟದ ಆಕರ್ಷಣೆಯ ನಂತರ ಆಗಾಗ ಸಿಗತೊಡಗಿದ ನಿಮ್ಮ ಹೊಸ ಮಿತ್ರನ ಬಗೆಗೆ ಹೆಚ್ಚು ಹೆಚ್ಚು ವಿವರಗಳು ಲಭ್ಯವಾಗತೊಡಗಿದಂತೆ ಆತನನ್ನು ಹೇಗಾದರೂ ದೂರವಿಡಬೇಕೆಂಬ ಬಯಕೆ ನಿಮ್ಮದು. ಹೀಗೇಕೆ?**

ಪೂರ್ತಿಗೊಳಿಸೋಣ.

ಮಗುವಿಗೆ 'ದೃಷ್ಟಿಬೊಟ್ಟು' ಹಚ್ಚುವುದನ್ನು ನೋಡಿರುವಿರಲ್ಲ? ಇದರ ಅರ್ಥ ಎಲ್ಲ ಮಕ್ಕಳೂ ಕುದೃಷ್ಟಿಗೆ ಈಡಾಗುವಷ್ಟು ಸುಂದರವಾಗಿರುತ್ತವೆಯೆಂದಲ್ಲ. ಹೆತ್ತ ತಾಯಿಗೆ ಹೆಗ್ಗಣವೂ ಮುದ್ದು ತಾನೆ? ಭೀಮನ ಆಕಾರ, ಕರ್ಣನ ದೇಹಲಾವಣ್ಯ, ಗಣಪತಿಯ ಪರಿಣತಿ, ಕೃಷ್ಣನ ಜಾಣ್ಮೆ ಇತ್ಯಾದಿ ಎಲ್ಲ ಸದ್ಗುಣಗಳೂ ಒಬ್ಬನಲ್ಲಿಯೇ ಮೇಳೈಸಿರಲು ಸಾಧ್ಯವೇ? ವಸ್ತುಸ್ಥಿತಿ-ಏನೆಂದರೆ ವ್ಯಕ್ತಿಗಳಲ್ಲಿ ಈ ಗುಣಗಳು ಹಂಚಿಹೋಗಿವೆ. ಒಂದೆರಡೇ ಧನಾತ್ಮಕ ಅಂಶಗಳನ್ನೊಳಗೊಂಡ ಯಾವ ವ್ಯಕ್ತಿಯೂ ಬಹಳ ಕಾಲದವರೆಗೆ ತನ್ನ ಆಕರ್ಷಣೆಯನ್ನು ಉಳಿಸಿಕೊಳ್ಳಲು ಸಾಧ್ಯವಿಲ್ಲ.

ಜಗತ್ಪ್ರಸಿದ್ಧರ ಬಾಳುವೆಗಳನ್ನಭ್ಯಸಿಸಿದರೆ ಅವರು ತಮ್ಮ ದೈಹಿಕ ಲಕ್ಷಣಗಳ ಋಣಾತ್ಮಕ ಅಂಶಗಳಿಗೆ ಪ್ರತಿಯಾಗಿ ಬೇರೊಂದು ಅನುಪಮ ಸದ್ಗುಣವನ್ನು ರೂಢಿಸಿಕೊಂಡು ಉನ್ನತ ವ್ಯಕ್ತಿತ್ವದ ಉದಾಹರಣೆಗಳಾದುದನ್ನು ಕಾಣುತ್ತೇವೆ. ಅವರ ಹಟ, ಧೈರ್ಯ, ಉತ್ಸಾಹಗಳು ಇಂಥವೇ ವೈಪರೀತ್ಯಗಳಿಂದ ಬಳಲುವವರಿಗೆ ಮಾರ್ಗದರ್ಶಕವಾಗಬೇಕು.

ಕ್ರೀಡಾಪಟು ರಾಜೀವ್ ಬಗ್ಗಾ, ಕಲಾವಿದೆ ಸುಧಾ ಚಂದ್ರನ್, ಸಮಾಜ ಸೇವಕಿ ಹೆಲೆನ್ ಕೆಲರ್ ಮುಂತಾದವರ ಜೀವನ ಮತ್ತು ಯಶಸ್ಸು ನಮಗೆ ಬೆಳಕಾಗಬೇಕು. ತಮ್ಮಲ್ಲಿಯ ಸರಿಪಡಿಸಲಾಗದ ಕೊರತೆಗಳು ಇತರರಿಗೆ ತಾವು ಅನಪೇಕ್ಷಿತರಾಗುವಂತಿವೆಯೆಂಬ ಕೊರಗನ್ನು ಹತ್ತಿಕ್ಕಿ, ನೈಜತೆಯನ್ನೆದುರಿಸುವ ಧೈರ್ಯ ಪ್ರದರ್ಶಿಸಿ, ತಮಗೆ ಸಾಧ್ಯವಿದ್ದ ರಂಗಗಳಲ್ಲಿ ಪ್ರಗತಿ ಸಾಧಿಸುವ ಮೂಲಕ ಸಾಮಾಜಿಕ ಪರಿಸರದ ಮೇಲೆ ಅಚ್ಚಳಿಯದ ಪ್ರಭಾವವನ್ನವರು ಬೀರಿದ್ದಾರೆ; ಹೊಂದಾಣಿಕೆ ಸಾಧಿಸಿದ್ದಾರೆ; ಜನಪ್ರಿಯರಾಗಿದ್ದಾರೆ.




ಸರ್ವಾಂಗ ಸುಂದರರಾಗಬೇಕಿದ್ದರೆ ದೇಹ, ಮನಸ್ಸು, ಭಾವನೆಗಳು - ಇವೆಲ್ಲವುಗಳತ್ತ ಲಕ್ಷ್ಯ ಪೂರೈಸಬೇಕು. ಏಕೆಂದರೆ ಅವು ಪರಸ್ಪರಾವಲಂಬಿಗಳು. ಇವುಗಳ ಅತ್ಯುತ್ತಮ ಪಾಕದ ಮೂಲಕ ವ್ಯಕ್ತಿ ಸಾಮಾಜಿಕ ಸಾಮರಸ್ಯ ಸಾಧಿಸುವ.

ಆದರೆ ತಾರುಣ್ಯದಲ್ಲಿ ನಮ್ಮಲ್ಲನೇಕರು ಶಾಲೆಯೆಂದರೆ ಆಟದ ಬಯಲು ಮಾತ್ರ ಎಂತಲೋ ಅಥವಾ ಪಾಠದ ಕೋಣೆ ಮಾತ್ರ ಎಂತಲೋ ಅರ್ಥೈಸಿ ಅಮೂಲ್ಯವಾದ ಸಮಯವನ್ನು ವ್ಯರ್ಥಗೊಳಿಸುತ್ತಾರೆ. ಆಟದಲ್ಲಿಯೂ ಪಾಠವಿದೆ, ಪಾಠದಲ್ಲಿಯೂ ಆಟವಿದೆ ಎಂಬುದು ಅವರ ಅರಿವಿಗೆ ತಾಕುವುದಿಲ್ಲ. ಹಾಗಾಗಿ ಅನೇಕರು ನರಸತ್ತ ಬುದ್ಧಿಜೀವಿಗಳಾಗಿ ಇಲ್ಲವೆ ಸಾಕ್ಷರ ರಾಕ್ಷಸರಾಗಿ ರೂಪುಗೊಳ್ಳುವ ಭಯವಿದೆ. ಒಂದೇ ರಂಗದಲ್ಲಿ ಮುನ್ನುಗ್ಗಿದ ಅವರು ತಮ್ಮ ಭಾವನಾತ್ಮಕ ಹಾಗೂ ಸಾಮಾಜಿಕ ಜೀವನವನ್ನು ಬಲಿಗೊಡುತ್ತಾರೆ. ಮಾನವನು ಸಂಘಜೀವಿ ಎಂಬ ಮೂಲಸತ್ಯವನ್ನು ಮರೆತ ಅವರು ಅದಕ್ಕೆ ಅವಶ್ಯಕವಾಗಿರುವ ತರಬೇತಿ ಪಡೆಯದೆ ತಮ್ಮ ಸುತ್ತಲೂ ಅಸಾಫಲ್ಯದ ಇಟ್ಟಿಗೆಗಳಿಂದ ಏಕಾಂಗಿತನದ ಗೋಡೆಕಟ್ಟಿಕೊಳ್ಳುತ್ತಾರೆ. ಸಾಮಾಜಿಕ ಹೊಂದಾಣಿಕೆಯಿರದ ಇಂಥವರ ಜೀವನ ಕನಿಕರಪಡಲು ಮಾತ್ರ ಯೋಗ್ಯ! ಆದುದರಿಂದ ತರುಣ, ತರುಣಿಯರೇ, ಸಮಯ ಮೀರುವ ಮುನ್ನ ಎಚ್ಚೆತ್ತುಕೊಳ್ಳಿ.

'ದೃಷ್ಟಿ-ಪಟ್ಟಿ' ಕಟ್ಟಿಕೊಂಡ ಕುದುರೆಗಳಂತೆ ಜೀವನ ಸವೆಯಿಸಿದ ಇಂಥ ಬುದ್ಧಿಜೀವಿಗಳಿಗೆ ಬೇರೆಯವರ ದೃಷ್ಟಿಯಲ್ಲಿ ತಾವು ವಿಚಿತ್ರ ಪ್ರಾಣಿಗಳಾಗಿ ಕಾಣುತ್ತೇವೆಂಬುದು ಗೊತ್ತು. ತಾವು ಸಮಾಜದ ಯಾವ ವರ್ಗದವರೊಡನೆಯೂ ಹೊಂದದವರೆಂಬುದರ ಅರಿವೂ ಅವರಿಗಿದೆ. ಸಮಾಜದ ಸಂಪರ್ಕ ಕಡಿದುಕೊಂಡ ಇವರಿಗೆ ತಮ್ಮ ಬೌದ್ಧಿಕ ಕಾರ್ಯಗಳಲ್ಲಿಯೇ ಹೆಚ್ಚೆಚ್ಚಾಗಿ ತೊಡಗಿಕೊಳ್ಳುವುದನಿವಾರ್ಯ. ಅವರಿಗಾದರೂ ಇದು ಆನಂದ ನೀಡುತ್ತದೆ. ತಮ್ಮ ಸೀಮಿತ ಕಾರ್ಯಕ್ಷೇತ್ರದಲ್ಲಿ ಜನರ ಕಣ್ಣು ಕೋರೈಸುವಂಥದೇನನ್ನಾದರೂ ಸಾಧಿಸಿ ತನ್ಮೂಲಕವಾದರೂ ಸಾಮಾಜಿಕ ಪ್ರೀತಿಗೆ ಪಾತ್ರರಾಗುವ ಹಂಬಲ ಇವರದು!

ವೈಚಾರಿಕ ಸಮತೋಲ ಸಾಧಿಸುವುದು, ಧನಾತ್ಮಕವಾಗಿ ವಿಚಾರಮಾಡುವುದು ಪರಿಪೂರ್ಣ ವ್ಯಕ್ತಿತ್ವಕ್ಕೆ ರಹದಾರಿಗಳೆಂದಾಯಿತು. ಭಯಕಾರಕ, ದುಃಖದಾಯಕ ಅನುಭವಗಳನ್ನೇ ಮೆಲುಕು ಹಾಕುವವರು ಜೀವನದ ಅಪೇಕ್ಷಣೀಯ ಸಂಗತಿಗಳನ್ನೂ ಮರೆತುಬಿಡುವ ಸಂಭವವಿದೆ. ಇವರು ಸೂರ್ಯಾಸ್ತದ ಬಗೆಗೆ ದೂರುವವರೇ ವಿನಾ ಆಗಸದಲ್ಲಿಯ ನಕ್ಷತ್ರಗಳ ಸೌಂದರ್ಯ ಸವಿಯುವವರಲ್ಲ! ವೃತ್ತಿ-ಸೇವೆಗಳ ಬಗೆಗಿನ ಅವರ ದೃಷ್ಟಿಕೋನ ಎಂಥದು? ಅದಕ್ಕೆ ಕಾರಣ, ಅಭಿರುಚಿ ಇದೆಯೆಂದಲ್ಲ; 'ರೋಟಿ-ಕಪಡಾ-ಮಕಾನ್'. ಆರೋಗ್ಯ ಸಂಪತ್ತನ್ನು ಕೂಡಿಹಾಕಲು ಆರೋಗ್ಯದ ನಿಯಮಗಳನ್ನು ಅವರು ಅನುಸರಿಸುವುದಿಲ್ಲ. ಅವರಿಗೆ ದೇಹಪೀಡೆಯಿಂದ ಪಾರಾಗುವ ಉಪಾಯವದು. ತಮಗೂ ಬೇರೆಯವರಿಗೂ ಸಂತೋಷ ಉಂಟಾಗಲೆಂದು ಪೋಷಾಕು ಧರಿಸುವವರಲ್ಲ; ಟೀಕೆಯಿಂದ ಬಚಾವಾಗುವುದು ಅವರ ಗುರಿ. ಸ್ವರ್ಗ ಕೂಡ ಅವರ ದೃಷ್ಟಿಯಲ್ಲಿ ನಿರಂತರ ಭೋಗಸ್ಥಳವಲ್ಲ, ಶಿಕ್ಷೆ ತಪ್ಪಿಸಿಕೊಳ್ಳುವ ಸ್ಥಳ! ಇಂಥವರ ಸಂಗ ಸಲ್ಲ.

■ಕೃಶಾಂಗ

# ಪ್ರತಿಭಾನ್ವಿತ ಅಥ್ಲೀಟ್ — ಟಿ. ವೆಂಕಟಶೇಷಯ್ಯ



ರಾಷ್ಟ್ರೀಯ, ಅಂತಾರಾಷ್ಟ್ರೀಯ ಅಥ್ಲೆಟಿಕ್ಸ್‌ಗೆ ಉತ್ತರ ಕರ್ನಾಟಕ ತನ್ನದೇ ಆದ ಕೊಡುಗೆ ನೀಡಿದೆ. ಸಾಕಷ್ಟು ಸೌಲಭ್ಯಗಳ ಕೊರತೆಯ ನಡುವೆಯೂ ಉತ್ತರ ಕರ್ನಾಟಕದ ಅಥ್ಲೀಟ್‌ಗಳು, ಅದರಲ್ಲೂ ಓಟಗಾರರು ತಮ್ಮನ್ನು ತಾವೇ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟಕ್ಕೇರಿಸಿಕೊಂಡ ಉದಾಹರಣೆಗಳಿವೆ. ಉದಯ ಕೆ.ಪ್ರಭು, ಅರ್ಜುನದೇವಯ್ಯ ಇವರು ಕೆಲವು ಖ್ಯಾತನಾಮರು. ಈ ಓಟಗಾರರ ಪರಂಪರೆ ಅಲ್ಲಿಗೇ ನಿಂತಿಲ್ಲ. ಅವರ ಮಟ್ಟಕ್ಕೇರುವ ಸತತ ಪ್ರಯತ್ನಶೀಲರನ್ನು ನಾವಿಂದೂ ಕಾಣಬಹುದು. ತೀರ ಇತ್ತೀಚಿನ 'ಉದಾಹರಣೆ ತೆಗೆದುಕೊಂಡರೆ ಬೆಳಗಾವಿಯ ರವೀಂದ್ರ ಕುರುಬಗಟ್ಟಿ, ಧಾರವಾಡದ ಬಸವರಾಜ ಇಂಗಳಗಿ, ರೇಣುಕಾ ಹೆಡೆ, ಮಹೇಶ್ವರಿ ಉದಗಟ್ಟಿ, ಆ ಹಂತಕ್ಕೇರುವ ಸರ್ವ ಪ್ರಯತ್ನ ನಡೆಸಿದ್ದಾರೆ. ಇವರ ಬೆನ್ನುಹತ್ತಿರುವ ಇನ್ನೊಬ್ಬ ಹುಡುಗ ತಲಪಲ ವೆಂಕಟಶೇಷಯ್ಯ ಎಂದರೆ ಉತ್ಪ್ರೇಕ್ಷೆಯೇನೂ ಇಲ್ಲ.

ಎಲೆಮರೆಯ ಕಾಯಿಯಂತೆ, ನೆರಳಿನಲ್ಲಿದ್ದು ಕೊಂಡೇ ಸಾಧನೆಗಳ ಮೂಲಕ ಸುದ್ದಿ ಮಾಡುತ್ತಿರುವ ಧಾರವಾಡದ ಭಾರತೀಯ ಕ್ರೀಡಾ ಪ್ರಾಧಿಕಾರದ ಕ್ರೀಡಾ ಕೇಂದ್ರದಲ್ಲಿರುವ ವೆಂಕಟಶೇಷಯ್ಯ ಮಧ್ಯಮ ಹಾಗೂ ದೂರದ ಓಟಗಳೆರಡರಲ್ಲೂ ನಿಸ್ಸೀಮ. ಈಗಾಗಲೇ ಜ್ಯೂನಿಯರ್ ಹಂತದಲ್ಲಿ ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿರುವ ಈ ಹುಡುಗ ಕ್ರಮೇಣ ಹಿರಿಯರ ವಿಭಾಗದಲ್ಲೂ ತನ್ನ ಇರುವಿಕೆ ಸಿದ್ಧಪಡಿಸಲಾರಂಭಿಸಿದ್ದಾನೆ. ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ರಾಜ್ಯಕ್ರೀಡೆಗಳ ಮುಕ್ತ ವಿಭಾಗದ 1500 ಮೀಟರ್ ಓಟದಲ್ಲಿ ಆತ ಗಳಿಸಿದ ಬೆಳ್ಳಿಯ ಪದಕ ಈ ಮಾತಿಗೊಂದು ನಿದರ್ಶನ.

ವೆಂಕಟಶೇಷಯ್ಯ ಸಾಕಷ್ಟು ಎತ್ತರದ ಆಳು. ಹಾರುತ್ತ ಹಾರುತ್ತ ಅಗಲವಾದ ಹೆಜ್ಜೆಗಳನ್ನಿಡುತ್ತ ಓಡುವ ಆತನ ಶೈಲಿಯನ್ನು ಹಲವು 'ತಜ್ಞ'ರು ಒಪ್ಪಲಿಕ್ಕಿಲ್ಲ, ನಿಜ. ಆದರೆ ಈ ಪ್ರತಿಭಾನ್ವಿತ ಹುಡುಗ ತೋರುತ್ತಿರುವ ಸತತ ಉತ್ತಮ ಸಾಧನೆ ನಿರ್ಲಕ್ಷಿಸುವಂತಹದಂತೂ ಅಲ್ಲವೇ ಅಲ್ಲ. ಸದ್ಯ ಕೋಚ್ ಎಸ್.ಎಸ್.ಅಗಡಿ ಅವರ 'ಗರಡಿ'ಯಲ್ಲಿ ಪಳಗುತ್ತಿರುವ ವೆಂಕಟಶೇಷಯ್ಯ ಬಗ್ಗೆ ಮುಂದಿನ ಕೆಲವೇ ದಿನಗಳಲ್ಲಿ ಬಹಳಷ್ಟು ಕೇಳಿ ಬರುವಂತಾದರೆ ಅಚ್ಚರಿಯಿಲ್ಲ.

ಆಂಧ್ರಪ್ರದೇಶದ ನೆಲ್ಲೂರಿನಲ್ಲಿ ಜನಿಸಿದ ವೆಂಕಟಶೇಷಯ್ಯಗೆ ಹುಟ್ಟೂರಿಗಿಂತಲೂ ಕರ್ನಾಟಕವೇ ಹತ್ತಿರವಾಯಿತು. ಇತ್ತೀಚೆಗಷ್ಟೇ ಇನ್ನಿಲ್ಲದಾದ ತಂದೆ ಟಿ.ರಮಣಯ್ಯಗೆ ರೈಲ್ವೆಯಲ್ಲಿ ಕೆಲಸ. ಕಾರಣ ವೆಂಕಟಶೇಷಯ್ಯ ಹೆಚ್ಚಿಗೆ ಓದಿದ್ದು ಹುಬ್ಬಳ್ಳಿಯಲ್ಲಿ. ಶಾಲಾದಿನಗಳಿಂದಲೇ ಓಟದ ಗೀಳು. ಕಾರಣ ಸಹಜವಾಗಿಯೇ ಅಥ್ಲೆಟಿಕ್ ಟ್ರ್ಯಾಕ್‌ನ ಆಕರ್ಷಣೆ.

ವೆಂಕಟಶೇಷಯ್ಯ ಮೊಟ್ಟ ಮೊದಲ ಸಲ ಪ್ರಮುಖ ಸ್ಪರ್ಧೆಯೊಂದರಲ್ಲಿ ಪಾಲ್ಗೊಂಡಿದ್ದು 9ನೇ ತರಗತಿಯಲ್ಲಿರುವಾಗ. ಹುಬ್ಬಳ್ಳಿಯ ರೈಲ್ವೆ ಶಾಲೆಯಲ್ಲಿ ಓದುತ್ತಿದ್ದ ಆತ 1995ರಲ್ಲಿ ಹುಬ್ಬಳ್ಳಿಯಲ್ಲೇ ನಡೆದ ಅಂತರ ವಿಭಾಗೀಯ ರೈಲ್ವೆ ಶಾಲಾ ಕ್ರೀಡಾಕೂಟದಲ್ಲಿ ಪಾಲ್ಗೊಂಡು 800, 1500 ಹಾಗೂ 3000 ಮೀಟರ್ ಓಟಗಳೆಲ್ಲದರಲ್ಲೂ ಎರಡನೇ ಸ್ಥಾನ ಸಂಪಾದಿಸಿದ. ಮರುವರ್ಷವೇ ವಿಜಯವಾಡದಲ್ಲಿ ನಡೆದ ಇದೇ ಕ್ರೀಡಾಕೂಟದಲ್ಲಿ ವೆಂಕಟ ಈ ಮೂರು ಸ್ಪರ್ಧೆಗಳಲ್ಲಿ ಮೊದಲಿಗನಾಗಿ ಸಾಧನೆಗೈದ.

10ನೇ ತರಗತಿಯಲ್ಲಿರುವಾಗಲೇ ತುಮಕೂರಿನಲ್ಲಿ ನಡೆದ ದಕ್ಷಿಣ ವಲಯ ಕಿರಿಯರ ಅಥ್ಲೆಟಿಕ್ಸ್ ಸ್ಪರ್ಧೆಗಳಲ್ಲಿ 5000 ಮೀಟರ್ ದೂರವನ್ನು 16 ನಿಮಿಷ 30 ಸೆಕೆಂಡುಗಳಲ್ಲಿ ಪೂರೈಸಿದ ಈತ ಎರಡನೇ ಸ್ಥಾನ ಪಡೆದುಕೊಂಡ.

ವೆಂಕಟಶೇಷಯ್ಯನ ನಿಜವಾದ ಪ್ರತಿಭೆ ಹೊರಹೊಮ್ಮಿದ್ದು ಆತ ಹುಬ್ಬಳ್ಳಿಯ ಜೆ.ಜೆ. ಕಾಮರ್ಸ್ ಕಾಲೇಜಿನಲ್ಲಿ ಪಿ.ಯು.ಸಿ. ಪ್ರಥಮ ವರ್ಷದಲ್ಲಿ ಓದುತ್ತಿದ್ದಾಗ. ಬೆಂಗಳೂರಿನಲ್ಲಿ ನಡೆದ ರಾಜ್ಯ ಕಿರಿಯರ ಅಥ್ಲೆಟಿಕ್ಸ್ ಸ್ಪರ್ಧೆಗಳಲ್ಲಿ 16 ನಿಮಿಷ 29 ಸೆಕೆಂಡುಗಳಲ್ಲಿ 5000 ಮೀಟರ್ ಓಟದ ಗುರಿ ತಲುಪಿ ಚಿನ್ನದ ಪದಕ ಗಿಟ್ಟಿಸಿದ ವೆಂಕಟಶೇಷಯ್ಯ ನಂತರ ಕೇರಳದ ತಿರುವನಂತಪುರದಲ್ಲಿ ನಡೆದ ದಕ್ಷಿಣ ವಲಯ ಕಿರಿಯರ ಅಥ್ಲೆಟಿಕ್ಸ್ ಕೂಟದಲ್ಲಿ ಭರ್ಜರಿಯಾಗಿ ಓಡಿ ಕೇವಲ 15 ನಿಮಿಷ 45 ಸೆಕೆಂಡುಗಳಲ್ಲಿ ಹೊಸ ಕೂಟ ದಾಖಲೆ ಸ್ಥಾಪಿಸಿದ ಹಿರಿಮೆಗೆ ಪಾತ್ರನಾದ. ಮುಂದೆ ಕಲಕತ್ತಾದಲ್ಲಿ ನಡೆದ ಕಿರಿಯ ಅಖಿಲ ಭಾರತ ಅಂತರ ವಲಯ ಅಥ್ಲೆಟಿಕ್ಸ್ ಕೂಟದ 5000 ಮೀಟರ್ ಓಟದಲ್ಲಿಯೂ ಸಹ ವೆಂಕಟಶೇಷಯ್ಯ 15 ನಿಮಿಷ 45 ಸೆಕೆಂಡುಗಳ ಸಮಯವನ್ನೇ ದಾಖಲು ಮಾಡಿದರೂ ಸಹ ಎರಡನೇ ಸ್ಥಾನದಿಂದ ತೃಪ್ತಿಪಟ್ಟುಕೊಳ್ಳಬೇಕಾಯಿತು. ಆದರೆ ಈ ಸಾಧನೆಯೂ ಕಡಿಮೆಯದೇನಲ್ಲ!

ಜೆ.ಜೆ.ಕಾಮರ್ಸ್ ಕಾಲೇಜಿನಲ್ಲಿರುವಾಗಲೇ ಧಾರವಾಡದಲ್ಲಿ ಕಳೆದ ವರ್ಷ ನಡೆದ ಕರ್ನಾಟಕ ವಿಶ್ವವಿದ್ಯಾಲಯ ಅಂತರ ಕಾಲೇಜು ಅಥ್ಲೆಟಿಕ್ ಕೂಟದಲ್ಲಿ ಪಾಲ್ಗೊಂಡ ಈ ಪ್ರತಿಭಾನ್ವಿತ ಓಟಗಾರ 10,000 ಮೀಟರ್ ಓಟದಲ್ಲಿ 33 ನಿಮಿಷ 29 ಸೆಕೆಂಡುಗಳ ಸಮಯದೊಂದಿಗೆ ಚಿನ್ನದ ಪದಕ ಬಾಚಿಕೊಂಡಿದ್ದಲ್ಲದೇ, 1,500 ಮೀಟರ್ ಓಟದಲ್ಲಿ (4 ನಿಮಿಷ 14 ಸೆಕೆಂಡು) ರಜತ ಹಾಗೂ 5,000 ಮೀಟರ್ ಓಟದಲ್ಲಿ (16 ನಿಮಿಷ 06 ಸೆಕೆಂಡು) ಕಂಚಿನ ಪದಕಗಳನ್ನು ಗಿಟ್ಟಿಸಿಕೊಂಡ.

ಈ ವರ್ಷ ಹುಬ್ಬಳ್ಳಿಯಲ್ಲಿ ನಡೆದ ಹುಬ್ಬಳ್ಳಿ ಧಾರವಾಡ ಮಹಾನಗರಸಭೆಯ ವಾರ್ಷಿಕ ಕ್ರೀಡಾಕೂಟದಲ್ಲಿ ವೆಂಕಟಶೇಷಯ್ಯಗೆ ವೈಯಕ್ತಿಕ ಚಾಂಪಿಯನ್‌ಪಟ್ಟ. ಮುಕ್ತ ವಿಭಾಗದಲ್ಲಿ ಆತ 800 ಮೀಟರ್ (2 ನಿಮಿಷ 05 ಸೆಕೆಂಡು), 1500 ಮೀಟರ್ (4 ನಿಮಿಷ 14 ಸೆಕೆಂಡು) ಹಾಗೂ 5000 ಮೀಟರ್ (16 ನಿಮಿಷ 06 ಸೆಕೆಂಡು) ಓಟದ ಸ್ಪರ್ಧೆಗಳೆಲ್ಲದರಲ್ಲೂ ಪೈಪೋಟಿ ಎದುರಿಸದೇ

ಚಿನ್ನದ ಪದಕ ಬಾಚಿಕೊಂಡು ಏಕಸ್ವಾಮ್ಯ ಮೆರೆದ.

ನಂತರ ಬೆಂಗಳೂರಿನಲ್ಲಿ ನಡೆದ ರಾಜ್ಯ ಕಿರಿಯರ ಅಥ್ಲೆಟಿಕ್ಸ್ ಕೂಟದಲ್ಲಿ ವೆಂಕಟಶೇಷಯ್ಯ ಎರಡು ಬೆಳ್ಳಿಯ ಪದಕ ಗಿಟ್ಟಿಸಿದ. 5000 ಮೀಟರ್ ಓಟವನ್ನು 16 ನಿಮಿಷ 29 ಸೆಕೆಂಡುಗಳಲ್ಲಿ ಪೂರೈಸಿದ ಆತ 10,000 ಓಟವನ್ನು 34 ನಿಮಿಷ 01 ಸೆಕೆಂಡುಗಳ ಸಮಯದಲ್ಲಿ ಓಡಿದ.

ಪುತ್ತೂರಿನಲ್ಲಿ ನಡೆದ 22 ವರ್ಷಕ್ಕಿಂತ ಕಿರಿಯರ ಅಥ್ಲೆಟಿಕ್ಸ್‌ನಲ್ಲಿ ವೆಂಕಟಶೇಷಯ್ಯ 5,000 ಮೀಟರ್ ದೂರವನ್ನು ಕೇವಲ 15 ನಿಮಿಷ 44 ಸೆಕೆಂಡುಗಳಲ್ಲಿ ಪೂರೈಸಿದರೂ ತೃತೀಯ ಸ್ಥಾನದಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಯಿತು. 10,000 ಮೀಟರ್ ಓಟವನ್ನು 34 ನಿಮಿಷ 02 ಸೆಕೆಂಡುಗಳಲ್ಲಿ ಪೂರೈಸಿ ಮತ್ತೊಂದು ಕಂಚಿನ ಪದಕ ಗೆದ್ದುಕೊಂಡ.

ವೆಂಕಟಶೇಷಯ್ಯ ಗುಡ್ಡಗಾಡು ಅಥವಾ ರಸ್ತೆ ಓಟ (ಕ್ರಾಸ್‌ಕಂಟ್ರಿ) ಸ್ಪರ್ಧೆಗಳಲ್ಲಿ ಪಾಲ್ಗೊಂಡು ಬಹುಮಾನ ಗಿಟ್ಟಿಸಿದ್ದೂ ಇಲ್ಲದಿಲ್ಲ. ಕಳೆದ ವರ್ಷ ಹಾಗೂ ಈ ವರ್ಷ ಹುಬ್ಬಳ್ಳಿಯಲ್ಲಿ ನಡೆದ ಈ ಸ್ಪರ್ಧೆಯ 12 ಕಿ.ಮೀ ಓಟದಲ್ಲಿ ಮೊದಲ ಸ್ಥಾನ ಬಿಟ್ಟುಕೊಡದ ಈತ, ಇದೇ ವರ್ಷ ದಾವಣಗೆರೆಯಲ್ಲಿ ನಡೆದ 8 ಕಿ.ಮೀಗಳ ರಾಜ್ಯ ಮಟ್ಟದ ರಸ್ತೆ ಓಟ ಸ್ಪರ್ಧೆಯಲ್ಲಿ ನಾಲ್ಕನೆಯವನಾದ.

ಸದ್ಯ ಧಾರವಾಡದ ಭಾರತೀಯ ಕ್ರೀಡಾ ಪ್ರಾಧಿಕಾರದ (ಸಾಯ್) ಕ್ರೀಡಾ ಹಾಸ್ಟೆಲ್‌ನಲ್ಲಿ ತರಬೇತಿ ಪಡೆಯುತ್ತ, ಕೆ.ಇ.ಬೋರ್ಡ್ಸ್ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯದಲ್ಲಿ ದ್ವಿತೀಯ ವರ್ಷದ ವಾಣಿಜ್ಯಶಾಸ್ತ್ರ ಓದುತ್ತಿರುವ ವೆಂಕಟಶೇಷಯ್ಯ ಇತ್ತೀಚೆಗಷ್ಟೇ ಬೆಂಗಳೂರಿನಲ್ಲಿ ನಡೆದ ರಾಜ್ಯ ಕ್ರೀಡೆಗಳಲ್ಲಿ ಪುರುಷರ ವಿಭಾಗದ 1500 ಮೀಟರ್ ಓಟದ ಸ್ಪರ್ಧೆಯಲ್ಲಿ ಬೆಳ್ಳಿಯ ಪದಕ ಗಿಟ್ಟಿಸಿಕೊಂಡು ತಮ್ಮ ಸಾಮರ್ಥ್ಯಕ್ಕಿನ್ನೊಂದು ಸಾಕ್ಷಿ ನೀಡಿದರು.

ಆದರೆ ಅವರ ಸಾಧನೆಯ ಮಾರ್ಗದಲ್ಲಿ ವಿಧಿ ಇಣಿಕದೇ ಇರಲಿಲ್ಲ. ರೈಲ್ವೆ ವರ್ಕ್‌ಶಾಪ್‌ನಲ್ಲಿ ಕೆಲಸ ಮಾಡುತ್ತಿದ್ದ ತಂದೆ ಟಿ.ರಮಣಯ್ಯ ಅವರನ್ನು ಕಳೆದುಕೊಂಡ ವೆಂಕಟಶೇಷಯ್ಯ ಬೆಂಗಳೂರಿನಲ್ಲಿ ನಡೆದ ರಾಜ್ಯ ಜ್ಯೂನಿಯರ್ ಅಥ್ಲೆಟಿಕ್ಸ್‌ನಲ್ಲಾಗಲೀ ಅಥವಾ ದಸರಾ ಕ್ರೀಡಾಕೂಟದಲ್ಲಾಗಲೀ ಪಾಲ್ಗೊಳ್ಳಲು ಸಾಧ್ಯವಾಗಲಿಲ್ಲ. ಆದರೆ ವೆಂಕಟಶೇಷಯ್ಯ ಸಾಧನೆಯ ಹಾದಿಯಿಂದ ವಿಚಲಿತನಾಗಿಲ್ಲ. ಕ್ರೀಡಾ ಹಾಸ್ಟೆಲ್‌ಗೆ ಮರಳಿರುವ ಈತ ತರಬೇತುದಾರ ಎಸ್.ಎಸ್.ಅಗಡಿಯವರ ಮಾರ್ಗದರ್ಶನದಲ್ಲಿ ಮತ್ತೆ ತೀವ್ರ ಅಭ್ಯಾಸದಲ್ಲಿ ನಿರತನಾಗಿದ್ದಾನೆ, ಕಳೆದುಕೊಂಡ ಅವಕಾಶಗಳಿಗೆ ಪರಿಹಾರ ದೊರಕಿಸಿಕೊಳ್ಳುವ ಉದ್ದೇಶದಿಂದ. ಮುಂಬರುವ ರಾಜ್ಯ ಜ್ಯೂನಿಯರ್ ಅಥ್ಲೆಟಿಕ್ಸ್ ತಂಡದ ಆಯ್ಕೆ ಪರೀಕ್ಷೆಯ ಮೇಲೆ ಈಗ ವೆಂಕಟಶೇಷಯ್ಯ ಕಣ್ಣಿಟ್ಟಿದ್ದಾನೆ. ಅದಮ್ಯ ಛಲ, ಅಪರಿಮಿತ ಪ್ರತಿಭೆಯ ಈ ಹುಡುಗನಿಗೆ ಮುಂದಿನ ಸಾಧನೆಯ ಹಾದಿ ತೊಂದರೆದಾಯಕವಾಗಬಾರದು. ರಾಷ್ಟ್ರವನ್ನು ಪ್ರತಿನಿಧಿಸುವ, ಪ್ರತಿನಿಧಿಸಿ ಅಂತಾರಾಷ್ಟ್ರೀಯ ಮಟ್ಟದಲ್ಲೂ ಗೌರವ ಸಂಪಾದಿಸುವ ಆತನ ಕನಸು ಕೇವಲ ಕನಸಾಗಿಯೇ ಉಳಿಯಬಾರದು.

■ **ವಸಂತ ಮುರ್ಡೇಶ್ವರ**

# ಕ್ರೀಡೆ ಬಗ್ಗೆ ತಿಳಿಯಿರಿ

■ **ಶಂಕರಗೌಡ ವೈ.ಪಾಟೀಲ**

1. ರಶಿಯಾದ ಫುಟ್‌ಬಾಲ್ ಆಟಗಾರರಾದ ಬೆಸ್ಲೆರಿ ಕೋರವರು ಬೇರೊಂದು ಆಟದಲ್ಲಿಯೂ ಪರಿಣಿತರು ಯಾವುದು ಆ ಆಟ?
2. ಟೆಸ್ಟ್ ಕ್ರಿಕೆಟ್‌ನಲ್ಲಿ ಪ್ರಾರಂಭ ಆಟಗಾರರಾಗಿ ಬಂದು ಕೊನೆಯ ಆಟಗಾರನಾಗಿ ಮರಳಿದ ಪ್ರಥಮ ಆಟಗಾರ ಯಾರು?
3. ಒಂದೇ ಟೆಸ್ಟ್‌ನಲ್ಲಿ ಆದರೆ ವಿರೋಧಿ ತಂಡಗಳಲ್ಲಿ ಆಡಿದ ಸಹೋದರರು ಯಾರು?
4. 1990-91ರಲ್ಲಿ ನಡೆದ ಬೆನ್ಸನ್ ಆ್ಯಂಡ್ ಹೆಡ್ಜಸ್ ಪಂದ್ಯಾವಳಿಯಲ್ಲಿ ಹೆಚ್ಚು ಶತಕಗಳನ್ನು ಗಳಿಸಿದವರು ಯಾರು?
5. 'ಮಾಸ್ಟರ್ ಬ್ಲಾಸ್ಟರ್' ಎಂಬ ಬಿರುದನ್ನು ಹೊಂದಿದ ಕ್ರಿಕೆಟಿಗರಾರು?
6. 'ಮ್ಯಾನ್ ಆಫ್ ದಿ ಮ್ಯಾಚ್' ಎನಿಸಿದ ಭಾರತದ ಪ್ರಥಮ ಕ್ರಿಕೆಟಿಗರು ಯಾರು?
7. 1961ರಲ್ಲಿ ಮಹಿಳೆಯರ ಸಿಂಗಲ್ಸ್ ವಿಂಬಲ್ಡನ್ ಟೆನ್ನಿಸ್ ಪ್ರಶಸ್ತಿ ಪಡೆದವರಾರು?
8. 1954ರಲ್ಲಿ ಆಫ್ರಿಕಾದವರೊಬ್ಬರು ವಿಂಬಲ್ಡನ್ ಟೆನ್ನಿಸ್ ಪಂದ್ಯಾವಳಿಯ ಪುರುಷರ ಸಿಂಗಲ್ಸ್ ಪ್ರಶಸ್ತಿಯನ್ನು ಪಡೆದರು. ಆ ವ್ಯಕ್ತಿ ಯಾರು?
9. ಹಾರ್ಮ್ಸ್‌ವರ್ತ್ ಟ್ರೋಫಿಯು ಯಾವ ಕ್ರೀಡೆಗೆ ಸಂಬಂಧಿಸಿದ್ದು?
10. ರಾಕ್ಕೋ ಮಾರ್ಚೆಗೈನೋ ಖ್ಯಾತರಾಗಿದ್ದು ಯಾವ ಕ್ರೀಡೆಯಲ್ಲಿ?
11. ಯಾವ ಮೂರು ಕ್ರೀಡೆಗಳು ಸೇರಿ ಟ್ರಯಥ್ಲಾನ್ ಆಗಿದೆ?
12. ನಾರ್ಡಿಕ್ ಸ್ಕೈಯಿಂಗ್‌ನಲ್ಲಿ ನಡೆಯುವ ವಿವಿಧ ಸ್ಪರ್ಧೆಗಳು ಯಾವುವು?
13. ಪುರುಷರ ಸಿಂಗಲ್ಸ್ ಪ್ರಶಸ್ತಿಯನ್ನು ಮೊಟ್ಟ ಮೊದಲ ಬಾರಿಗೆ ಪಡೆದ ವ್ಯಕ್ತಿ ಯಾರು?
14. ಪ್ರತೀ ವರ್ಷ ವಿಂಬಲ್ಡನ್ ಪಂದ್ಯಾವಳಿ ಆರಂಭವಾಗುವ ವಾರ ಯಾವುದು?
15. ಪ್ರಥಮ ಅಧಿಕೃತ ಟೆನ್ನಿಸ್ ಪಂದ್ಯ ನಡೆದಿದ್ದು ಯಾವಾಗ?
16. 'ಆಧುನಿಕ ಟೆನ್ನಿಸ್‌ನ ಜನಕ' ಎಂದು ಯಾರನ್ನು ಕರೆಯುತ್ತಾರೆ?
17. ಒಂದೇ ಒಂದು ಕೈಯನ್ನು ಹೊಂದಿದ್ದ, ಉರುಗ್ವೆಯ ಖ್ಯಾತ ಫುಟ್‌ಬಾಲ್ ಆಟಗಾರ ಯಾರು?
18. ವೇಟೆಯವರು ಸಂತೋಷ್ ಫುಟ್‌ಬಾಲ್ ತಂಡವನ್ನು ಸೇರಿಕೊಂಡಿದ್ದು ಯಾವ ವರ್ಷ?
19. ಫುಟ್‌ಬಾಲ್ ಆಟದಲ್ಲಿ ಕೆಲವೊಮ್ಮೆ 'ಸ್ಟ್ರೈಕರ್ಸ್' ಎಂದು ಕರೆಸಿಕೊಳ್ಳುವ ಆಟಗಾರರು ಯಾರು?
20. ಫುಟ್‌ಬಾಲ್ ಮೈದಾನದಲ್ಲಿ ಗಡಿ ರೇಖೆಯನ್ನು ಏನೆಂದು ಕರೆಯುತ್ತಾರೆ?

## ಉತ್ತರಗಳು

1. ಐಸ್ ಹಾಕಿ ಆಟ, 2. ಆಸ್ಟ್ರೇಲಿಯಾದ ವಿಕ್ಟರ್ ಟ್ರಂಪರ್, 3. ಅಲೆಕ್ ಜಾರ್ಜ್ ಹಾರ್ನೆ (ಇಂಗ್ಲೆಂಡ್); ಫ್ರಾಂಕ್ ಹಾರ್ನೆ (ದಕ್ಷಿಣ ಆಫ್ರಿಕಾ), 4. ಡೆಸ್ಮಂಡ್ ಹೇಮ್ಸ್ (4 ಶತಕ), 5. ವೆಸ್ಟ್ ಇಂಡೀಸ್‌ನ ವಿವಿಯನ್ ರಿಚರ್ಡ್ಸ್, 6. ಫರೂಕ್ ಇಂಜಿನಿಯರ್ (1975), 7. ಗ್ರೇಟ್ ಬ್ರಿಟನ್ನಿನ ಏಂಜೆಲ್ ಮಾರ್ಟಿಮರ್, 8. ಜಾರೋಸ್ಲಾಮ್ ಪ್ರಾಬ್ನಿ, 9. ಪವರ್‌ಬೋಟ್ ರೇಸಿಂಗ್, 10. ಹೆವಿವೇಟ್ ಬಾಕ್ಸಿಂಗ್ ಸ್ಪರ್ಧೆಯಲ್ಲಿ, 11. ದೂರದ ಈಜು, ಸೈಕ್ಲಿಂಗ್ ಮತ್ತು ಓಟ, 12. ಕ್ರಾಸ್ ಕಂಟ್ರಿ ಸ್ಕೈಯಿಂಗ್ ಮತ್ತು ಸ್ಕೈಜಂಪಿಂಗ್, 13. ಸ್ಪೆನ್ಸರ್ ಗೋರ್, 14. ಸೋಮವಾರ, 15. 1877ರಲ್ಲಿ, 16. ಇಂಗ್ಲೆಂಡ್‌ನ ಮೇಜರ್ ವಾಲ್ಟರ್ ಕ್ಯಾಪ್ಟನ್ ವಿಂಗ್‌ಫೀಲ್ಡ್, 17. ಹೆಕ್ಟರ್ ಕ್ಯಾಸ್ಟ್ರೋ, 18. 1956, 19. ಫಾರ್‌ವರ್ಡ್ ಆಟಗಾರರು, 20. ಟಚ್ ಲೈನ್ಸ್,

# ಜಗಮೆಚ್ಚಿದ ಕ್ರಿಕೆಟಿಗ

## ಸಚಿನ್ ತೆಂಡೂಲ್ಕರ್

**ಇನ್ನೂ ದಶಕಗಳ ಕಾಲ ಆಡುವ ಕ್ಷಮತೆ ಸಚಿನ್‌ಗಿದೆ. ಅವರ ಹಿಂದೆ ಅನೇಕ ಬೆಂಬಲಿಗರಿದ್ದಾರೆ, ಮುಂದೆ ಗುರಿಗಳಿವೆ.**



**ಪ್ರ**ಸ್ತುತ ಕ್ರಿಕೆಟ್ ವಿಶ್ವದ ನಭೋಮಂಡಲದಲ್ಲಿ ಅಸಂಖ್ಯಾತ ತಾರೆಗಳಿವೆ. ಎಲ್ಲವೂ ಸದಾ ಕಾಲ ಮಿನುಗುವುದಿಲ್ಲ. ಆಗೊಮ್ಮೆ ಈಗೊಮ್ಮೆ ಪ್ರಜ್ವಲಿಸಿ ನಂದಿಹೋಗುವ ತಾರೆಗಳೇ ಅನೇಕ. ಈ ತಾರಾಮಂಡಲದಲ್ಲಿ ಸದಾ ಮಿನುಗುತ್ತಿರುವ ನಕ್ಷತ್ರವೇ ಭಾರತದ ಸಚಿನ್ ತೆಂಡೂಲ್ಕರ್.

ಸಚಿನ್‌ರ ಬಗ್ಗೆ ಬರೆದಷ್ಟೂ ಸಾಲದು. ಅವರ ಹೆಸರು ಕೇಳದವರಿಲ್ಲ, ಅವರ ಆಟ ನೋಡದವರಿಲ್ಲ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಸಚಿನ್ ಪ್ರತಿಯೋರ್ವ ಕ್ರಿಕೆಟ್ ಪ್ರೇಮಿಯ ಆರಾಧ್ಯ ದೈವ. ಹೌದು, ಸಚಿನ್‌ರ ಆಟ ಅಂತದ್ದು. ಅವರ ಅಭೂತಪೂರ್ವ ಇನ್ನಿಂಗ್ಸ್‌ಗಳು ಅಭಿಮಾನಿಗಳ ಮನದಲ್ಲಿ ಇನ್ನೂ ಹಚ್ಚಹಸಿರಾಗಿವೆ.

ಕಳೆದ ಸೆಪ್ಟೆಂಬರ್ 26ರಂದು ಬುಲವಾಯೋದಲ್ಲಿ ಜಿಂಬಾಬ್ವೆ ವಿರುದ್ಧದ ಒಂದು ದಿನದ ಅಂತರಾಷ್ಟ್ರೀಯ ಪಂದ್ಯದಲ್ಲಿ ಆಕರ್ಷಕ ಶತಕ ಹೊಡೆದಾಗ ದಾಖಲೆಗಳ ಪುಟದಲ್ಲಿ ಸಚಿನ್‌ರ ಹೆಸರು ಅಗ್ರಪಂಕ್ತಿಯಲ್ಲಿ ರಾರಾಜಿಸಿತ್ತು. ವೆಸ್ಟ್‌ಇಂಡೀಸ್ ತಂಡದ ಡೆಸ್ಮಂಡ್ ಹೇಯ್ನ್ಸ್‌ರ ಹೆಸರಲ್ಲಿದ್ದ 17 ಶತಕಗಳ ದಾಖಲೆಯನ್ನು ಮುರಿದು ತನ್ನ ದಾಖಲೆಯನ್ನು ಸಚಿನ್ ನಿರ್ಮಿಸಿದಾಗ ಭಾರತದ ಕ್ರಿಕೆಟ್‌ಗೊಂದು ಗರಿ ಮೂಡಿತು. ಸುಮಾರು ದಶಕ ಕಾಲ ಆಡಿದ ಸಚಿನ್ ಅವರಲ್ಲೊಂದು ಸಾರ್ಥಕತೆ ಮೊಳೆಯಿತು.

1989ರಲ್ಲಿ ಅಂತರಾಷ್ಟ್ರೀಯ ಕ್ರಿಕೆಟ್‌ಗೆ ಸಚಿನ್ ಅಡಿಯಿಟ್ಟಾಗ ಅವರ ಯಶಸ್ಸಿನ ಬಗ್ಗೆ ಅನೇಕರಿಗೆ ಬಲವಾದ ನಂಬಿಕೆಗಳಿದ್ದವು. ಹುಟ್ಟು ಪ್ರತಿಭಾನ್ವಿತರಾಗಿದ್ದ ಸಚಿನ್‌ಗೆ ಹೆಸರಾಂತ ಆಟಗಾರನಾಗುವ ಎಲ್ಲ ಲಕ್ಷಣಗಳೂ ಇದ್ದವು. ಖ್ಯಾತನಾಮ ಆಟಗಾರರನ್ನು ಹಿಂದೆ ಹಾಕಿ ಭಾರತದ ಕ್ರಿಕೆಟ್ ರಂಗದಲ್ಲಿ ಸಚಿನ್ ಸಾಧಿಸಿದ್ದು ಅಪಾರ ಹಾಗೂ ಅವರ್ಣನೀಯ.

ಜಗತ್ತಿನ ಪ್ರಖ್ಯಾತ ಬೌಲರ್‌ಗಳೆಂದು ಹಣೆಪಟ್ಟಿ ಅಂಟಿಸಿಕೊಂಡವರೆಲ್ಲ ಸಚಿನ್‌ರ ಬ್ಯಾಟ್‌ನ ರುಚಿ ಕಂಡವರೇ. ಭಾರತದ ವಿರುದ್ಧ ಪಂದ್ಯ ಆಡುವಾಗ ಸಚಿನ್ ಬ್ಯಾಟ್ ಹಿಡಿದು ನಿಂತದ್ದನ್ನು ಕಂಡರೇ ಕೆಲವರಿಗೆ ಸಂಕಟ ಪ್ರಾರಂಭ. ಸಚಿನ್‌ರಿಗೆ ಸವಾಲಾಗಿ ನಿಲ್ಲುವೆನೆಂದು ಮುಂದೆ ಬಂದ ಯಾವ ಬೌಲರ್‌ನೂ ಜಯಶಾಲಿಯಾಗಿಲ್ಲ. ವಾಸಿಂ ಅಕ್ರಂ, ವಖಾರ್ ಯೂನಸ್, ಡೊನಾಲ್ಡ್, ಮೆಕ್‌ಗ್ರಾಥ್, ಶೇನ್‌ವಾರ್ನ್ ಹೀಗೆ ಎಲ್ಲರೂ ಸಚಿನ್‌ರಿಂದ ತೀವ್ರ ಶಿಕ್ಷೆಗೊಳಗಾದವರೆ. ಕಳೆದ ಮಾರ್ಚ್‌ನಲ್ಲಿ ಆಸ್ಟ್ರೇಲಿಯಾದ ಶೇನ್‌ವಾರ್ನ್‌ರ ಸ್ಪಿನ್ ಚಮತ್ಕಾರ ಸಚಿನ್‌ರನ್ನು ಕಂಗೆಡಿಸಬಹುದೆಂದು ನಂಬಿದ್ದ ಆಸೀಸ್‌ರಿಗೆ ಊಹಿಸಲಾಗದ ದಂಡನೆಯಾಯಿತು. ಸ್ವತಃ ಶೇನ್‌ವಾರ್ನ್ ಕೂಡ ಇನ್ನೂ ಆ ಭೀತಿಯಿಂದ ಹೊರಬಂದಿಲ್ಲ.

ಕಿರಿಯ ವಯಸ್ಸಿನಲ್ಲೇ ತಂಡದ ನಾಯಕನಾಗಿ ಸಚಿನ್ ಹಿನ್ನಡೆ ಕಂಡರು. ಸತತ ಸೋಲುಗಳು ಭಾರತವನ್ನು ಬಾಧಿಸತೊಡಗಿದವು. ಸಚಿನ್ ಕೂಡ ತನ್ನ ಬ್ಯಾಟಿಂಗ್ ಸಾಮರ್ಥ್ಯದಲ್ಲಿ ಹಿಂದೆ ಬಿದ್ದ ಕಾರಣ ಭಾರತ ಹೀನಾಯ ಪರಿಸ್ಥಿತಿ ತಲುಪಿತ್ತು. ನಾಯಕತ್ವದ ವಿಮುಖತೆಯ ನಂತರ ಸಚಿನ್‌ರ ಬ್ಯಾಟಿಂಗ್ ಮತ್ತೆ ತೀವ್ರ ಚಾಲನೆಯನ್ನು ಕಂಡಿತು.

ಜಿಂಬಾಬ್ವೆ ಪ್ರವಾಸದ ವೇಳೆ ಅಂತಿಮ ಏಕದಿನದ ಪಂದ್ಯದ ಮೂಲಕ 200 ಪಂದ್ಯವನ್ನಾಡಿದ ಹೆಗ್ಗಳಿಕೆ ಸಚಿನ್‌ರದಾಯಿತು. ಇಂದಿನ ಈ 'ಡೊಮೆಸ್ಟಿಕ್ ಕ್ರಿಕೆಟ್'ಗೆ ಸಚಿನ್‌ರಂತಹ ಆಟಗಾರರ ಅಗತ್ಯ ಬಹಳಷ್ಟಿದೆ. ಆಕ್ರಮಣಶೀಲ ಪ್ರವೃತ್ತಿ ಯಾವ ಬ್ಯಾಟುಗಾರನಿಗೂ ಅನಿವಾರ್ಯವಾಗಿದೆ. ದಿನವಿಡೀ ಆಡಿ ತಾಳ್ಮೆಯಿಂದಲೇ ರನ್ ಸೇರಿಸುವ ದಿನಗಳು ಮಾಯವಾಗಿವೆ. ಇದಕ್ಕಾಗಿಯೇ ಜನ ಸಚಿನ್‌ರ ಬ್ಯಾಟಿಂಗನ್ನು ಸದಾ ನೋಡಲು ಹಾತೊರೆಯುವುದು. ಕ್ರೀಸಿನಲ್ಲಿರುವಷ್ಟು ಕಾಲ ಚೆಂಡನ್ನು ಮೈದಾನದ ಮೂಲೆ ಮೂಲೆಗೆ ತಳ್ಳಿ, ಬ್ಯಾಟ್ ಇರುವುದೇ ಚೆಂಡನ್ನು ದಂಡಿಸಲಿಕ್ಕಾಗಿ ಎಂಬ ಮೂಲತಂತ್ರ ಸಚಿನ್‌ರದು.

ಇನ್ನೂ ಬಹಳ ಕಾಲ ಆಡುವ ಕ್ಷಮತೆ ಸಚಿನ್‌ಗಿದೆ. ಅವರ ಹಿಂದೆ ಅನೇಕ ಬೆಂಬಲಿಗರಿದ್ದಾರೆ, ಮುಂದೆ ಗುರಿಗಳಿವೆ. ಕ್ರಿಕೆಟ್ ಸಾಮ್ರಾಜ್ಯವನ್ನು ಧೀಮಂತವಾಗಿ ಆಳಿ, ಅನೇಕ ದಾಖಲೆಗಳನ್ನು ಅಳಿಸುವ ನಂಬಿಕೆಗಳಿವೆ. ಅಲ್ಲದೆ ಭಾರತೀಯ ಕ್ರಿಕೆಟ್‌ಗೂ ಜೀವಾಳವಾಗಿಯೇ ಇರಬೇಕಾಗಿದೆ.

**■ ಗರ್ತಿಕೆರೆ ಎ.ಪ್ರಕಾಶ್**

# ಪದಬಂಧ

## ಪದ ಬಂಧ 10



### ಪದಬಂಧ 9 ರ ಸರಿಯುತ್ತರ

***ಎಡದಿಂದ ಬಲಕ್ಕೆ:***

೧. ಅಮಾಯಕ ೪. ಕರಪತ್ರ ೬. ರವಿ, ೮. ಉರಿ ೯. ತ್ರಿರಾ ೧೦. ಸಮರ ೧೨. ಅಶ್ವ ೧೫. ವಿಧಾನಸೌಧ ೧೮. ಯಜ್ಞ ೧೯. ಅರಸ ೨೧. ಹಾರ ೨೨. ಮರ ೨೩. ಮುತ್ತು ೨೫. ಮಕರಂದ ೨೬. ಹಗರಣ

***ಮೇಲಿನಿಂದ ಕೆಳಕ್ಕೆ :***

೨. ಮಾಸ ಪತ್ರಿಕೆ ೩. ಕರ ೪. ಕರಿ ೫. ಪರಮೇಶ್ವರ ೭. ವಿರಸ ೮. ಉದರ ೧೧. ಮಹಾನಗರ ೧೩. ಕವಿಕೆ ೧೪. ಅಂಧರು ೧೬. ನಯವಂಚಕ ೧೭. ಕ್ಷೀರ ಸಾಗರ ೧೯. ಅಸುರ ೨೦. ಸಪ್ತಮ ೨೨. ಮದ ೨೪. ತ್ತುಹ.

***ಎಡದಿಂದ ಬಲಕ್ಕೆ***

೧. ಮುನಿಗಳು ತಪಸ್ಸನ್ನಾಚರಿಸಲು ನಿರ್ಮಿಸಿದ ತೋಟ ............ (೪)
೪. ಪ್ರೇಮಿಗಳಿಗೆ ಪತ್ರ ತಂದು ಮುಟ್ಟಿಸಿದ ಮುದ್ದಿನಹಕ್ಕಿ ............ (೪)
೬. ಜಾಯಮಾನದಲ್ಲಿ ಒಮ್ಮೆ ಗಳಿಸಿದ ಯಶ ತಿರುಗಿದೆ.............. (೨)
೮. ಸಕಲರಿಗೂ ನಡೆದಾಡಲು ಬೇಕಾದ ಅವಶ್ಯವಾದ ಅಂಗ.......... (೨)
೯. ಮಾಯೆಗೂ ಇರುವ ಕರುಣೆ................................ (೨)
೧೦. ನರಿಯೂ ಬಾರಿಸಿದ ದೊಡ್ಡದಾದ ಡೋಲು..................... (೩)
೧೨. ವಿವಾದದ ನಡುವೆ ಬಂದ ಸಮಾಚಾರ ತಿರುಗಿದೆ ................ (೨)
೧೫. ಮಾರಿಕಾಳಿಯ ಒಂಬತ್ತು ದಿನದ ಪೂಜೆಯಲ್ಲಿ ಮುಕ್ತಾಯವಾದ ದೊಡ್ಡಹಬ್ಬ................................................ (೫)
೧೮. ಆಹಾಕಾರವೆದ್ದಾಗಲೂ ಕೊರಳಿಗೆ ಹಾಕಿಸಿಕೊಂಡ ಮಾಲೆ......... (೨)
೧೯. ಸರ ಸರನೇ ಬಂಡಿಯಲ್ಲಿ ತುಂಬಿದ ಸಾಮಗ್ರಿ..................... (೩)
೨೧. ಆನೆ ಕೊಲ್ಲಲು ಒಂದು ಕಾರಣ ................................. (೨)
೨೨. ವನದಲ್ಲಿ ಕಂಡುಬಂದ ಹೊಸತು................................ (೨)
೨೩. ಗೆಲ್ಲಲು ಕಾರಣವಾದ ಆತ ನೀಡಿದ ಓಟು........................ (೨)
೨೫. ಅರಿಯದವನಂತೆ ಕಾರಬಾರು ನಡೆಸಿದ ಕಛೇರಿಯ ಮುಖ್ಯಸ್ಥ .... (೪)
೨೬. ತಮ್ಮ ತಮ್ಮಲ್ಲಿಯೇ ಬಂದ ವೈಮನಸ್ಸು......................... (೪)

***ಮೇಲಿನಿಂದ ಕೆಳಕ್ಕೆ***

೨. ಪರರಾಷ್ಟ್ರದವರೂ ಮೆಚ್ಚಿಕೊಂಡ ಗಾಂಧೀಜಿಯವರ ಹುಟ್ಟೂರು (೫)
೩. ನಯನದಲ್ಲಿ ಕಂಡ ನುಣುಪು .................................... (೨)
೪. ಗೋಪಾಲನು ಬಿಟ್ಟು ಕೊಟ್ಟ ತನ್ನ ಭಾಗ ........................ (೨)
೫. ವಕೀಲರ ಮಧ್ಯೆ ತುರುಸಿನಿಂದ ನಡೆದ ಮಾತಿನ ಚಕಮಕಿ ......... (೫)
೭. ಜನಸಂಖ್ಯಾ ಸ್ಫೋಟಕ್ಕೆ ಕಾರಣವಾದ ಹುಟ್ಟು...................... (೩)
೮. ಪರರಾಜ್ಯದೊಂದಿಗೆ ಕಾದಾಡಲು ಕಾರಣವಾದ ನದಿ ............ (೩)
೧೧. ಗಾನರ ನಡುವೆ ಎಲ್ಲಿಂದಲೊ ಹಾಡಲು ಬಂದ ಸಂಗೀತಗಾರ .... (೫)
೧೩. ಕಿವಿ ಮರುಗುಟ್ಟುವ ಹಾಗೆ ಭಾರಿಸಿದ ಶಿವನವಾದ್ಯ............... (೩)
೧೪. ನಸುಕಿನಲ್ಲಿ ಬೇಗ ಎದ್ದು ಒಂದಿಸು ............................ (೩)
೧೬. ಹತವಾದಾಗ ಹೇರಾಮ್ ಎಂದ ದೇಶದ ನೇತಾರ................. (೫)
೧೭. ಮೈ ಪರಿಚಿ ಕೊಂಡವ ಈತ ಯಾರಿಗೂ ಗೊತ್ತಿಲ್ಲದವ ........... (೫)
೧೯. ಅವಸರದಲ್ಲಿ ಸಭೆಗೆ ಹಾಜರಾದ ಮಂತ್ರಿ ........................ (೩)
೨೦. ಕುಮುದಿನ ಮುಡಿದ ಪುಷ್ಪ .................................... (೩)
೨೨. ಏನೂ ಅರಿಯದಂತೆ ನಟಿಸಿ ಮೋಸ ಮಾಡುವ ಪ್ರಾಣಿ.......... (೨)
೨೪. ತುತ್ತು ಮಾಡಿ ಉಣಿಸುವ ಅಜ್ಜ ತಿರುಗಿದ್ದಾನೆ. .................... (೨)

■ ಜವಳಿ ವೀರಣ್ಣ

(ಉತ್ತರ : ಮುಂದಿನ ಸಂಚಿಕೆಯಲ್ಲಿ)



# ಮುದ್ದು ಮಕ್ಕಳೇ

ಏನು ಮಕ್ಕಳೇ, ಜೋರಾಗಿ ಪಟಾಕಿ ಹೊಡೆದು ದೀಪಾವಳೀನೂ ಮುಗಿಸಿ ಬಿಟ್ರಲ್ಲಾ. ಎಲ್ಲಾ ಆರೋಗ್ಯ ತಾನೇ. ನೋಡಿ, ಎಲ್ಲಾ ಹಬ್ಬ ಮುಗೀತು ಇನ್ನೂ ಸದ್ಯಕ್ಕೆ ಹಬ್ಬದ ಗಲಾಟೆ ಇಲ್ಲ. ಇನ್ನು ಏನಿದ್ದರೂ ಪಾಠ ಓದ್ಲಿ ಬರೆಯೋದಷ್ಟೇ. ಮಕ್ಕಳೇ, ಒಂದು ನಿಮಿಷ. ನಾನು ಈಗ ಹೇಳೋದು ಕಥೆಯಲ್ಲಾ, ನಿಜವಾಗಲೂ ನಡೆದ ವೀರಗಾಥೆ. ಕೇಳ್ತೀರಿ ತಾನೇ. ನಿಧಾನ ನಿಧಾನ ಕಥೆ ಕೇಳೋ ಭರದಲ್ಲಿ ಪುಸ್ತಕ ಎಲ್ಲಾ ಹಾಗೆ ಎಸೆದು ಬರಬಾರ್ದು. ಆ ಪುಸ್ತಕ ಹರಿದು ಹೋಗುತ್ತೆ. ಆಮೇಲೆ ಅಮ್ಮ ಅಪ್ಪ ಬೈಯುತ್ತಾರೆ. ಅದ್ಕೇ ಪುಸ್ತಕವನ್ನು ಸರಿಯಾಗಿ ಇಟ್ಟು ಬನ್ನಿ. ಭಾಷೆಗೆ ದೇವ ಭಾಷೆ ಅಂತಲೂ, ದೇವನಾಗರಿ ಲಿಪಿ ಅಂತಾಲೂ ಕರೀತಾರೆ. ಈ ಭಾಷೇಲಿ ಒಂದು ನುಡಿಕಟ್ಟು ಇದೆ. ಅದು 'ಜನನಿ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀವಾಸಿ' ಅಂತ. ಇದರರ್ಥ 'ಮಾತೃಭೂಮಿ ಮತ್ತು ಮಾತೆ ಸ್ವರ್ಗಕ್ಕಿಂತಲೂ ಮಿಗಿಲು' ಅಂತ. ನಮ್ಮಮ್ಮ ನಮ್ಮನ್ನು ಒಂಭತ್ತು ತಿಂಗಳು ತನ್ನ ಹೊಟ್ಟೆಯಲ್ಲಿ ಹೊತ್ತು ನಂತರ ಹೆತ್ತು ನಾವು ದೊಡ್ಡವರಾಗೋ ತನಕ ಕಣ್ಣಲ್ಲಿ ಕಣ್ಣಿಟ್ಟು ನಮ್ಮನ್ನು ಸಾಕ್ತಾಳಲ್ಲಾ ಆ ಪ್ರೀತಿ ವಾತ್ಸಲ್ಯಕ್ಕೆ ನಾವು ಅವಳ ಸೇವೆಯನ್ನು ಎಷ್ಟು ಮಾಡಿದರೂ ಸಾಕಾಗಲ್ಲ. ಅವಳ ಋಣಾನ ತೀರಿಸಲಿಕ್ಕೆ ಸಾಧ್ಯವಿಲ್ಲ ಮಕ್ಕಳೇ. ಹಾಗೇನೇ ನಾವು ಹುಟ್ಟಿದ ನಾಡು, ಭೂಮಿ ಇದೆಯಲ್ಲಾ ಅದರ ಋಣಾನೂ ಅಷ್ಟೇ. ಹಾಗಾಗಿ ಅವೆರಡು ಸ್ವರ್ಗಕ್ಕಿಂತ ಹಿರಿದು ಅಂತಾ ಹೇಳೋದು. ಅದ್ಕೇ ಅಲ್ವೆ ನಮ್ಮ ತಾತ ಮುತ್ತಾತಂದಿರೆಲ್ಲಾ ನೂರಾರು ವರ್ಷಗಳ ಕಾಲ ಪರಂಗಿಯರು ಅಂದರೆ ಪರಕೀಯರು ಅದೇ ಬ್ರಿಟಿಷರು ಮಕ್ಕಳೇ, ಅವರ ವಿರುದ್ಧ ಹೋರಾಡಿ ಈಗ ಸ್ವಾತಂತ್ರ್ಯ ಪಡೆದಿರೋದು. ನಾವು ಈ ಸ್ವಾತಂತ್ರ್ಯ ಪಡೆಯೋದಕ್ಕಿಂತ ಮೊದಲು ಆ ಬ್ರಿಟಿಷರಿಗೆ ಗುಲಾಮರಾಗಿ ಬದುಕ್ತಾ ಇದ್ದೆವು. ಆಗಲೇ ಅಲ್ವೇ, ಈ ಸಿಪಾಯಿದಂಗೆ, ಸ್ವಾತಂತ್ರ್ಯ ಹೋರಾಟ, ಕ್ವಿಟ್ ಇಂಡಿಯಾ ಚಳವಳಿ ಎಲ್ಲಾ ಆಗಿದ್ದು. ನೋಡಿ ಮಕ್ಕಳೇ ನಮ್ಮ ನೆಲದಲ್ಲಿ ನಾವೇ ಪರಕೀಯರಿಗೆ ಎಷ್ಟು ದಿನಾ ಅಂತಾ ತಲೆ ತಗ್ಗಿಸಿಕೊಂಡು ಇರೋದು ಹೇಳಿ. ಈ ಬ್ರಿಟಿಷರು ವ್ಯಾಪಾರಕ್ಕಂತಾ ನಮ್ಮಲ್ಲಿಗೆ ಬಂದು ನಂತರ ನಮ್ಮನ್ನೇ ಕೊಂಡುಕೊಳ್ಳೋ ಪ್ರಯತ್ನ ಮಾಡಿದರು. ಆದರೆ ಅದು ಅವರ ತಪ್ಪಲ್ಲ ಮಕ್ಕಳೇ? ಅದು ನಮ್ಮದು. ಯಾಕೆಂದರೆ ಆ ಕಾಲದಲ್ಲಿ ನಮ್ಮಲ್ಲಿ ಒಗ್ಗಟ್ಟಿರಲಿಲ್ಲ. ಪಕ್ಕದ ರಾಜನನ್ನು ಕಂಡರೆ ಮತ್ತೊಬ್ಬ ರಾಜನಿಗೆ ಹೊಟ್ಟೆ ಕಿಚ್ಚು, ನಮ್ಮ ದೇಶದಲ್ಲಿ ಅನೇಕ ರಾಜರು ಆಳ್ತಾ ಇದ್ದರು. ನಮ್ಮ ನಮ್ಮಲ್ಲಿನ ಜಗಳ ನೋಡಿ ಬ್ರಿಟಿಷರು ಒಡಕು ಅಂದ್ರೆ, ಜಗಳ ಹೆಚ್ಚಿಗೆ ಮಾಡಿ ಮೋಸದಿಂದ ನಮ್ಮ ದೇಶನಾ ತಮ್ಮ ತೋಳಿಗೆ ತಂದುಕೊಂಡ್ರು. ಆದರೂ ಆ ಕಾಲದಲ್ಲೂ ಕೆಲವು ರಾಜರು ಈ ಬ್ರಿಟಿಷರನ್ನು ವಿರೋಧಿಸೋಕೆ ಪ್ರಾಣಾನೇ ಬಲಿ ಕೊಟ್ಟರು. ಅದೇ ಝಾನ್ಸಿರಾಣಿ ಲಕ್ಷ್ಮೀಬಾಯಿ, ನಾನಾ ಸಾಹೇಬ, ತಾಂತ್ಯಾಟೋಪಿ, ಶಿವಾಜಿ ಹೀಗೆ ಒಬ್ಬರೇ ಇಬ್ಬರೇ ಲೆಕ್ಕವಿಲ್ಲದಷ್ಟು ಜನ. ನಂತರ ನಮ್ಮ ಬಾಪೂ ಅಂದ್ರೆ ಮಹಾತ್ಮಾ ಗಾಂಧಿ, ನೇತಾಜಿ, ಸರದಾರ್ ವಲ್ಲಭಭಾಯಿ ಪಟೇಲ್, ವಿನೋಬಾಬಾವೆ, ಭಗತ್‌ಸಿಂಗ್, ಖುದೀರಾಮ ಬೋಸ್ ಇಂತಹಾ ಲಕ್ಷೋಪಲಕ್ಷ ಜನಗಳು ತನು, ಮನ, ಧನ ಅಂದರೆ ಪ್ರಾಣ, ರಕ್ತ ಬಲಿಕೊಟ್ಟು ಈ ಸ್ವಾತಂತ್ರ್ಯ ಅನ್ನೋದನ್ನ ಮತ್ತೆ ಪಡಕೊಂಡೆವು. ಆ ಸ್ವಾತಂತ್ರ್ಯನ್ನ ಹಾಳು ಮಾಡದೇ ಉಳಿಸ್ಕೊಂಡು ಹೋಗೋದು ನಾವು ಅವರ ಶ್ರಮಕ್ಕೆ ಕೊಡೋ ಗೌರವ. ಜಲಿಯನ್ ವಾಲಾಬಾಗ್ ಹತ್ಯಾಕಾಂಡ 1919ರಲ್ಲಿ ನಡೀತಲ್ಲಾ ಅದಂತೂ ಹೇಳಲಿಕ್ಕೆ ಸಾಧ್ಯವಿಲ್ಲ. ಅಲ್ಲಿ ಎಷ್ಟೊಂದು ಜನ ಬ್ರಿಟಿಷರ ಗುಂಡಿಗೆ ಬಲಿಯಾದರು. ಅದಕ್ಕೆ ಸ್ವಾತಂತ್ರ್ಯದ ಅರ್ಥ ತಿಳ್ಕೊಂಡು ಗೌರವಿಸೋದರ ಜೊತೆಗೆ ಉಳಿಸಿಕೊಳ್ಳಲೇಬೇಕು. ಅದಕ್ಕಾಗಿ ಪ್ರತಿಯೊಬ್ಬರೂ ತಾಯಿ ಮತ್ತು ತಾಯಿ ನೆಲದ ಉಳಿವಿಗೆ ಯಾವುದೇ ಸಮಯದಲ್ಲಿ ಯಾವುದೇ ತ್ಯಾಗಕ್ಕೆ ಸಿದ್ಧರಿರಬೇಕು. ಓಹೋ, ನೀವು ಪರಸ್ಪರ ಗುಸುಗುಸು ಮಾತಾಡ್ತಾ ಇರೋದು ಕೇಳಿಸ್ತಾ ಇದೆ. ಈಗ ಯಾರೂ ನಮ್ಮ ಮೇಲೆ ಯುದ್ಧಕ್ಕಾಗಲೀ, ನಮ್ಮ ದೇಶ ಹಾಳು ಮಾಡೋಕಾಗಲಿ ಬಂದಿಲ್ಲವಲ್ಲಾ ಅನ್ನೋ ಅನುಮಾನ ತಾನೇ ನಿಮ್ಮದು. ನೋಡಿ ಮಕ್ಕಳೇ. ಅಂತಹ ಪರಿಸ್ಥಿತಿ ಬರದೇ ಇದ್ರೂ ಹಾಗೆ ಬರೋ ಮೊದಲು ನಾವು ಆ ಸಮಸ್ಯೆನಾ ಎದುರಿಸೋಕೆ ಸಿದ್ಧರಾಗಬೇಕಲ್ಲ. ಇಲ್ಲದಿದ್ರೆ ನಾನವತ್ತು ಹೇಳಿದ್ದೆನಲ್ಲಾ ಗಡ್ಡಕ್ಕೆ ಬೆಂಕಿ ಹತ್ತಿಕೊಂಡ ಕಥೆ ತರಹ ಆಗುತ್ತೆ. ಈಗ ನಮ್ಮ ದೇಶದ ಮೇಲೆ ದಾಳಿ ಮಾಡ್ತಾ ಇರೋದು ನಾನಾ ಸಮಸ್ಯಾಸುರರು. ಅಂದ್ರೆ ಅದೇ ಅನಕ್ಷರತೆ, ನಿರುದ್ಯೋಗ, ಬಡತನ, ಅಭದ್ರತೆ ಹೀಗೆ ಹತ್ತು ಹಲವಾರು. ದೊಡ್ಡ ದೊಡ್ಡ ಪದಗಳನ್ನು ಹೇಳಿ ನಿಮ್ಮನ್ನು ಕಕ್ಕಾಬಿಕ್ಕಿ ಮಾಡೋದಿಲ್ಲ ಮಕ್ಕಳೇ. ಈ ಪದಗಳ ಬಗ್ಗೆ ಮುಂದಿನ ಬಾರಿ ವಿಸ್ತಾರವಾಗಿ ಹೇಳ್ತೀನಿ. ಈ ಕಕ್ಕಾಬಿಕ್ಕಿ ಅಂದ್ರೆ ತಿಳೀಲಿಲ್ವಾ? ನೋಡಿ ಈ ಪದ ಕೇಳಿ ನೀವು ಪರಸ್ಪರ ಒಬ್ಬರ ಮುಖ ಇನ್ನೊಬ್ಬರು ನೋಡ್ಕೊಂಡು ಪಿಳಿಪಿಳಿ ಕಣ್ಣು ಬಿಡಲಿಲ್ವಾ, ಅದೇ ಕಕ್ಕಾಬಿಕ್ಕಿ ಅನ್ನೋದು. ಹಾಗಾಗಿ ನಾವು ಪಡೆದ ಸ್ವಾತಂತ್ರ್ಯಕ್ಕೆ ಬೆಲೆ ಕೊಡೋ ಕಾರ್ಯದಲ್ಲಿ ನಮ್ಮ ದೇಶದ ಕಾನೂನು, ನೀತಿ, ನಿಯಮಗಳನ್ನು ಗೌರವಿಸಿ ಅದರಂತೆ ನಡೆಯಬೇಕು. ಕೇಳಿಸ್ತಾ ಇದೆ. ಅಮ್ಮಾ ಕರೀತಾ ಇರೋದು, ಓದೋದಿಕ್ಕೆ ಸಮಯಾಯ್ತು ಅಂತಾನಾ? ಹೋಗಿ ಕುಳಿತ್ಕೊಂಡು ಓದಿ ಮಕ್ಕಳೇ, ಈ ಅಜ್ಜಿಗೆ ಕಾಗದ ಬರೀತೀರಲ್ಲಾ, ನಾನೂ ಕಾಯ್ತಾ ಇರ್ತೀನಿ. ಬರೋಣಾವಾ?

■ ಅಡಗೂಲಜ್ಜಿ.

# ನೀವು ಕಥೆಗಾರರಾಗಬೇಕೆ?.....................

**ನಿಮಗೂ ಕಥೆಗಾರರಾಗಬೇಕೆಂಬ ಆಸೆ ಇರಬಹುದಲ್ಲವೆ? ನಿಮ್ಮಂತಹ ಚಿಗುರು ಪ್ರತಿಭೆಗಳಿಗೆ ಪ್ರೋತ್ಸಾಹ ನೀಡಲಿಕ್ಕಾಗಿಯೇ ಈ ಅಂಕಣ ಮೀಸಲು. ನೀವು ಮಾಡಬೇಕಾದುದಿಷ್ಟೇ; ಈ ಕೆಳಗೆ ನಾವೊಂದು ಕಥೆ ನೀಡಿದ್ದೇವೆ. ಆದರೆ ಅದು ಅಪೂರ್ಣ. ಅದನ್ನು ಪೂರ್ಣಗೊಳಿಸಬೇಕಾದವರು ನೀವೇ!**

## ಅಪೂರ್ಣ ಕತೆ

ಪ್ರೌಢಶಾಲೆಯಲ್ಲಿ ಓದುತ್ತಿರುವ ಕಾವೇರಿ ತುಂಬಾ ಬುದ್ಧಿವಂತ ಹುಡುಗಿ. ಓದಿನಲ್ಲಿ ಇತರ ಎಲ್ಲ ವಿದ್ಯಾರ್ಥಿಗಳಿಗಿಂತ ಮುಂದು. ಬುದ್ಧಿವಂತೆ ಯಾಗಿದ್ದ ಕಾವೇರಿ ಉಪಾಧ್ಯಾಯರ ಅಚ್ಚುಮೆಚ್ಚಿನ ವಿದ್ಯಾರ್ಥಿನಿಯಾಗಿದ್ದಳು. ಓದಿನ ಜೊತೆಗೆ ಇತರ ಚಟುವಟಿಕೆಗಳಲ್ಲೂ ಭಾಗವಹಿಸುತ್ತಿದ್ದ ಕಾವೇರಿಗೆ ಎಲ್ಲರಿಂದಲೂ ಉತ್ತಮ ಪ್ರಶಂಸೆ ದೊರೆಯುತಿತ್ತು. ನಮ್ಮ ಮಗಳು ಚೆನ್ನಾಗಿ ಓದಿ ಮುಂದೆ ದೊಡ್ಡ ಅಧಿಕಾರಿಯಾಗಬೇಕೆಂಬ ಆಸೆ ತಂದೆ ತಾಯಿಗಳದು. ಅವರ ಆಸೆಯನ್ನು ಈಡೇರಿಸಬೇಕೆಂಬ ಛಲದಿಂದ ಕಾವೇರಿಯೂ ಕಷ್ಟಪಟ್ಟು ಓದುತ್ತಿದ್ದಳು.

10ನೇ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ಶಾಲೆಗೆ ಮೊದಲನೆಯವಳಾಗಿ ಉತ್ತೀರ್ಣಳಾದಾಗ ಅವಳ ಸಂತೋಷಕ್ಕೆ ಪಾರವೇ ಇರಲಿಲ್ಲ. ತಂದೆ, ತಾಯಿ, ಚಿಕ್ಕಪ, ಗುರುಗಳು, ಸ್ನೇಹಿತರು ಇವರ ಸಾಧನೆಯ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದಾಗ ಮನಸ್ಸಿನಲ್ಲಿಯೇ ಸಂತೋಷ ಪಡುತ್ತಿದ್ದಳು. ಇನ್ನೂ ಹೆಚ್ಚಿನ ಸಾಧನೆಯನ್ನು ಮಾಡಬೇಕೆಂಬ ಹುಮ್ಮಸ್ಸು ಅವಳಲ್ಲಿ ಮೂಡಿತು. ಆದರೆ ದುರಾದೃಷ್ಟವಶಾತ್ ಅವರ ತಂದೆ ಕಾಯಿಲೆಯಿಂದ ಇನ್ನಿಲ್ಲವಾದರು.

**ಸೂಚನೆಗಳು :**

- ಹತ್ತನೆಯ ತರಗತಿಯವರೆಗಿನ ವಿದ್ಯಾರ್ಥಿಗಳು ಮಾತ್ರ ಈ ಕಥೆಯನ್ನು ಪೂರ್ಣಗೊಳಿಸಿ ಕಳುಹಿಸಲು ಅರ್ಹರು.
- ನಿಮ್ಮ ಬರವಣಿಗೆ ಅರ್ಧ ಫೂಲ್‌ಸ್ಕೇಪ್ ಹಾಳೆ ಮೀರದಿರಲಿ.
- ಆ ಹಾಳೆಯ ಹಿಂಬದಿಯಲ್ಲಿ 'ಕಿಲ ಕಿಲ ಕೂಪನ್' ಅಂಟಿಸಿರಬೇಕು.
- ಮುಂದಿನ ಸಂಚಿಕೆಯಲ್ಲಿ ಫಲಿತಾಂಶ.
- ನಿಮ್ಮ ಬರವಣಿಗೆ ನಮಗೆ ತಲುಪಲು ಅಂತಿಮ ದಿನಾಂಕ 15.11.98

**ಕಿಲ ಕಿಲ ಕೂಪನ್ – (ನವೆಂಬರ್ 98)**

ಹೆಸರು.................................................

ತರಗತಿ........................... ವಯಸ್ಸು.....................

ತಂದೆ.................................................

ತಾಯಿ.................................................

ವಿಳಾಸ.................................................

.................................................

.................................................

.................................................

## ಯಾರವಳು?

ದುಂಡು ಮುಖದ ಹುಡುಗಿ
ಕೆಂಪು ಬಣ್ಣದ ಹುಡುಗಿ
ರೊಕ್ಕ ಕೊಟ್ರೆ ಬರ್ತಾಳ
ಒತ್ತಿ ಹಿಡ್ರೆ ಅಳ್ತಾಳ
- ಯಾರವಳು?

ಇಟಿಟೆ ಹುಡುಗಿ
ಬಿಳಿ ಬಣ್ಣದ ಹುಡುಗಿ
ರೊಕ್ಕ ಕೊಟ್ರೆ ಬರ್ತಾಳ
ಒತ್ತಿ ಹಿಡ್ರೆ ನಗ್ತಾಳ
- ಯಾರವಳು?

(ಉತ್ತರ: ಈರುಳ್ಳಿ, ಬಲ್ಬ್)

## ಅದ್ಯಾವ ಕಲ್ಲು?

ಹಾಸ್‌ಗಲ್ಲು
ಹಂಪುರ ಗಲ್ಲು
ಜಗಕ್ಕೆಲ್ಲ
ಒಂದೇ ಕಲ್ಲು
- ಅದ್ಯಾವ ಕಲ್ಲು?

ಹಾಸ್ ಗಲ್ಲು
ಹಂಪುರ ಗಲ್ಲು
ಸಾವಿರ ಮಂದಿ
ಎತ್ತಲುದ ಕಲ್ಲು
- ಅದ್ಯಾವ ಕಲ್ಲು

(ಉತ್ತರ: ಮುಗಿಲು)

- ಅಮೃತ ಎಸ್. ಕುಂಬಾರ

# ಕಳೆದ ತಿಂಗಳ ಅಪೂರ್ಣ ಕಥೆಯ ಮುಕ್ತಾಯ

**1**

ಗಾಢವಾದ ನಿದ್ರೆಯಲ್ಲಿದ್ದ ಹರೀಶನಿಗೆ ಭಯಂಕರ ಶಬ್ದ ಕೇಳಿ ಎಚ್ಚರವಾಯಿತು. ಆ ಕಡೆ ಈ ಕಡೆ ನೋಡಿದ. ಸುತ್ತಮುತ್ತ ಯಾರೂ ಇರಲಿಲ್ಲ. ತಕ್ಷಣ ಭಯದಿಂದ ಮನೆಗೆ ಓಡಿ ಬಂದನು. ಮನೆಯಲ್ಲಿ ಅವನಿಗಾಗಿ ಅಜ್ಜ ತಾತ ಕಾಯುತ್ತಿದ್ದರು. ಮನೆಯ ಹತ್ತಿರ ಬರುತ್ತಿದ್ದಂತೆ ಅಜ್ಜೀ ಎಂದು ಕೂಗುತ್ತಾ ಒಳಗೆ ಹೋದನು. ಗಾಬರಿಗೊಂಡಿದ್ದ ಅಜ್ಜ ತಾತ ಎಲ್ಲಿಗೆ ಹೋಗಿದ್ದೆ ಎಂದರು. ಆಗ ಹರೀಶ ಪಾಪಾಗ್ನಿ ಗುಡ್ಡದಲ್ಲಿ ನಡೆದ ಘಟನೆಯನ್ನು ತಿಳಿಸಿದ.

-ಲಕ್ಷ್ಮಿ ಬ. ಬಿರಾದಾರ, ಮುದ್ದೇಬಿಹಾಳ

**2**

ಒಮ್ಮಿಂದೊಮ್ಮೆ ಹರೀಶನ ನಿದ್ದೆ ಭಂಗವಾಗಿದ್ದರಿಂದ ತಟ್ಟನೆ ಎದ್ದು ಸುತ್ತಲೂ ನೋಡಿದನು. ಗೆಳೆಯರು ಕಾಣದೇ ಇದ್ದುದರಿಂದ ಭಯ ಆವರಿಸಿತು. ಆ ಶಬ್ದದ ನಂತರ ಪ್ರಕೃತಿಯಲ್ಲಿ ನಿಶಬ್ದ ಆವರಿಸಿ ಅವನ ಭಯ ಇಮ್ಮಡಿಯಾಯಿತು. ಹರೀಶನು ಸಾವಕಾಶವಾಗಿ ಗುಡ್ಡವನ್ನು ಇಳಿಯುತ್ತಿದ್ದನು. ಆಗ ಅದೇ ರೀತಿಯ ಮತ್ತೊಂದು ಭಯಂಕರವಾದ ಶಬ್ದ ಕೇಳಿಸಿತು. ಎಲ್ಲಿಂದಲೋ ಕೆಲವು ಕಲ್ಲಿನ ಚೂರುಗಳು ಬಿದ್ದವು. ಅಷ್ಟರಲ್ಲಿ ಇಬ್ಬರು ದಾರಿ ಹೋಕರು ಬಂದು ಇಲ್ಲಿ ಗುಡ್ಡದ ಕೆಳಗೆ ಬಾವಿ ತೋಡುತ್ತಿದ್ದಾರೆ. ನೀನು ಹೇಗೆ ಬಂದೆ ಎಂದು ಕೇಳಿದರು. ನಡೆದ ಘಟನೆಯನ್ನು ತಿಳಿಸುತ್ತಾ ಅವರ ಜೊತೆಯಲ್ಲಿಯೇ ಮನೆಗೆ ಹೊರಟನು.

-ಶ್ವೇತಾ ಸು. ಪಾಟೀಲ, ಬೆಳಗಾವಿ

**3**

ಹರೀಶನಿಗೆ ಗುಡ್ಡದಲ್ಲಿಯ ಭಯಂಕರ ಶಬ್ದ ಕೇಳಿ ಭಯವೂ ಆಯಿತು ಹಾಗೂ ಧೈರ್ಯವೂ ಬಂದಿತು. ಶಬ್ದದ ಒಳ ಸಂಚನ್ನು ಅರಿಯಲು ಪ್ರಯತ್ನ ಪಟ್ಟನು. ಗುಡ್ಡದ ತುದಿಯಲ್ಲಿ ಘೋರವಾದ ಶಬ್ದ ಕೇಳಿಸಿತು. ಹತ್ತಿರ ಹೋಗಿ ನೋಡಿದನು. ಆಗ ಅಲ್ಲಿ ಒಂದು ಆನೆ ಘೀಂಕರಿಸುತ್ತಿತ್ತು. ಭಯದಿಂದ ಹಿಂತಿರುಗುವಾಗ ಒಂದು ಬಾಳೆ ತೋಟವನ್ನು ಕಂಡನು. ಬಾಳೆಯ ಗೊನೆಯನ್ನು ತೆಗೆದುಕೊಂಡು ಹೋಗಿ ಆನೆಗೆ ಎಸೆದನು. ಆನೆ ಹಣ್ಣುಗಳನ್ನು ತಿನ್ನುತ್ತಾ ಹರೀಶನ ಹತ್ತಿರ ಬಂದಿತು. ಹೀಗೆ ಇಬ್ಬರೂ ಗೆಳೆಯರಾದರು.

ರಾತ್ರಿಯೆಲ್ಲಾ ಆನೆಯ ಜತೆಯಲ್ಲಿ ಕಳೆದನು. ಬೆಳಿಗ್ಗೆ ಎದ್ದು ಇಬ್ಬರೂ ಒಟ್ಟಿಗೆ ತಾತನ ಮನೆಗೆ ಹಿಂತಿರುಗಿದರು. ಆತಂಕದಲ್ಲಿದ್ದ ಅಜ್ಜ ತಾತ ಇಬ್ಬರನ್ನೂ ಆತ್ಮೀಯವಾಗಿ ಸ್ವಾಗತಿಸಿದರು.

-ಪವನ ಗುಡಿ, ದೇವದುರ್ಗ

**4**

ಆ ಶಬ್ದ ಕೇಳಿ ಎಚ್ಚರಗೊಂಡ ಹರೀಶ ಅತ್ತಿತ್ತ ನೋಡುತ್ತಾ ಮುಂದೆ ಹೋದ. ಭಯವಾಗುತ್ತಿದ್ದರೂ ಹೆದರದೆ ಅಲ್ಲಿ ಏನಿರಬಹುದೆಂದು ತಿಳಿದುಕೊಳ್ಳಬೇಕೆನ್ನುವಷ್ಟರಲ್ಲಿ ತುಂಬಾ ಹೊತ್ತಾಗಿತ್ತು. ಆದುದರಿಂದ ಅವನು ಮನೆಗೆ ಮರಳಿದನು.

ಮರುದಿನ ಬೆಳಿಗ್ಗೆ ತನ್ನ ಗೆಳೆಯರಿಗೆ ಭಯಂಕರ ಶಬ್ದದ ಬಗ್ಗೆ ಹೇಳಿದ. ಅದನ್ನು ತಿಳಿದುಕೊಳ್ಳಬೇಕಾದರೆ 7 ಗಂಟೆಯ ನಂತರ ಹೋಗಬೇಕು ಎಂದು ಹೇಳಿದನು. ಗೆಳೆಯರು ಹೆದರಿ ನಾವು ಬರುವುದಿಲ್ಲವೆಂದಾಗ, ಹರೀಶ ಒಬ್ಬನೇ ಹೋದನು. ಅಲ್ಲೊಂದು ಹಾಳು ಮನೆ ಇತ್ತು. ಅಲ್ಲಿ ಯಾರೋ ಮಾತನಾಡುತ್ತಿದ್ದಂತೆ ಕೇಳಿಸಿತು. ಆಗ ಅವನು ಇನ್ನೂ ಹತ್ತಿರ ಹೋದ ಅಲ್ಲಿ ತೆಗೆದಿಟ್ಟ ಎರಡು ಪೆಟ್ಟಿಗೆ ಇದ್ದವು. ಅದರಲ್ಲಿ ಚಿನ್ನದ ಆಭರಣಗಳು, ಮುತ್ತು ಹರಳು ವಜ್ರ ಇತ್ಯಾದಿಗಳಿದ್ದವು.

ಅಲ್ಲಿ ಇಬ್ಬರು ಕಳ್ಳರಿದ್ದರು. ಬಾಗಿಲ ಹೊರಗಿನಿಂದ ಚಿಲಕ ಹಾಕಿಕೊಂಡು ಓಡಿ ಬಂದು ಪೋಲಿಸರಿಗೆ ತಿಳಿಸಿ ಕಳ್ಳರನ್ನು ಹಿಡಿದು ಕೊಟ್ಟನು. ಈ ಸುದ್ದಿ ಕೇಳಿ ಅಜ್ಜ ತಾತ ತಂದೆ ತಾಯಿಗೆ ಸಂತೋಷವಾಯಿತು. ಹರೀಶನಿಗೆ 'ಬಾಲವೀರ' ಪ್ರಶಸ್ತಿ ಸಿಕ್ಕಿತು.

-ಸೀಮಾ ಭ. ಕಲಗೊಂಡ, ಬಿಜಾಪುರ

**5**

ಆ ಭಯಂಕರ ಶಬ್ದದಿಂದ ಎಚ್ಚರಗೊಂಡ ಹರೀಶ ಸುತ್ತಲೂ ನೋಡಿದಾಗ ದಟ್ಟ ಕತ್ತಲು ಕವಿದಿತ್ತು. ಹಸಿವಿನಿಂದ ಕಂಗಾಲಾಗಿ, ಭಯಂಕರವಾಗಿ ಗರ್ಜಿಸುತ್ತ ಬೆಟ್ಟದ ಮೇಲಿಂದ ಇಳಿದು ಬರುತ್ತಿದ್ದ ಹುಲಿಯನ್ನು ಗಮನಿಸಿದ ಹರೀಶ ತಡಮಾಡದೆ ಮರವನ್ನೇರಿ ಕುಳಿತು, ಮರುದಿನ ಮುಂಜಾನೆ ತನ್ನ ಮನೆಗೆ ತೆರಳಿ ಅಜ್ಜ ಅಜ್ಜಿಯರಿಬ್ಬರ ಆತಂಕವನ್ನು ದೂರಮಾಡಿದನು. ಅವರ ಜೊತೆಯಲ್ಲಿ ಅರಣ್ಯಾಧಿಕಾರಿಗಳನ್ನು ಭೇಟಿ ಮಾಡಿ ರಾತ್ರಿ ನಡೆದ ವಿಷಯವನ್ನೆಲ್ಲ ತಿಳಿಸಿದನು. ಅರಣ್ಯಾಧಿಕಾರಿಗಳು ಸಿಬ್ಬಂದಿವರ್ಗದವರೊಡನೆ ಕಾಡಿಗೆ ತೆರಳಿ ಹುಲಿಯನ್ನು ಬೋನಿನಲ್ಲಿ ಬಂಧಿಸಿಟ್ಟರು. ಹರೀಶನ ಸಮಯ ಪ್ರಜ್ಞೆಯನ್ನು ಮೆಚ್ಚಿ ಅಧಿಕಾರಿಗಳು ಬಹುಮಾನವನ್ನು ಘೋಷಿಸಿದರು. ಊರಿನ ಜನರೆಲ್ಲ ಹರೀಶನ ಧೈರ್ಯವನ್ನು ಕೊಂಡಾಡಿದರು. ಇದರಿಂದ ಖುಷಿಗೊಂಡ ಅಜ್ಜ ಅಜ್ಜಿಯರಿಬ್ಬರೂ ಹರೀಶನನ್ನು ತಬ್ಬಿ ಪ್ರೀತಿಯಿಂದ ಮುತ್ತಿಟ್ಟರು.

-ಪೂರ್ಣಿಮ ಇಟ್ಟಿಗಿ, ಹಗರಿಬೊಮ್ಮನಹಳ್ಳಿ

**6**

ಭಯಂಕರ ಶಬ್ದವನ್ನು ಕೇಳಿ ಹರೀಶನಿಗೆ ಎಚ್ಚರವಾಗುತ್ತದೆ. ತನ್ನ ಗೆಳೆಯರಾದ ರಾಮು, ರಘು, ಮಂಜು ಹಾಗೂ ಸಿದ್ದೇಶ ಇಲ್ಲದಿರುವುದನ್ನು ಕಂಡು ಭಯಗೊಳ್ಳುತ್ತಾನೆ. ಅಜ್ಜ, ತಾತ ಆಗಾಗ ಪಾಪಾಗ್ನಿ ಗುಡ್ಡಕ್ಕೆ ಹೋಗಬೇಡ ಎಂದು ಹೇಳುತ್ತಿದ್ದರೂ ಅವರ ಮಾತಿಗೆ ಕಿವಿಗೊಡುತ್ತಿರಲಿಲ್ಲ. ಅಲ್ಲಿಂದ ಅಳುತ್ತಾ ಮನೆಗೆ ಓಡಿ ಬಂದನು. ಇನ್ನೊಮ್ಮೆ ಅಲ್ಲಿಗೆ ಹೋಗುವುದಿಲ್ಲ ಎಂದು ಹೇಳಿ ಊಟ ಮಾಡಿ ಮಲಗಿದನು.

-ಎಂ.ವೀರೇಶ, ಹೊಸಮೋಕಾ

**7**

ಗುಡ್ಡದಲ್ಲಿ ಭಯಂಕರ ಶಬ್ದ ಕೇಳಿ ಹರೀಶನಿಗೆ ತಟ್ಟನೆ ಎಚ್ಚರವಾಯಿತು. ಅವನು ಸುತ್ತಲೂ ನೋಡಿದನು. ಯಾರೂ ಇರಲಿಲ್ಲ. ಭಯದಿಂದ ನಿಧಾನವಾಗಿ ಹೆಜ್ಜೆ ಹಾಕತೊಡಗಿದನು. ಯಾರೋ ಕಿರುಚುವ ಶಬ್ದ ಕೇಳಿ ಅವನಿಗೆ ಇನ್ನೂ ಭಯವಾಗತೊಡಗಿತು. ಅಷ್ಟರಲ್ಲಿ ಯಾರೂ ತನ್ನ ಕಡೆ ಬರುತ್ತಿರುವ ಹಾಗೆ ಕಂಡಿತು. ತಕ್ಷಣ ನಿಂತು ಕೊಂಡನು. ಬರುತ್ತಿದ್ದವನು ಹರೀಶನ ಊರಿನವನೇ ಆಗಿದ್ದನು. ಆಗ ಹರೀಶ ಭಯಗೊಳ್ಳದೆಯೇ ಆತನ ಜೊತೆಯಲ್ಲಿ ತನ್ನ ಊರಿಗೆ ಹೋದನು. ಹರೀಶನ ಬರುವಿಕೆಯನ್ನೇ ಕಾಯುತ್ತಿದ್ದ ಅಜ್ಜಿ ತಾತನಿಗೆ ತುಂಬಾ ಸಂತೋಷವಾಯಿತು.

-ಬಿ. ಎನ್.ಪ್ರತಿಭ, ಬಿಳಿದೇಗಲು

**8**

ಆ ಭಯಂಕರ ಶಬ್ದ ಕೇಳಿ ಹರೀಶ ಗಾಢ ನಿದ್ರೆಯಿಂದ ಎಚ್ಚರವಾದನು. ಸಿಂಹವೊಂದು ಆರ್ಭಟಿಸುತ್ತಾ ಬಂತು. ಅದಕ್ಕೆ ಆಹಾರ ಸಿಕ್ಕಿರಲಿಲ್ಲ. ಅದು ಊರಿಗೆ ಬಂದು ದಿನಕ್ಕೊಬ್ಬರನ್ನು ತೆಗೆದುಕೊಂಡು ಹೋಗುತ್ತಿತ್ತು. ಹೀಗಿರುವಾಗ ಹರೀಶ ಅದರ ಕಣ್ಣಿಗೆ ಬಿದ್ದನು. ಅವನು ಅಂಜದೆ ಆ ಹುಲಿಯ ಮೇಲೆ ಬಿದ್ದು ಅದನ್ನು ಕೊಂದನು. ಇದರಿಂದ ಹಳ್ಳಿಯ ಜನರಿಗೆ ತುಂಬಾ ಸಂತೋಷವಾಯಿತು. ಹಳ್ಳಿಯ ಜನರಿಂದ ಅವನಿಗೆ 'ವೀರ'ಬಾಲಕ ಎಂಬ ಬಿರುದು ದೊರೆಯಿತು.

-ಮಂಗಳಾ, ಹಿರೇಕೆರೂರು

# ಸ್ಟಾರ್‌ಗಳ ಹುಟ್ಟು ಹಬ್ಬದ ಗುಟ್ಟುಗಳು

ಕನ್ನಡ ರಾಜ್ಯೋತ್ಸವಕ್ಕೆ ಮೊದಲು ಕನ್ನಡ ತಾರಾಭಿಮಾನಿಗಳು ಉತ್ಸವ ಆಚರಿಸಿಯಾಗಿದೆ. ಅವರ ಫೇವರಿಟ್ ತಿಂಗಳು ಸೆಪ್ಟೆಂಬರ್. ಕನ್ನಡದ ನಾಲ್ಕು ತಾರೆಯರು ಅವತರಿಸಿದ್ದು ಇದೇ ತಿಂಗಳು. ಅದರಲ್ಲೂ ವಿಷ್ಣುವರ್ಧನ್, ಶ್ರುತಿ, ಉಪೇಂದ್ರ ಈ ಮೂವರದ್ದು ಒಂದೇ ಜನ್ಮ ದಿನ - ಸೆಪ್ಟಂಬರ್ 18. ಇನ್ನೊಬ್ಬ ನಟ ರಮೇಶ್ 10ಕ್ಕೆ ತಮ್ಮ ಹುಟ್ಟುಹಬ್ಬ ಆಚರಿಸುತ್ತಾರೆ.

ಈ ಬಾರಿ 18ರಂದು ಶ್ರುತಿ ಮತ್ತು ವಿಷ್ಣು ಬೆಂಗಳೂರಲ್ಲಿರಲಿಲ್ಲ, ಬೆಳಗಾಂವ್ ಸಮೀಪದ ನೇಗಿನಹಾಳದಲ್ಲಿ ವೀರಪ್ಪನಾಯ್ಕ ಚಿತ್ರದ ಶೂಟಿಂಗ್‌ನಲ್ಲಿ ಬಿಜಿಯಾಗಿದ್ದರು. ಹಾಗಾಗಿ ಸೆಟ್‌ನಲ್ಲೇ ಹುಟ್ಟುಹಬ್ಬ ನಡೆಯಿತು. ನಿರ್ದೇಶಕ ನಾರಾಯಣ್ ಶೂಟಿಂಗ್ ನಡೆಯುತ್ತಿದ್ದ ವಾಡೇಗೆ ಕೇಕ್ ತರಿಸಿದ್ದರು. ವಿಷ್ಣು-ಶ್ರುತಿ ತಾವಿಬ್ಬರೂ ಪರಸ್ಪರ ಅಭಿಮಾನಿಗಳೆಂದು ಘೋಷಿಸುತ್ತಾ ಒಟ್ಟಿಗೇ ಕೇಕ್ ಕತ್ತರಿಸಿದರು.

ಬೆಂಗಳೂರಲ್ಲಿ ಹಾಸಿಗೆ ಹಿಡಿದಿರುವ ತಮ್ಮ ಅಮ್ಮನ ನೆನಪಲ್ಲೇ ಶೂಟಿಂಗ್‌ನಲ್ಲಿ ಪಾಲ್ಗೊಳ್ಳುತ್ತಿರುವ ವಿಷ್ಣುಗೆ, ಹುಟ್ಟುಹಬ್ಬದ ದಿನ ಮತ್ತೆ ಅಮ್ಮನ ನೆನಪಾಗುವ ಪ್ರಸಂಗ ಬಂತು. 80ರ ವೃದ್ಧೆಯೊಬ್ಬಳು ವಿಷ್ಣು ಬಾಯಿಗೆ ಮೆತ್ತಿದ್ದ ಕೇಕ್‌ನ್ನು ತನ್ನ ಸೆರಗಿನಿಂದ ಒರಸಿದಳು. ತಕ್ಷಣ ವಿಷ್ಣು ಕಣ್ಣಲ್ಲಿ ನೀರು. ಅದಾದ ನಂತರ ಬೆಂಗಳೂರಿಂದ ಬಂದ ಅಭಿಮಾನಿಗಳ ಜೊತೆ ಮಾತುಕಥೆ.

ಶ್ರುತಿಯೊಳಗೆ ಒಬ್ಬ ಪೇಂಟರ್ ಇದ್ದಾಳೆ ಎನ್ನೋ ಸಂಗತಿ ಕೂಡಾ ಮೊನ್ನೆ ಬಯಲಾಯಿತು. ವಿಷ್ಣುಗೆ ಹುಟ್ಟುಹಬ್ಬದ ಉಡುಗೊರೆಯಾಗಿ ಶ್ರುತಿ ನೀಡಿದ್ದು ತಾನೇ ರಚಿಸಿದ ವಿಷ್ಣು ಚಿತ್ರ. ಆದರೆ ಆ ಹೊತ್ತಿಗೆ ಶ್ರುತಿ ಮನಸ್ಸೊಳಗೆ ಮೂಡಿದ್ದ ಚಿತ್ರ ಇನ್ನೊಬ್ಬರದ್ದು, ಆತನೇ ಮಹೇಂದರ್. ಮುಂದಿನ ವರ್ಷ ತಮ್ಮಿಬ್ಬರ ಮದುವೆಯೆಂದು ಶ್ರುತಿ ಸ್ಥಳದಲ್ಲೇ ಪ್ರಕಟಿಸಿದರು. ಈ ಮದುವೆಗೆ ಶ್ರುತಿ ಮನೆಯವರ ಒಪ್ಪಿಗೆಯಿನ್ನೂ ಸಿಕ್ಕಿಲ್ಲ. ಆದರೆ ಪತಿಸೇವೆ ಹಾಗೂ ತವರಿನ ಋಣವೆರಡನ್ನೂ ಜೊತೆಯಾಗಿ ನಿಭಾಯಿಸಬಲ್ಲೆ ಎಂಬ ಆತ್ಮವಿಶ್ವಾಸ ಅವರದು. ಶ್ರುತಿ ಈ ಹಿಂದೆ ಇಂಥ ಪಾತ್ರಗಳನ್ನು ತೆರೆಯ ಮೇಲೆ ನಿರ್ವಹಿಸಿದ್ದು ಈಗ ಪ್ರಯೋಜನಕ್ಕೆ ಬರಬಹುದು!

## ಬೆಳ್ಳಿ ಕಿರೀಟಧಾರಣೆ



**ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹೆಚ್ಚುವರಿ ಕಾರ್ಯದರ್ಶಿ ತುಳಸಿರಾಮ್ ಅವರು ಉಪೇಂದ್ರಗೆ ಬೆಳ್ಳಿಕಿರೀಟ ತೊಡಿಸಿದರು. ಇದೂ ಸಾಲದು ಎಂಬಂತೆ ಪೊಲೀಸ್ ಅಧಿಕಾರಿ ಈಶ್ವರಪ್ರಸಾದ್ ಸ್ಥಳದಲ್ಲೇ ನಿರ್ದೇಶಕ ರತ್ನ ಎಂಬ ಬಿರುದನ್ನು ದಯಪಾಲಿಸಿದರು.**

ಸ್ಟಾರ್ ಮೇಕರ್ ಎಂಬ ಬಿರುದು ಹೊತ್ತು, ಇತ್ತೀಚೆಗೆ ತಾನೇ ಸ್ಟಾರ್ ಆಗಿರುವ ಉಪೇಂದ್ರರ ಹುಟ್ಟುಹಬ್ಬವನ್ನು ಆಚರಿಸುವ ಜವಾಬ್ದಾರಿಯನ್ನು ಬೆಂಗಳೂರಿನ ಕರ್ನಾಟಕ ಅಣ್ಣಮ್ಮದೇವಿ ಕನ್ನಡಸೇನೆಯವರು ಹೊತ್ತುಕೊಂಡಿದ್ದರು. ರವೀಂದ್ರಕಲಾಕ್ಷೇತ್ರಕ್ಕೆ ಮೆರವಣಿಗೆಯಲ್ಲಿ ಬಂದ ಉಪೇಂದ್ರರಿಗೆ ವೇದ ಮಂತ್ರಗಳ ಘೋಷದ ಸ್ವಾಗತ ಕಾದಿತ್ತು. ಬರ್ತ್‌ಡೇ ಬಾಯ್ ಅಣ್ಣಮ್ಮದೇವಿಗೆ ಪೂಜೆ ಸಲ್ಲಿಸಿದ ನಂತರ ಕೇಕ್ ಕತ್ತರಿಸಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹೆಚ್ಚುವರಿ ಕಾರ್ಯದರ್ಶಿ ತುಳಸಿರಾಮ್ ಅವರು ಉಪೇಂದ್ರಗೆ ಬೆಳ್ಳಿಕಿರೀಟ ತೊಡಿಸಿದರು. ಇದೂ ಸಾಲದು ಎಂಬಂತೆ ಪೊಲೀಸ್ ಅಧಿಕಾರಿ ಈಶ್ವರಪ್ರಸಾದ್ ಸ್ಥಳದಲ್ಲೇ ನಿರ್ದೇಶಕ ರತ್ನ ಎಂಬ ಬಿರುದನ್ನು ದಯಪಾಲಿಸಿದರು. ಅಣ್ಣಮ್ಮನ ಭಕ್ತರು ಎ ಚಿತ್ರದ ಮಾರಿಕಣ್ಣು ಹೋರಿಮ್ಯಾಗೆ..... ಗೀತೆಗೆ ಕುಣಿದು ಕುಪ್ಪಳಿಸಿದರು.

ಅಂದಹಾಗೆ ಉಪೇಂದ್ರರಿಗೆ ಮೊನ್ನೆ 29 ತುಂಬಿತು, ವಿಷ್ಣು 46ಕ್ಕೆ ಕಾಲಿಟ್ಟರು. ರಮೇಶ್‌ಗೆ 34. ಅವರು ಈ ಬಾರಿ ಅದನ್ನು ಆಚರಿಸಲಿಲ್ಲ. ಯಾಕೆಂದರೆ ಊರಲ್ಲಿರಲಿಲ್ಲ. ಮೊದಲು ಕೆಲಸ, ನಂತರ ಹಬ್ಬ ಎನ್ನುವ ನಟನೀತಿ.

ಅಂದಹಾಗೆ ಶ್ರುತಿಯದ್ದು ಇದು ಎಷ್ಟನೇ ಹುಟ್ಟುಹಬ್ಬ? ಕ್ಷಮಿಸಿ, ಹುಡುಗಿಯರ ವಯಸ್ಸು ಕೇಳುವಂತಿಲ್ಲ! ಅಷ್ಟೊಂದು ಕುತೂಹಲವಿದ್ದರೆ ಮಹೇಂದರ್‌ರನ್ನು ಕೇಳಿ.

ಕಳೆದ ವರ್ಷ ವಿಷ್ಣು ಹುಟ್ಟುಹಬ್ಬವನ್ನು ಅವರ ಅಭಿಮಾನಿಗಳು ಅದ್ದೂರಿಯಾಗಿ ಚಿತ್ರದುರ್ಗದಲ್ಲಿ ಆಚರಿಸಿದ್ದರು. ಅದಕ್ಕೆ ಕಾರಣವೂ ಇತ್ತು. ವಿಷ್ಣು ವೃತ್ತಿಬದುಕಿಗೆ 25 ವರ್ಷ ತುಂಬಿದ ಸಂದರ್ಭವದು. ಈ ವರ್ಷ ತಾಯಿಯ ಅನಾರೋಗ್ಯದಿಂದಾಗಿ ವಿಷ್ಣುಗೆ ಹಬ್ಬ ಬೇಡವೆನಿಸಿತಂತೆ. ಹಾಗೆ ನೋಡಿದರೆ ತಾರೆಯರು ತಮ್ಮ ಖರ್ಚಲ್ಲಿ ಬರ್ತ್‌ಡೇ ಆಚರಿಸುವ ಸಂಪ್ರದಾಯ ಇಲ್ಲಿಲ್ಲ. ಶಿವರಾಜ್‌ಕುಮಾರ್ ಹುಟ್ಟುಹಬ್ಬವನ್ನು ಅವರ ಅಭಿಮಾನಿಗಳು ಶಿವರಾಜ್ ಮನೆಯಲ್ಲೇ ಆಚರಿಸುತ್ತಾರೆ. ಮಿಕ್ಕವರು ಯಾರನ್ನೂ ಕರೆಯುವ ಗೋಜಿಗೆ ಹೋಗೋಲ್ಲ.

# ಸಂಭ್ರಮದಲ್ಲಿ ಬಸಂತ್

**ಬಸಂತ್ ಹುಟ್ಟುಹಬ್ಬದ ಸಂಭ್ರಮ ಇನ್ನೊಂದು ಸಂಗತಿಯನ್ನು ಸ್ಪಷ್ಟವಾಗಿ ಹೇಳುತ್ತದೆ. ಚಿತ್ರೋದ್ಯಮ ಈಗ ಉಸಿರಾಡುತ್ತಿರುವುದು ಇವರಂಥ ನಾಲ್ಕೈದು ಫೈನಾನ್ಸಿಯರ್‌ಗಳಿಂದ. ಈ ಹಿಂದೆ ಸ್ಟಾರ್‌ಗಳ ನೆರಳಿನಂತೆ ಸುತ್ತಾಡುತ್ತಿದ್ದ ನಿರ್ಮಾಪಕರು ಈಗ ಫೈನಾನ್ಸಿಯರ್‌ಗಳ ಕೃಪಾಕಟಾಕ್ಷಕ್ಕೆ ಹಾತೊರೆಯುತ್ತಿದ್ದಾರೆ.**



ತಮಾಷೆಯೆಂದರೆ ಸ್ಟಾರ್‌ಗಳ ಕಣ್ಣುಕೆಂಪಾಗುವ ರೀತಿಯಲ್ಲಿ ಸೆಪ್ಟೆಂಬರ್ 30ಕ್ಕೆ ಇನ್ನೊಂದು ಹುಟ್ಟುಹಬ್ಬ ಬಾಲಿವುಡ್ ಶೈಲಿಯಲ್ಲಿ ನಡೆಯಿತು. ಅದು ಮಾಜಿನಟ, ಹಾಲಿ ಫೈನಾನ್ಸಿಯರ್ ಬಸಂತಕುಮಾರ್ ಪಾಟೀಲ್ ಅವರ ಹುಟ್ಟುಹಬ್ಬ. ರಮಣಶ್ರೀ ಕಂಫರ್ಟ್ಸ್ ಹೋಟೆಲ್‌ನಲ್ಲಿ ನಡೆದ ಈ ಸಮಾರಂಭದಲ್ಲಿ ಇಡೀ ಕನ್ನಡ ಚಿತ್ರೋದ್ಯಮವೇ ಹಾಜರಿತ್ತು. ಅಫ್‌ಕೋರ್ಸ್ ಸ್ಟಾರ್‌ಗಳ ಸಂಖ್ಯೆ ಕಡಿಮೆಯಿತ್ತು. ಪಾಟೀಲ್‌ಗೆ ಅಂದು 50 ತುಂಬಿತು. ಇನ್ನೊಬ್ಬ ಫೈನಾನ್ಸಿಯರ್ ಕಮಲಾಕರ್ ಅವರದ್ದೂ ಅಂದೇ ಜನ್ಮದಿನ, ಅವರಿಗೂ 50. ಇವರಿಬ್ಬರೂ ಉತ್ತರ ಕರ್ನಾಟಕದವರು. ಈ ತನಕ ಬೆಂಗಳೂರಿಗಷ್ಟೇ ಸೀಮಿತವಾಗಿದ್ದ ಕನ್ನಡ ಚಿತ್ರೋದ್ಯಮದಲ್ಲಿ ಈಗ ಇವರಿಬ್ಬರು ತಲೆಯೆತ್ತಿ ನಿಂತಿರುವುದು ಸಣ್ಣ ಸಂಗತಿಯೇನಲ್ಲ.

ಬಸಂತ್ ಹುಟ್ಟುಹಬ್ಬದ ಸಂಭ್ರಮ ಇನ್ನೊಂದು ಸಂಗತಿಯನ್ನು ಸ್ಪಷ್ಟವಾಗಿ ಹೇಳುತ್ತದೆ. ಚಿತ್ರೋದ್ಯಮ ಈಗ ಉಸಿರಾಡುತ್ತಿರುವುದು ಇವರಂಥ ನಾಲ್ಕೈದು ಫೈನಾನ್ಸಿಯರ್‌ಗಳಿಂದ. ಈ ಹಿಂದೆ ಸ್ಟಾರ್‌ಗಳ ನೆರಳಿನಂತೆ ಸುತ್ತಾಡುತ್ತಿದ್ದ ನಿರ್ಮಾಪಕರು ಈಗ ಫೈನಾನ್ಸಿಯರ್‌ಗಳ ಕೃಪಾಕಟಾಕ್ಷಕ್ಕೆ ಹಾತೊರೆಯುತ್ತಿದ್ದಾರೆ. ಯಾಕೆಂದರೆ ಇವರು ಮನಸ್ಸು ಮಾಡಿದರಷ್ಟೇ ಚಿತ್ರನಿರ್ಮಾಣ ಸಾಧ್ಯ. ಇನ್ನೊಂದೆಡೆ ನಟ-ನಟಿಯರೂ ಈಗ ನಿರ್ಮಾಪಕರನ್ನು ಬಿಟ್ಟು ಫೈನಾನ್ಸಿಯರ್‌ಗಳತ್ತ ಗೌರವದಿಂದ ನೋಡುತ್ತಿದ್ದಾರೆ. ಹೀಗೆ ನಿರ್ಮಾಪಕನ ಸ್ಥಾನಮಾನಕ್ಕೆ ಚ್ಯುತಿ ಬಂದಿರುವುದು ಆರೋಗ್ಯಕರ ಬೆಳವಣಿಗೆಯೇನಲ್ಲ ಎನ್ನುವುದನ್ನು ಒಪ್ಪಬಹುದಾದರೂ, ಸದ್ಯದ ಪರಿಸ್ಥಿತಿಯಲ್ಲಿ ಇದು ಅನಿವಾರ್ಯ ಎನ್ನುವುದೂ ನಿಜ.

ಸ್ಟಾರ್‌ಗಳ ಹೆಸರಿನ ಮೇಲೆ ಚಿತ್ರ ಓಡುತ್ತಿಲ್ಲ, ಹೊಸಬರನ್ನು ಹಾಕಿದರೆ ಬಂಡವಾಳ ಹೂಡುವುದಕ್ಕೆ ಯಾರೂ ಸಿದ್ಧರಿಲ್ಲ, ಅನುಭವಿ ನಿರ್ಮಾಪಕರು ಚಿತ್ರ ನಿರ್ಮಾಣದಿಂದ ದೂರ ಸರಿದಿದ್ದಾರೆ, ಹೊಸ ನಿರ್ಮಾಪಕರಿಗೆ ಫೈನಾನ್ಸಿಯರ್ ನೆರವಿಲ್ಲದೇ ಚಿತ್ರನಿರ್ಮಾಣ ಸಾಧ್ಯವಿಲ್ಲ. ಇಂಥ ಸಂದರ್ಭದಲ್ಲಿ ಬಸಂತ್‌ರಂಥ ಉದ್ಯಮಿಗಳು ನಿರ್ಮಾಪಕರ ಪಾಲಿಗೆ ದೇವರಂತೆ ಕಾಣಿಸುವುದರಲ್ಲಿ ಆಚ್ಚರಿಯೇನಿದೆ? ವರ್ಷಕ್ಕೆ ಕನಿಷ್ಟ 20 ಚಿತ್ರಗಳಿಗಾದರೂ ಹಣ ನೀಡುತ್ತಿದ್ದಾರೆ. ಇದರಲ್ಲಿ ವಾಪಸ್ ಬಂದಿದ್ದು ಕಡಿಮೆ ಎನ್ನುವುದನ್ನು ಅವರೇ ಒಪ್ಪಿಕೊಂಡಿದ್ದಾರೆ. ಹಾಗಿದ್ದೂ ಯಾಕೆ ಮಮಕಾರ ಎಂದರೆ ಸಿನಿಮಾ ಬಗ್ಗೆ ತನಗಿರುವ ಕಳಕಳಿ ಎನ್ನುತ್ತಾರೆ ಬಸಂತ್. ಈ ಮಾತನ್ನು ಒಪ್ಪುವುದು ಸ್ವಲ್ಪ ಕಷ್ಟ. ■

# 46ಕ್ಕೆ ಕಾಲಿಟ್ಟ ವಿಷ್ಣು

**ಕಳೆದ ವರ್ಷ ವಿಷ್ಣು ಹುಟ್ಟುಹಬ್ಬವನ್ನು ಅವರ ಅಭಿಮಾನಿಗಳು ಅದ್ದೂರಿಯಾಗಿ ಚಿತ್ರದುರ್ಗದಲ್ಲಿ ಆಚರಿಸಿದ್ದರು. ಅದಕ್ಕೆ ಕಾರಣವೂ ಇತ್ತು. ವಿಷ್ಣು ವೃತ್ತಿಬದುಕಿಗೆ 25 ವರ್ಷ ತುಂಬಿದ ಸಂದರ್ಭವದು. ಈ ವರ್ಷ ತಾಯಿಯ ಅನಾರೋಗ್ಯದಿಂದಾಗಿ ವಿಷ್ಣುಗೆ ಹಬ್ಬ ಬೇಡವೆನಿಸಿತಂತೆ.**



# ಹೇಳೋದೊಂದು ಮಾಡೋದೊಂದು




ನಾನು ಮಾತೃಭೂಮಿಯ ಮೇಲೆ ಪ್ರೀತಿ ಇರಬೇಕು ಅಂತಾ ನಿಮಗೆ ಹೇಳ್ತಾ ಇರಲಿಲ್ಲವಾ? ಅದಕ್ಕಾಗಿಯೇ ನಾನು ಈ ಭೂಮಿಯ ಮೇಲಿನ ಪ್ರೀತಿಗಾಗಿ ನನ್ನ ಹೆಸರಿಗೆ ಹಚ್ಚಿಕೊಂಡದ್ದು.



ದೇಶದ ಉದ್ಧಾರಕ್ಕಾಗಿಯೇ ಅಲ್ಲವೇ ನಾವು ವಿಶ್ವ ಬ್ಯಾಂಕಿನಿಂದ ಸಾಲ ತರೋದು..... ಸ್ವಿಸ್ ಬ್ಯಾಂಕಿನಲ್ಲಿ ಖಾತೆ ತಗೆದದ್ದು ಮಾತ್ರ ನಮ್ಮ ಉದ್ಧಾರಕ್ಕಾಗಿ ಅಷ್ಟೇ..




ದೇಶಕ್ಕಾಗಿ ಎಂತಹ ತ್ಯಾಗಕ್ಕೂ ಸಿದ್ಧರಾಗಬೇಕು ಅಂತಾ ಹೇಳಿದ್ದು ನಿಮಗೆ ಮಾತ್ರ.. ಅದು ನನಗೆ ಅನ್ವಯಿಸೋದಿಲ್ಲ..

BISILA BADUKU Kannada Monthly NOVEMBER 1998 RNI No. 67406 / 97 Regd. BGW / 394